481

॥ ಶ್ರೀವೀತರಾಗಾಯ ನಮಃ ॥

ಶ್ರೀವಸುನಂದ್ಯಾಚಾರ್ಯಕೃತ

# ಶ್ರಾವಕಾಚಾರ.

ಕ್ರಯ ೧ ರೂ.

॥ ಶ್ರೀ ವೀತರಾಗಾಯ ನಮಃ ॥

## ಶ್ರೀವಸುನಂದ್ಯಾಚಾರ್ಯಕೃತ

# ಶ್ರಾವಕಾಚಾರ.

ಈ ಗ್ರಂಥವನ್ನು

ಅಣ್ಣಪ್ಪಾ ಚೌಗುಲೆ ವಕೀಲ ಬೆಳಗಾವಿ,

ಇವರು ತಮ್ಮ

"ಶ್ರೀಮಹಾವೀರ" ಮುದ್ರಣಾಲಯದಲ್ಲಿ ಮುದ್ರಿಸಿ

ಪ್ರಸಿದ್ಧಮಾಡಿದರು.

———:000:———

ಶ್ರೀವೀರನಿರ್ವಾಣ ಶಕ ೨೪೩೭.

ಶಕೆ ೧೮೩೩.] [ಸನ್ನ ೧೯೧೧.

ಕ್ರಯ ೧ ರು.



# ಪೀಠಿಕೆ.

ಈ ಗ್ರಂಥಕರ್ತರಾದ ಶ್ರೀವಸುನಂದೀ ಆಚಾರ್ಯರು, ಸ್ವಮತ ಪರಮತ ಪಾರಂಗತರಾದ್ದರಿಂದ, ಇವರಿಗೆ ಸೈದ್ಧಾಂತಿಕ ಚಕ್ರವರ್ತಿಯೆಂಬ ಬಿರುದು ಪ್ರಾಪ್ತವಾಗಿದೆ. ಇವರು ಈ ಪುಸ್ತಕದ ಕೊನೆಯಲ್ಲಿ ಬರೆದಂತೆ ಶ್ರೀನೇಮಿಚಂದ್ರ ಸೈದ್ಧಾಂತಿಕ ಚಕ್ರವರ್ತಿಗಳ ಶಿಷ್ಯರೆಂದು ಗೊತ್ತಾಗುತ್ತದೆ. ಈ ಗ್ರಂಥದ ಕೊನೆಯಲ್ಲಿ ಇವರು ಗುರುಪರಂಪರೆಯನ್ನು ವರ್ಣಿಸಿದ ಮೇಲಿಂದ ಶ್ರೀಕುಂದಕುಂದ ಆಚಾರ್ಯರ ಶಿಷ್ಯರು ಶ್ರೀನಯನಂದೀ ಆಚಾರ್ಯರು ಆಗಿದ್ದರೆಂದು ತಿಳಿಯುತ್ತದೆ. ಶ್ರೀನಯನಂದೀ ಸ್ವಾಮಿಯವರು ಸೈದ್ಧಾಂತಿಕ ದೇವರಾದ ಶ್ರೀನೇಮಿಚಂದ್ರರ ಗುರುಗಳೆಂದು ಉಲ್ಲೇಖಿಸಲ್ಪಟ್ಟದೆ. ಶ್ರೀನೇಮಿಚಂದ್ರರು ಶಾಲಿವಾಹನ ಶಕ ೬೦೦ ರ ಸುಮಾರಕ್ಕೆ ದಕ್ಷಿಣ ಮಧುರೆಯ ಅರಸನಾದ ರಾಜಮಲ್ಲನ ಮುಖ್ಯ ಪ್ರಧಾನನಾದ ಚಾಮುಂಡರಾಯನ ಗುರುಗಳಾಗಿದ್ದರೆಂದೂ, ಚಾಮುಂಡರಾಯನು ಶ್ರೀಗೋಮಟೇಶ್ವರಸ್ವಾಮಿಯ ಪ್ರತಿಷ್ಠೆಯನ್ನು ಶ್ರೀನೇಮಿಚಂದ್ರ ದೇವರಿಂದ ಮಾಡಿಸಿದನೆಂದೂ ಶಿಲಾಲೇಖಗಳಿಂದಲೂ ಪುರಾಣಗಳಿಂದಲೂ ಕಂಡುಬರುತ್ತದೆ.

ಸಿದ್ಧಾಂತಾಂಭೋಧಿಚಂದ್ರಃ ಪ್ರಣುತಪರಮದೇಶೀಗಣಾಂಭೋಧಿಚಂದ್ರಃ ।
ಸ್ಯಾದ್ವಾದಾಂಭೋಧಿಚಂದ್ರಃ ಪ್ರಕಟಿತನಯನಿಕ್ಷೇಪವಾರಾಶಿಚಂದ್ರಃ ॥
ಏನಶ್ಚಕ್ರೌಘಚಂದ್ರಃ ಪದನುತಕಮಲವ್ರಾತಚಂದ್ರಃ ಪ್ರಶಸ್ತೋ ।
ಜೀಯಾಜ್‌ಜ್ಞಾನಾಬ್ಧಿಚಂದ್ರೋ ಮುನಿಪಕುಲವಿಯಚ್ಚಂದ್ರಮಾ ನೇಮಿ-
ಚಂದ್ರಃ ॥ ೬೨ ॥

ಸಿದ್ಧಾಂತಾಮೃತಸಾಗರಂ ಸ್ವಮತಿಮಂಥಕ್ಷ್ಮಾಭೃದಾಲೋಡ್ಯ ಯೋ ।
ಲೇಭೇಭೀಷ್ಟಫಲಪ್ರದಾನಪಿ ಸದಾ ದೇಶೀಗಣಾಗ್ರೇಸರಃ ॥
ಶ್ರೀಮದ್ಗೋಮಟಲಬ್ಧಿಸಾರವಿಲಸತ್ತ್ರೈಲೋಕ್ಯಸಾರಾಮರ- ।
ಕ್ಷ್ಮಾಜಶ್ರೀಸುರಧೇನುಚಿಂತಿತಮಣೀನ್ ಶ್ರೀನೇಮಿಚಂದ್ರೋ ಮುನಿಃ ॥ ೬೩ ॥

ಕಲ್ಕ್ಯಬ್ದೇ ಷಟ್‌ಶತಾಖ್ಯೇ ವಿನುತವಿಭವಸಂವತ್ಸರೇ ಮಾಸಿ ಚೈತ್ರೇ ।
ಪಂಚಮ್ಯಾಂ ಶುಕ್ಲಪಕ್ಷೇ ದಿನಮಣಿದಿವಸೇ ಕುಂಭಲಗ್ನೇ ಸುಯೋಗೇ ॥
ಸೌಭಾಗ್ಯೇ ಮಸ್ತನಾಮ್ನಿ ಪ್ರಕಟಿತಭಗಣೇ ಸುಪ್ರಶಸ್ತಾಂ ಚಕಾರ ।
ಶ್ರೀಮಚ್ಚಾಮುಂಡರಾಜೋ ಬೆಲ್ಗುಲನಗರೇ ಗೋಮಟೇಶಪ್ರತಿಷ್ಠಾಮ್ ॥

(ಶ್ರೀಬಾಹುಬಲಿಚರಿತ್ರ) ಶ್ಲೋಕ ೬೨, ೬೩, ೫೫.

ಶ್ರೀನೇಮಿಚಂದ್ರಸ್ವಾಮಿಯವರ ಕಾಲನಿರ್ಣಯದಿಂದ ಅವರ ಶಿಷ್ಯರಾದ ಶ್ರೀವಸುನಂದಿ ಆಚಾರ್ಯರಾದರೂ ಅದೇ ಸುಮಾರಕ್ಕೆ ಆಗಿರಬಹುದೆಂದು ಊಹಿಸಬಹುದು. ಆದರೆ, ಶ್ರೀನೇಮಿಚಂದ್ರದೇವರ ಮತ್ತು ಶ್ರೀವಸುನಂದಿಸ್ವಾಮಿಯವರ ಮಾಗಧೀ ಭಾಷಾಸರಣಿಯನ್ನು ಚನ್ನಾಗಿ ಪರೀಕ್ಷಿಸಿ ನೋಡಿದರೆ, ಅವರಿಬ್ಬರ ಕಾಲದಲ್ಲಿ ಇನ್ನೂರು ಮುನ್ನೂರು ವರ್ಷಗಳ ಅಂತರವಿರಬಹುದೆಂದು ಕಂಡುಬರುತ್ತದೆ. ಶ್ರೀವಸುನಂದೀ ಆಚಾರ್ಯರ ಮಾಗಧೀಭಾಷೆಯು ಅರ್ವಾಚೀನ ಪದ್ಧತಿಯನ್ನು ಹೋಲುತ್ತದೆ. ಶ್ರೀನೇಮಿಚಂದ್ರರ ಭಾಷೆಯಂತೆ ಗೌರವವುಳ್ಳ ಪ್ರಾಚೀನ ಪದ್ಧತಿಯನ್ನು ಅನುಸರಿಸುವದಿಲ್ಲ. ಈ ಸಂಗತಿಯು ಮಾಗಧೀಭಾಷೆಯ ಜ್ಞಾನಿಗಳಾದ ನಮ್ಮ ವಾಚಕರಿಗೆ ಸಹಜವಾಗಿ ಕಂಡುಬರುವದು. ಆದರೂ ಶ್ರೀವಸುನಂದೀ ಸ್ವಾಮಿಯವರ ಯೋಗ್ಯತೆಯು ಬಹಳೇ ದೊಡ್ಡದಿರುವದು. ಅವರು ರಚಿಸಿದ ಶ್ರಾವಕಾಚಾರವು ಪ್ರಮಾಣಗ್ರಂಥವಿದ್ದು, ಈಗಿನಕಾಲಕ್ಕೆ ಉಪಲಬ್ಧವಾಗಿದ್ದ ಶ್ರಾವಕಾಚಾರ ಗ್ರಂಥಗಳಲ್ಲಿ ಇದೊಂದು ಅಮೌಲ್ಯ ರತ್ನವಾಗಿದೆ. ಈ ಗ್ರಂಥದ ಸಂಸ್ಕೃತ ಟೀಕೆಯು ನಮಗೆ ದೊರೆಯಲಿಲ್ಲ. ನಮಗೆ ಉಪಲಬ್ಧವಾದ ಮೂಲಗಾಥೆಗಳಿಂದಲೂ ಪಂಡಿತ ಕಲ್ಲಪ್ಪಾ ನಿಟವೆ ಇವರು ಬಾಲಬೋಧಲಿಪಿಯಲ್ಲಿ ಮುದ್ರಿಸಿದ ಪ್ರತಿಯಿಂದಲೂ ನಮ್ಮ ಅಲ್ಪಮತಿಯಿಂದ ಪರಿಶೋಧಿಸಿ, ಸುಲಭವಾದ ಕನ್ನಡಭಾಷೆಯಲ್ಲಿ ಭಾಷಾಂತರಿಸಿ, ನಮ್ಮ ಕರ್ನಾಟಕ ಜೈನಬಂಧುಗಳ ಸ್ವಾಧ್ಯಾಯದ ದೆಶೆಯಿಂದ ನಾವು ಈ ಗ್ರಂಥವನ್ನು ಮುದ್ರಿಸಿ, ಪ್ರಸಿದ್ಧಮಾಡಿರುತ್ತೇವೆ. ವಾಚಕಮಹಾಶಯರು ಇದರೊಳಗಿನ ದೋಷಗಳನ್ನು ನಮಗೆ ತಿಳುಹಿಸಿದಲ್ಲಿ, ಕೃತಜ್ಞತೆಯಿಂದ ಅವುಗಳನ್ನು ನಾವು ಮುಂದಿನ ಆವೃತ್ತಿಯಲ್ಲಿ ದ್ದುವೆವು.

ಬೆಳಗಾವಿ.
ತಾ॥ ೧-೧-೧೯೧೧.

ಅಣ್ಣಪ್ಪಾ ಚೌಗುಲೆ.



# ಅನುಕ್ರಮಣಿಕೆ.

॥ ಓಂ ನಮಃ ಸಿದ್ಧೇಭ್ಯಃ ॥

ಶ್ರೀವಸುನಂದ್ಯಾಚಾರ್ಯಕೃತ

# ಶ್ರಾವಕಾಚಾರವು.

## ಮಂಗಲಾಚರಣವು.

ಸುರವಇತಿರೀಟಮಣಿಕಿರಣವಾರಿಧಾರಾಹಿಸಿತ್ತಪಯಕಮಳಂ ॥
ವರಸಯಳವಿಮಳಕೇವಳಪಯಾಸಿಯಾಸೇಸಸತ್ತೆಚ್ಚಂ ॥ ೧ ॥
ಸಾಯಾರೋ ಅಣಯಾರೋ ಭವಿಯಾಣಂ ಜೇಣ ದೇಸಿಓ ಧಮ್ಮೋ ॥
ಣಮಿಊಣ ತಂ ಜಿಣಂದಂ ಸಾವಯಧಮ್ಮಂ ಪರೂವೇಮೋ ॥ ೨ ॥

ಸುರಪತಿತಿರೀಟಮಣಿಕಿರಣವಾರಿಧಾರಾಭಿಷಿಕ್ತಪದಕಮಲಮ್ ॥
ವರಸಕಲವಿಮಲಕೇವಲಪ್ರಕಾಶಿತಾಶೇಷಸತ್ತತ್ತ್ವಮ್ ॥
ಸಾಗಾರೋನಗಾರೋ ಭವ್ಯಾನಾಂ ಯೇನ ದೇಶಿತೋ ಧರ್ಮಃ ॥
ನತ್ವಾ ತಂ ಜಿನೇಂದ್ರಂ ಶ್ರಾವಕಧರ್ಮಂ ಪ್ರರೂಪಯಾಮಿ ॥

ಅರ್ಥ:—ಯಾವ ಪುರುಷನ ಚರಣಗಳೆಂಬ ಕಮಲಗಳು ದೇವೇಂದ್ರನ ಕಿರೀಟದಲ್ಲಿದ್ದ ರತ್ನಕಿರಣಕ್ಕೆ ಸಮವೆನಿಪ ಜಲಧಾರೆಯಿಂದ ತೊಳೆಯಿಸಲ್ಪಡುತ್ತವೆಯೋ, ಯಾವನು ಉತ್ತಮವಾಗಿಯೂ ನಿರ್ಮಲವಾಗಿಯೂ ಸಂಪೂರ್ಣವಾಗಿಯೂ ಇದ್ದ ಕೇವಲಜ್ಞಾನದಿಂದ ಭವ್ಯಜೀವಗಳಿಗೆ ಸಪ್ತತತ್ವಗಳನ್ನು ತಿಳಿಸಿ, ಸಾಗಾರ (ಶ್ರಾವಕಧರ್ಮ), ಅನಗಾರ (ಯತಿಧರ್ಮ) ಧರ್ಮವನ್ನು ಉಪದೇಶ ಮಾಡಿರುತ್ತಾನೋ, ಆ ಶ್ರೀಜಿನೇಂದ್ರಸ್ವಾಮಿಗೆ ವಂದನೆಯನ್ನು ಮಾಡಿ, ನಾನು (ವಸುನಂದೀ) ಶ್ರಾವಕರ ಧರ್ಮವನ್ನು ಹೇಳುತ್ತೇನೆ.

## ಗ್ರಂಥಕರ್ತರ ನಿರಭಿಮಾನತೆ.

ವಿಉಲಗಿರಿಪವ್ವಏ ಯಂ ಇಂದಭೂಇಣಾ ಸೇಣಿಯಸ್ಸ ಜಹ ದಿಟ್ಠಂ ॥
ತಹ ಗುರುಪರಿವಾಡೀಏ ಭಣಿಜ್ಜಮಾಣಂ ಣಿಸಾಮೇಹ ॥ ೩ ॥

ವಿಪುಲಗಿರಿಪರ್ವತೇ ಯದಿಂದ್ರಭೂತಿನಾ ಶ್ರೇಣಿಕಸ್ಯ ಯಥಾ ದಿಷ್ಟಮ್ ॥
ತಥಾ ಗುರುಪರಿಪಾಟ್ಯಾ ಭಣ್ಯಮಾನಂ ನಿಶಮ್ಯತ ॥

ಅರ್ಥ:—ವಿಪುಲಾಚಲ ಪರ್ವತದಲ್ಲಿ (ಶ್ರೀಮಹಾವೀರಸ್ವಾಮಿಯವರ ಸಮವಸರಣದಲ್ಲಿ) ಇಂದ್ರಭೂತಿಯು (ಗೌತಮಗಣಧರನು) ಶ್ರೇಣಿಕನೆಂಬ ಅರಸನಿಗೆ ಹೇಳಿದ

ಧರ್ಮವನ್ನು (ಗುರುಗಳ ಪರಂಪರೆಯಿಂದ ಕೇಳಿದಂತೆ) ಹೇಳುತ್ತೇನೆ, ಕೇಳಿರಿ.

## ೧೧ ಪ್ರತಿಮೆಗಳು.

ದಂಸಣವಯಸಾಮಾಇಯ ಪೋಸಹಸಚಿತ್ತರಾಇಭುತ್ತಿ ಯ ॥
ಬಮ್ಹಾರಂಭಪರಿಗ್ಗಹ ಅಣುಮದಮುದ್ದಿಠ್ಠ ದೇಸವಿರದಮ್ಹಿ ॥ ೪ ॥

ದರ್ಶನವ್ರತಸಾಮಾಯಿಕಪ್ರೋಷಧಸಚಿತ್ತರಾತ್ರಿಭುಕ್ತಿಶ್ಚ ॥
ಬ್ರಹ್ಮಾರಂಭಪರಿಗ್ರಹಾನುಮತಮುದ್ದಿಷ್ಟಂ ದೇಶವಿರತೇ ॥

ಅರ್ಥ:—ದರ್ಶನಿಕ, ವ್ರತಿಕ, ಸಾಮಾಯಿಕ, ಪ್ರೋಷಧೋಪವಾಸಿ, ಸಚ್ಚಿತ್ತವಿರತ, ರಾತ್ರಿಭೋಜನತ್ಯಾಗಿ, ಬ್ರಹ್ಮಚಾರಿ, ಆರಂಭವಿರತ, ಪರಿಗ್ರಹವಿರತ, ಅನುಮತಿವಿರತ, ಉದ್ದಿಷ್ಟವಿರತ ಹೀಗೆ ಹನ್ನೊಂದು ವಿಧವಾಗಿ ಶ್ರಾವಕರ ನೆಲೆಗಳು (ಪ್ರತಿಮೆಗಳು) ಇರುತ್ತವೆ. ಈ ನೆಲೆಗಳು ದೇಶವಿರತವೆಂಬ ೫ನೇ ಗುಣಸ್ಥಾನದಲ್ಲಿ ಎಣಿಸಲ್ಪಡುತ್ತವೆ.

## ಸಮ್ಯಕ್ತ್ವದ ಕಾರಣ.

ಏಯಾರಸಠಾಣಾಈ ಸಮ್ಮತ್ತವಿವಜ್ಜಿಯಸ್ಸ ಜೀವಸ್ಸ ॥
ಜಮ್ಹಾ ಣ ಸಂತಿ ತಮ್ಹಾ ಸಮ್ಮತ್ತಂ ಸುಣುಹ ಬೊಚ್ಛಾಮಿ ॥ ೫ ॥

ಏಕಾದಶಸ್ಥಾನಾನಿ ಸಮ್ಯಕ್ತ್ವವಿವರ್ಜಿತಸ್ಯ ಜೀವಸ್ಯ ॥
ಯಸ್ಮಾನ್ನ ಸಂತಿ ತಸ್ಮಾತ್ಸಮ್ಯಕ್ತ್ವಂ ಶ್ರುಣುತ ವಕ್ಷ್ಯಾಮಿ ॥

ಅರ್ಥ:—ಈ ಹನ್ನೊಂದು ನೆಲೆಗಳು ಸಮ್ಯಕ್ತ್ವ ರಹಿತವಾದ ಜೀವಿಗೆ ಇರುವದಿಲ್ಲ. ಆದದರಿಂದ ಸಮ್ಯಕ್ತ್ವದ ಸ್ವರೂಪವನ್ನು ಹೇಳುತ್ತೇನೆ ಕೇಳಿರಿ.

## ಸಮ್ಯಕ್ತ್ವದ ಸ್ವರೂಪ.

ಅತ್ತಾಗಮತಚ್ಚಾಣಂ ಜಂ ಸದ್ದಹಣಂ ಸುಣಿಮ್ಮಳಂ ಹೋದಿ ॥
ಸಂಕಾಇದೋಸರಹಿಯಂ ತಂ ಸಮ್ಮತ್ತಂ ಮುಣೇಯವ್ವಂ ॥ ೬ ॥

ಆಪ್ತಾಗಮತತ್ತ್ವಾನಾಂ ಯಚ್ಛ್ರದ್ಧಾನಂ ಸುನಿರ್ಮಲಂ ಭವತಿ ॥
ಶಂಕಾದಿದೋಷರಹಿತಂ ತತ್ಸಮ್ಯಕ್ತ್ವಂ ಜ್ಞಾತವ್ಯಮ್ ॥

ಅರ್ಥ:—ಆಪ್ತ, ಆಗಮ ಮತ್ತು ತತ್ವ ಇವುಗಳಲ್ಲಿ ನಿರ್ಮಲವಾದ ಮತ್ತು ಸಂಶಯಾದಿ ದೋಷರಹಿತವಾದ ಶ್ರದ್ಧಾನವು ಸಮ್ಯಕ್ತ್ವವೆಂದು ತಿಳಿಯಬೇಕು.

## ಆಪ್ತಾದಿಗಳ ಸ್ವರೂಪ.

ಅತ್ತಾ ದೋಸವಿಮುಕ್ಕೋ ಪುವ್ವಾಪರದೋಸವಜ್ಜಿಯಂ ವಯಣಂ ॥
ತಚ್ಚಾಇ ಜೀವದವ್ವಾದಿಯಾಇ ಸಮಯಾಹಿ ಣೇಯಾಇ ॥ ೭ ॥

ಆಪ್ತೋ ದೋಷವಿಮುಕ್ತಃ ಪೂರ್ವಾಪರದೋಷವರ್ಜಿತಂ ವಚನಮ್ ॥
ತತ್ತ್ವಾನಿ ಜೀವದ್ರವ್ಯಾದಿಕಾನಿ ಸಮಯೋದ್ಧಿ ಜ್ಞೇಯಾನಿ ॥

ಅರ್ಥ:—ಹದಿನೆಂಟು ದೋಷರಹಿತನಾದವನೇ ಆಪ್ತನು. ಪೂರ್ವಾಪರ ವಿರೋಧವಿಲ್ಲದ್ದೇ ವಚನವು ಅಂದರೆ ಆಗಮವು. ಜೀವಾದಿದ್ರವ್ಯಗಳೇ ತತ್ವಗಳು. ಈ ಪ್ರಕಾರ ಜಿನಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಟ್ಟಿರುತ್ತದೆ.

## ೧೮ ದೋಷಗಳ ಹೆಸರು.

ಛುಹತಣ್ಹಾಭಯದೇಸೋ ರಾಓ ಮೋಹೋ ಜರಾ ರುಜಾ ಚಿಂತಾ ॥
ಮಿಚ್ಚು ಖೇಓ ಸೇಓ ಅರಇ ಮಓ ವೀಹಓ ಜಮ್ಮಂ ॥ ೮ ॥
ಣಿದ್ದಾ ತಹಾ ವಿಸಾಓ ದೋಸಾ ಏದೇಹಿ ವಜ್ಜಿಓ ಅತ್ತಾ ॥
ವಯಣಂ ತಸ್ಸ ಪಮಾಣಂ ಸುತ್ತತ್ಥಪರೂಪಯಂ ಜಮ್ಹಾ ॥ ೯ ॥

ಕ್ಷುತ್ತೃಷ್ಣಾಭಯದ್ವೇಷಾ ರಾಗೋ ಮೋಹೋ ಜರಾ ರುಜಾ ಚಿಂತಾ ॥
ಮೃತ್ಯುಃ ಖೇದಃ ಸ್ವೇದೋರತಿರ್ಮದೋ ವಿಭ್ರಮೋ ಜನ್ಮ ॥
ನಿದ್ರಾ ತಥಾ ವಿಷಾದೋ ದೋಷಾ ಏತೈರ್ವರ್ಜಿತ ಆಪ್ತಃ ॥
ವಚನಂ ತಸ್ಯ ಪ್ರಮಾಣಂ ಸೂತ್ರಾರ್ಥಪ್ರರೂಪಕಂ ಯಸ್ಮಾತ್ ॥

ಅರ್ಥ:—ಹಸಿವೆ, ನೀರಡಿಕೆ, ಅಂಜಿಕೆ, ದ್ವೇಷ, ಪ್ರೀತಿ, ಮೋಹ, ಮುಪ್ಪು, ಬೇನೆ, ಚಿಂತೆ, ಸಾವು, ದುಃಖ, ಬೆವರು, ಕಾಮಸೇವನೆ, ಗರ್ವ, ಆಶ್ಚರ್ಯ, ಜನನ, ನಿದ್ದೆ ಮತ್ತು ವಿಷಾದ ಈ ಹದಿನೆಂಟು ದೋಷಗಳಿಂದ ಮುಕ್ತನಾದವನೇ ಆಪ್ತನೆಂದು ತಿಳಿಯಬೇಕು. ಸೂತ್ರಾರ್ಥವನ್ನು ಪ್ರತಿಪಾದಿಸುವಂಥ ದೋಷರಹಿತರಾದಂಥ ಈ ಆಪ್ತರ ವಚನವು ಪ್ರಮಾಣವು (ಸತ್ಯವಾದದ್ದು).

ಜೀವಾಜೀವಾಸವಬಂಧಸಂವರಣಿಜ್ಜರಾ ತಹಾ ಮೊಖ್ಖೋ ॥
ಏಯಾಇ ಸತ್ತ ತಚ್ಚಾಇ ಸದ್ದಹಣಂ ತಸ್ಸ ಸಮ್ಮತ್ತಂ ॥ ೧೦ ॥

ಜೀವಾಜೀವಾಸ್ರವಬಂಧಸಂವರನಿರ್ಜರಾಸ್ತಥಾ ಮೋಕ್ಷಃ ॥
ಏತಾನಿ ಸಪ್ತ ತತ್ವಾನಿ ಶ್ರದ್ಧಾನಂ ತೇಷಾಂ ಸಮ್ಯಕ್ತ್ವಮ್ ॥

ಅರ್ಥ:—ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರೆ, ಮೋಕ್ಷ ಈ ಪ್ರಕಾರ ಏಳು ತತ್ವಗಳಿರುತ್ತವೆ. ಇವುಗಳಲ್ಲಿ ನಂಬಿಗೆಯನ್ನಿಡುವದೇ ಸಮ್ಯಕ್ತ್ವವು.

## ಜೀವದ್ರವ್ಯದ ವರ್ಣನೆ.

ಸಿದ್ಧಾ ಸಂಸಾರತ್ಥಾ ದುವಿಹಾ ಜೀವಾ ಜಿಣೇಹಿ ಪಣ್ಣತ್ತಾ ॥
ಅಸರೀರಾಣಂತಚಉತ್ಠಯಾಣಿಯಾ ಣಿವ್ವುದಾ ಸಿದ್ಧಾ ॥ ೧೧ ॥

ಸಿದ್ಧಾಃ ಸಂಸಾರಸ್ಥಾ ದ್ವಿವಿಧಾ ಜೀವಾ ಜಿನೈಃ ಪ್ರಣೀತಾಃ ॥
ಅಶರೀರಾ ಅನಂತಚತುಷ್ಟಯಾನ್ವಿತಾ ನಿರ್ವೃತಾಃ ಸಿದ್ಧಾಃ ॥

ಅರ್ಥ:—ಜೀವಗಳಲ್ಲಿ ಮುಕ್ತಜೀವಗಳೆಂತಲೂ, ಸಂಸಾರಿಜೀವಗಳೆಂತಲೂ ಎರಡು ಭೇದಗಳು ಶ್ರೀಜಿನೇಶ್ವರನಿಂದ ಹೇಳಲ್ಪಟ್ಟವೆ. ಇವುಗಳಲ್ಲಿ ಅನಂತದರ್ಶನ ಜ್ಞಾನ-ವೀರ್ಯ-ಸುಖ ಮುಂತಾದವುಗಳಿಂದ ಕೂಡಿದ್ದಾಗಿಯೂ ಜನ್ಮ, ಜರಾ ಮರಣ, ರಹಿತವಾಗಿಯೂ ಇದ್ದ ಜೀವವು ಸಿದ್ಧ ಅಥವಾ ಮುಕ್ತಜೀವವೆನಿಸುತ್ತದೆ.

## ಸಂಸಾರಿ ಜೀವಗಳು.

ಸಂಸಾರತ್ಥಾ ದುವಿಹಾ ಥಾವರತಸಭೇದದೋ ಮುಣೇಯವ್ವಾ ॥
ಪಂಚವಿಹ ಥಾವರಾ ಖಿದಿಜಲಗ್ಗಿವಾಊವಣಪ್ಫಇಣೋ ॥ ೧೨ ॥

ಸಂಸಾರಸ್ಥಾ ದ್ವಿವಿಧಾಃ ಸ್ಥಾವರತ್ರಸಭೇದತೋ ಮಂತವ್ಯಾಃ ॥
ಪಂಚವಿಧಾಃ ಸ್ಥಾವರಾಃ ಕ್ಷಿತಿಜಲಾಗ್ನಿವಾಯುವನಸ್ಪತಯಃ ॥

ಅರ್ಥ:—ಸಂಸಾರಿಜೀವಗಳಲ್ಲಿ ಸ್ಥಾವರ, ತ್ರಸ ಎಂದು ಎರಡು ಭೇದಗಳುಂಟು. ಸ್ಥಾವರದಲ್ಲಿ ಭೂಮಿ, ಜಲ, ಅಗ್ನಿ, ವಾಯು ಮತ್ತು ವನಸ್ಪತಿ ಎಂದು ಐದು ಒಳಭೇದಗಳುಂಟು.

## ಸ್ಥಾವರದ ಭೇದಗಳು.

ಪಜ್ಜತ್ತಾಪಜ್ಜತ್ತಾ ವಾಯರಸುಹುಮಾ ಣಿಗೋಯಣಿಚ್ಚಯರಾ ॥
ಪತ್ತೇಯಪಇಟ್ಠಿಯರಾ ಥಾವರಕಾಯಾ ಅಣೇಯವಿಹಾ ॥ ೧೩ ॥

ಪರ್ಯಾಪ್ತಾಪರ್ಯಾಪ್ತಾ ಬಾದರಸೂಕ್ಷ್ಮಾ ನಿಗೋದ ನಿತ್ಯೇತರಾಃ ॥
ಪ್ರತ್ಯೇಕಪ್ರತಿಷ್ಠಿತೇತರಾಃ ಸ್ಥಾವರಕಾಯಾ ಅನೇಕವಿಧಾಃ ॥

ಅರ್ಥ:—ಪರ್ಯಾಪ್ತ, ಅಪರ್ಯಾಪ್ತ, ಬಾದರ, ಸೂಕ್ಷ್ಮ, ನಿತ್ಯನಿಗೋದ, ಇತರನಿಗೋದ, ಪ್ರತಿಷ್ಠಿತಪ್ರತ್ಯೇಕ, ಅಪ್ರತಿಷ್ಠಿತಪ್ರತ್ಯೇಕ ಹೀಗೆ ಅನೇಕ ವಿಧವಾಗಿ ಸ್ಥಾವರ ಜೀವಗಳಿರುತ್ತವೆ.

## ತ್ರಸದ ಭೇದಗಳು,

ಬಿತಿಚಉಪಂಚೇಂದಿಯಭೇಯದೋ ತಸಾ ಚಉವಿಹಾ ಮುಣೇಯವ್ವಾ ॥
ಪಜ್ಜತ್ತಿಯರಸಣ್ಣೀಯರವಿಭೇಯದೋ ಹುಂತಿ ಬಹುಭೇಯಾ ॥ ೧೪ ॥

ದ್ವಿತ್ರಿಚತುಃಪಂಚೇಂದ್ರಿಯಭೇದತಸ್ತ್ರಸಾಶ್ಚತುರ್ವಿಧಾ ಮಂತವ್ಯಾಃ ॥
ಪರ್ಯಾಪ್ತೇತರಸಂಜ್ಞೇತರವಿಭೇದತೋ ಭವಂತಿ ಬಹುಭೇದಾಃ ॥

ಅರ್ಥ:— ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ ಮತ್ತು ಪಂಚೇಂದ್ರಿಯ ಎಂದು ತ್ರಸಜೀವಗಳಲ್ಲಿ ಮುಖ್ಯವಾಗಿ ನಾಲ್ಕು ಭೇದಗಳುಂಟು. ಮತ್ತು ಪರ್ಯಾಪ್ತ, ಅಪರ್ಯಾಪ್ತ, ಸಂಜ್ಞೀ, ಅಸಂಜ್ಞೀ ಮುಂತಾದ ವಿಶೇಷ ಭೇದಗಳಿಂದ ತ್ರಸಜೀವಗಳು ಅನೇಕ ವಿಧವಾಗಿರುತ್ತವೆ.

## ತತ್ವ ಶ್ರದ್ಧಾನದ ವಿಶೇಷ ಸಾಧನಗಳು.

ಆಉಕುಳಜೋಣಿಮಗ್ಗಣಾಗುಣಜೀವೋವಗ್ಗಪಾಣಸಣ್ಣಾಹಿಂ ॥
ಣಾಊಣ ಜೀವದವ್ವಂ ಸದ್ದಹಣಂ ಹೋಯ ಕಾಯವ್ವಂ ॥ ೧೫ ॥

ಆಯುಃಕುಲಯೋನಿಮಾರ್ಗಣಾಗುಣಜೀವೋಪಯೋಗಪ್ರಾಣಸಂಜ್ಞಾಭಿಃ ॥
ಜ್ಞಾತ್ವಾ ಜೀವದ್ರವ್ಯಂ ಶ್ರದ್ಧಾನಂ ಭವತಿ ಕರ್ತವ್ಯಂ ॥

ಅರ್ಥಃ— ಆಯುಷ್ಯ, ಕುಲ, ಯೋನಿ, ಮಾರ್ಗಣಾಸ್ಥಾನ, ಗುಣಸ್ಥಾನ, ಜೀವೋಪಯೋಗ, ಪ್ರಾಣ, ಸಂಜ್ಞಾ, ಮುಂತಾದ ಸಾಧನಗಳಿಂದ ತಿಳಿದು, ಜೀವದ್ರವ್ಯದ ಮೇಲೆ ಶ್ರದ್ಧೆಯನ್ನಿಡಬೇಕು.

## ಅಜೀವತತ್ವ.

ದುವಿಹಾ ಅಜೀವಕಾಯಾ ದು ರೂವಿಣೋ ಅರೂವಿಣೋ ಮುಣೇಯವ್ವಾ ॥
ಖಂದಾದೇಸಪಏಸಾ ಅವಿಭಾಗೀ ರೂವಿಣೋ ಚದುಧಾ ॥ ೧೬ ॥

ದ್ವಿವಿಧಾ ಅಜೀವಕಾಯಾಸ್ತು ರೂಪಿಣೋರೂಪಿಣೋ ಜ್ಞಾತವ್ಯಾಃ ॥
ಸ್ಕಂಧಾ ದೇಶಪ್ರದೇಶಾ ಅವಿಭಾಗೀ ರೂಪಿಣಶ್ಚತುರ್ಧಾ ॥

ಅರ್ಥ:—ಅಜೀವತತ್ವವು ರೂಪೀ ಮತ್ತು ಅರೂಪೀ ಎಂದು ಎರಡು ವಿಧವಾಗಿರುತ್ತದೆ. ರೂಪಿ ತತ್ವದಲ್ಲಿ ಸ್ಕಂಧ, ದೇಶ, ಪ್ರದೇಶ, ಪರಮಾಣುಗಳೆಂದು ನಾಲ್ಕು ಒಳಭೇದಗಳುಂಟು.

ಸಯಳಂ ಮುಣೇಹ ಖಂದಂ ಅದ್ಧಂ ದೇಸೋ ಪಏಸಮದ್ಧದ್ಧಂ ॥
ಪರಮಾಣೂ ಅವಿಭಾಗೀ ಪುಗ್ಗಳದವ್ವಂ ಜಿಣುದ್ದಿಠ್ಠಂ ॥ ೧೭ ॥

ಸಕಲಂ ಜಾನೀಹಿ ಸ್ಕಂಧಂ ಅರ್ಧಂ ದೇಶಃ ಪ್ರದೇಶೋಽರ್ಧಾರ್ಧಮ್ ॥
ಪರಮಾಣ್ವವಿಭಾಗೀ ಪುದ್ಗಲದ್ರವ್ಯಂ ಜಿನೋದ್ದಿಷ್ಟಮ್ ॥

ಅರ್ಥಃ—ಸಂಪೂರ್ಣವಾದ ಪುದ್ಗಲದ್ರವ್ಯಕ್ಕೆ ಸ್ಕಂಧವೆಂತಲೂ, ಸ್ಕಂಧದ ಅರ್ಧಕ್ಕೆ ದೇಶವೆಂತಲೂ, ದೇಶದ ಅರ್ಧಕ್ಕೆ ಪ್ರದೇಶವೆಂತಲೂ ಮತ್ತು ಯಾವ ವಸ್ತುವಿನ ವಿಭಾಗವಾಗುವದಿಲ್ಲವೋ, ಅದಕ್ಕೆ ಪರಮಾಣುವೆಂತಲೂ ಅನ್ನುವರು.

## ಪುದ್ಗಲದ ಆರು ಭೇದಗಳು.

ಅಇಥೂಲಥೂಲ ಥೂಲಂ ಥೂಲಂ ಸುಹಮಂ ಚ ಸುಹಮಥೂಲಂ ಚ ॥
ಸುಹಮಂ ಚ ಸುಹಸುಸುಹಮಂ ಧರಾಇಯಂ ಹೋಇ ಛಬ್ಭೇಯಂ ॥೧೮

ಅತಿಸ್ಥೂಲಸ್ಥೂಲಂ ಸ್ಥೂಲಂ ಸ್ಥೂಲಂ ಸೂಕ್ಷ್ಮಂ ಚ ಸೂಕ್ಷ್ಮಸ್ಥೂಲಂ ಚ ॥
ಸೂಕ್ಷ್ಮಂ ಚ ಸೂಕ್ಷ್ಮಸೂಕ್ಷ್ಮಂ ಧರಾದಿಕಂ ಭವತಿ ಷಡ್ಭೇದಮ್ ॥

ಅರ್ಥ:—ಅತಿಸ್ಥೂಲಸ್ಥೂಲ, ಸ್ಥೂಲ, ಸ್ಥೂಲಸೂಕ್ಷ್ಮ, ಸೂಕ್ಷ್ಮಸ್ಥೂಲ, ಸೂಕ್ಷ್ಮ ಮತ್ತು ಸೂಕ್ಷ್ಮಸೂಕ್ಷ್ಮ ಎಂದು ಪೃಥ್ವೀ ಮುಂತಾದವುಗಳಲ್ಲಿ ಆರು ಪ್ರಕಾರಗಳಿರುತ್ತವೆ.

ಟೀಪು:—ಅತಿನಿಕೃಷ್ಟ ಪರಿಮಾಣವುಳ್ಳ ಪರಮಾಣುವು ಸೂಕ್ಷ್ಮಸೂಕ್ಷ್ಮ ಪುದ್ಗಲವೆನಿಸುತ್ತದೆ. ಅದು ಅದೃಶ್ಯವಾಗಿಯೂ ಅಸ್ಪೃಶ್ಯವಾಗಿಯೂ ಇರುತ್ತದೆ. ಮತ್ತು ಪುಣ್ಯಪಾಪರೂಪ ಕರ್ಮದ ಅವಯುವಗಳು ಸೂಕ್ಷ್ಮ ಸಂಜ್ಞಕ ಆಗಿರುವವು. ಕರ್ಮದ ಅವಯುವಗಳು ಸೂಕ್ಷ್ಮವೆನ್ನುವದಕ್ಕಿಂತ ಸ್ಥೂಲವೆಂದು ತಿಳಿದರೆ ಏನು ಅಡ್ಡಿಯಾಗುವದು? ಅದಕ್ಕೆ ಸಮಾಧಾನವೇನೆಂದರೆ, ಜೀವದ ಅತಿ ಸೂಕ್ಷ್ಮವಾದ ಅವಯುವಗಳಿಗೆ ಕರ್ಮದ ಅವಯುವಗಳ ಸಂಬಂಧವಾಗಬೇಕಾಗುತ್ತದೆ. ಆದರೆ ಅವು ಸ್ಥೂಲವೆಂದು ತಿಳಿದರೆ ಸೂಕ್ಷ್ಮವಾದ ಜೀವಾವಯುವಗಳ ಸಂಬಂಧವು ಅಶಕ್ಯವಿದ್ದದರಿಂದ ಅವು ( ಕರ್ಮದ ಅವಯುವಗಳು ) ಸೂಕ್ಷ್ಮವೆಂದು ಅನ್ನಲಿಕ್ಕೆ ಬೇಕು; ಸೂಕ್ಷ್ಮವೆಂದರೆ ಪರಮಾಣುವಿನಕ್ಕಿಂತ ದೊಡ್ಡದಿದ್ದು, ಅಣುಸ್ವರೂಪವಿರುತ್ತದೆ. ಅದು ಕಣ್ಣಿಗೆ ಕಾಣದಿದ್ದರೂ ಸಾವಯುವ ಇರುತ್ತದೆ. ಶಬ್ದ, ಸ್ಪರ್ಶ, ರಸ, ಗಂಧ ಮುಂತಾದವುಗಳಿಗೆ ಸೂಕ್ಷ್ಮಸ್ಥೂಲ ಪುದ್ಗಲವೆನ್ನುತ್ತಾರೆ; ಏಕಂದರೆ ಇವುಗಳು ಕಣ್ಣಿಗೆ ಕಾಣಿಸದಿದ್ದರೂ ಕರ್ಣ, ತ್ವಚೆ, ಮುಂತಾದವುಗಳಿಂದ ಇವುಗಳ ಜ್ಞಾನವಾಗುತ್ತದೆ. ಆದ್ದರಿಂದ ಇವುಗಳಿಗೆ ಸೂಕ್ಷ್ಮಸ್ಥೂಲ ಪುದ್ಗಲವೆನ್ನಬೇಕು. ಛಾಯಾ, ಸೂರ್ಯಪ್ರಕಾಶ, ಚಂದ್ರಪ್ರಕಾಶ, ಅಂಧಕಾರ ಇವು ಸ್ಥೂಲಸೂಕ್ಷ್ಮವೆನಿಸುತ್ತವೆ; ಏಕಂದರೆ ಇವು ನೇತ್ರಗೋಚರವಾಗುತ್ತವೆಂದು ಸ್ಥೂಲವು ಮತ್ತು ಇವು ಏಕತ್ರವಾಗಿ ಸಂಗ್ರಹಿಸಲಿಕ್ಕೆ ಬರುವಹಾಗಿಲ್ಲದರಿಂದ ಸೂಕ್ಷ್ಮವು. ಆದಕಾರಣ ಇವು ಸ್ಥೂಲಸೂಕ್ಷ್ಮವೆನಿಸುವವು. ಜಲ ಮುಂತಾದ ಪದಾರ್ಥಗಳು ಸ್ಥೂಲವೆಂದೂ ಭೂಮಿ ಮುಂತಾದ ಘನಪದಾರ್ಥಕ್ಕೆ ಸ್ಥೂಲಸ್ಥೂಲ ಪುದ್ಗಲದ್ರವ್ಯವೆಂದು ಹೆಸರು ಇರುತ್ತದೆ.

ಪುಢವೀ ಜಳಂ ಚ ಛಾಯಾ ಚಉರಿಂದಿಯವಿಸಯಕಮ್ಮಪರಮಾಣು ॥
ಛಹವಿಹಭೇಯಂ ಭಣಿಯಂ ಪುಗ್ಗಲದವ್ವಂ ಜಿಣಿಂದೇಹಿಂ ॥ ೧೯ ॥

ಪೃಥ್ವೀ ಜಲಂ ಚ ಛಾಯಾ ಚತುರಿಂದ್ರಿಯವಿಷಯಕರ್ಮಪರಮಾಣವ: ॥
ಷಡ್ವಿಧಭೇದಂ ಭಣಿತಂ ಪುದ್ಗಲದ್ರವ್ಯಂ ಜಿನೇಂದ್ರೈ: ॥

ಅರ್ಥ:—ಪೃಥ್ವಿ, ಜಲ, ಛಾಯಾ, ಚತುರಿಂದ್ರಿಯಗಳ ವಿಷಯ ( ಶಬ್ದ, ಸ್ಪರ್ಶ, ರಸ, ಗಂಧ), ಕರ್ಮವರ್ಗಣಾ ಮತ್ತು ಪರಮಾಣು ಹೀಗೆ ಪುದ್ಗಲದ್ರವ್ಯದಲ್ಲಿ ಆರು ಬಗೆಭೇದಗಳನ್ನು ಶ್ರೀಜಿನೇಶ್ವರನು ಹೇಳಿದ್ದಾನೆ.

## ಅರೂಪೀ ಪುದ್ಗಲದ್ರವ್ಯದ ಭೇದವು.

ಚಉವಿಹಮರೂವಿದವ್ವಂ ಧಮ್ಮಾಧಮ್ಮಾಂಬರಾಣಿ ಕಾಲೋ ಯ ॥
ಗಇಠಾಣುಗ್ಗಹಲಖ್ಖಣಾಣಿ ತಹ ವಟ್ಟಣಗುಣೋ ಕಾಲೋ ॥ ೨೦ ॥

ಚತುರ್ವಿಧಮರೂಪಿ ದ್ರವ್ಯಂ ಧರ್ಮಾಧರ್ಮಾಂಬರಾಣಿ ಕಾಲಶ್ಚ ॥
ಗತಿಸ್ಥಾನಾವಗಾಹನಲಕ್ಷಣಾನಿ ತಥಾ ವರ್ತನಾಗುಣಃ ಕಾಲಃ ॥

ಅರ್ಥ:—ಧರ್ಮ, ಅಧರ್ಮ, ಆಕಾಶ, ಕಾಲ ಈ ನಾಲ್ಕೂ ಅರೂಪಿ ದ್ರವ್ಯಗಳು. ಗತಿಯುಳ್ಳ ಜೀವಕ್ಕೆ ಸಹಾಯಮಾಡುವದು ಧರ್ಮದ್ರವ್ಯವೆಂತಲೂ, ಸ್ಥಿತಿಗೆ ಸಹಾಯಮಾಡುವದು ಅಧರ್ಮದ್ರವ್ಯವೆಂತಲೂ, ಎಲ್ಲ ಪದಾರ್ಥಗಳಿಗೆ ಅವಕಾಶವನ್ನು ಕೊಡುವದು ಆಕಾಶದ್ರವ್ಯವೆಂತಲೂ, ವರ್ತನಾ ಲಕ್ಷಣವುಳ್ಳದ್ದು ಕಾಲದ್ರವ್ಯವೆಂತಲೂ ಲಕ್ಷಣಗಳುಂಟು.

## ಕಾಲದ್ರವ್ಯದ ಎರಡು ಭೇದಗಳು.

ಪರಮತ್ಥೋ ವವಹಾರೋ ದುವಿಹೋ ಕಾಲೋ ಜಿಣೇಹಿ ಪಣ್ಣತ್ತೋ ॥
ಳೋಯಾಯಾಸಪಏಸೇ ಠಿಯಾಣವೋ ಮುಖ್ಖಕಾಲಸ್ಸ ॥ ೨೧ ॥

ಪರಮಾರ್ಥೋ ವ್ಯವಹಾರೋ ದ್ವಿವಿಧಃ ಕಾಲೋ ಜಿನೈಃ ಪ್ರಣೀತಃ ॥
ಲೋಕಾಕಾಶಪ್ರದೇಶೇ ಸ್ಥಿತಾ ಅಣವೋ ಮುಖ್ಯಕಾಲಸ್ಯ ॥

ಅರ್ಥ:—ಕಾಲಗಳಲ್ಲಿ ನಿಶ್ಚಯ ಅಥವಾ ಮುಖ್ಯಕಾಲವೆಂತಲೂ ವ್ಯವಹಾರಕಾಲವೆಂತಲೂ ಎರಡು ಭೇದಗಳುಂಟೆಂದು ಶ್ರೀಜಿನೇಶ್ವರರಿಂದ ಹೇಳಲ್ಪಟ್ಟಿರುತ್ತದೆ. ಮುಖ್ಯಕಾಲದ ಅಣುಗಳು ಲೋಕಾಕಾಶದ ಪ್ರದೇಶಗಳಲ್ಲಿ ಅಸಂಖ್ಯ ಇರುತ್ತವೆ.

## ವ್ಯವಹಾರಕಾಲವು.

ಏದೇ ಕಾರಣಭೂದಾ ಣಿಚ್ಛಯರೂವಾ ಜಿಣೇಹಿ ಣಿದ್ದಿಠ್ಠಾ ॥
ತೀದಾಣಾಗದಭೂದೋ ವವಹಾರೋ ಣಂತಸಮಓ ಯ ॥ ೨೨ ॥

ಏತೇ ಕಾರಣಭೂತಾ ನಿಶ್ಚಯರೂಪಾ ಜಿನೈರ್ನಿರ್ದಿಷ್ಟಾಃ ॥
ಅತೀತಾನಾಗತಭೂತೋ ವ್ಯವಹಾರೋಽನಂತಸಮಯಶ್ಚ ॥

ಅರ್ಥ:—ಶ್ರೀಜಿನೇಶ್ವರನಿಂದ ಹೇಳಲ್ಪಟ್ಟ ನಿಶ್ಚಯಕಾಲದ ಅಸಂಖ್ಯ ಪರಮಾಣುಗಳು ಸಮಯಪರ್ಯಾಯಕ್ಕೆ ಕಾರಣವೆಂತಲೂ, ವ್ಯವಹಾರಕಾಲವು ಭೂತ ಭವಿಷ್ಯ ಸ್ವರೂಪದ ಅನಂತ ಸಮಯ ( ಪರ್ಯಾಯ )ವೆಂತಲೂ ತಿಳಿಯಬೇಕು.

ಪರಿಣಾಮಿಜೀವಮುತ್ತಾ ಏಹಿಂ ಣಾಊಣ ದವ್ವಸಬ್ಭಾವಂ ॥
ಜಿಣವಯಣಮಣುಸರಂತೇಹಿಂ ಥಿರಮಇ ಹೋಇ ಕಾಯವ್ವಾ ॥ ೨೩

ಪರಿಣಾಮಿಜೀವಮೂರ್ತೈರ್ಜ್ಞಾತ್ವಾ ದ್ರವ್ಯಸದ್ಭಾವಮ್ ॥
ಜಿನವಚನಮನುಸರದ್ಭಿಃ ಸ್ಥಿರಮತಿರ್ಭವತಿ ಕರ್ತವ್ಯಾ ॥

ಅರ್ಥ:--ಶ್ರಾವಕರು ಪರಿಣಾಮಿ, ಜೀತನ, ಮೂರ್ತ ಮುಂತಾದವುಗಳಿಂದ ದ್ರವ್ಯದ ಅಸ್ತಿತ್ವವನ್ನು ತಿಳಿದು, ತತ್ವಗಳಲ್ಲಿ ನಂಬಿಗೆಯನ್ನು ಸ್ಥಿರಪಡಿಸಬೇಕು.

## ಪರಿಣಾಮಿ ಮೊದಲಾದವುಗಳ ನಿರ್ಣಯವು.

ಪರಿಣಾಮಿ ಜೀವ ಮುತ್ತಂ ಸಪಏಸಂ ಏಯ ಖಿತ್ತ ಕಿರಿಯಾ ಯ ॥
ಣಿಚ್ಚಂ ಕಾರಣ ಕತ್ತಾ ಸವಗದಮಿಯರಮ್ಹಿ ಯ ಪವೇಸೋ ॥ ೨೪ ॥

ಪರಿಣಾಮಿ ಜೀವೋ ಮೂರ್ತಂ ಸಪ್ರದೇಶಂ ಏಕಂ ಕ್ಷೇತ್ರಂ ಕ್ರಿಯಾವಚ್ಚ ॥
ನಿತ್ಯಂ ಕಾರಣಂ ಕರ್ತೃ ಸರ್ವಗತಮಿತರಸ್ಮಿಂಶ್ಚ ಪ್ರದೇಶಃ ॥

ದುಣ್ಣಿ ಯ ಏಯಂ ಏಯಂ ಪಂಚ ಯ ತಿಯ ಏಯ ದುಣ್ಣಿ ಚಉರೋ ಯ ॥
ಪಂಚ ಯ ಏಯಂ ಏಯಂ ಮೂಲಸ್ಸ ಹಿ ಉತ್ತರಂ ಣೇಯಂ ॥ ೨೫ ॥

ದ್ವೇ ಚ ಏಕಂ ಏಕಂ ಪಂಚ ಚ ತ್ರಿಕಂ ಏಕಂ ದ್ವೇ ಚತ್ವಾರಿ ಚ ॥
ಪಂಚ ಚ ಏಕಂ ಏಕಂ ಮೂಲಸ್ಯ ಹ್ಯುತ್ತರಂ ಜ್ಞೇಯಮ್ ॥

ಅರ್ಥಃ—ಜೀವ ಮತ್ತು ಪುದ್ಗಲಗಳು ಪರಿಣಾಮಿ ದ್ರವ್ಯಗಳಿರುತ್ತವೆ. ಜೀವವು ಸಚೇತನವಿರುತ್ತದೆ. ಉಳಿದ ಐದು ದ್ರವ್ಯಗಳು ಅಚೇತನವಿರುತ್ತವೆ. ಪುದ್ಗಲವು ಮೂರ್ತವದೆ. ಉಳಿದವು ಅಮೂರ್ತವಿರುತ್ತವೆ. ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಆಕಾಶ ಈ ಐದು ಪ್ರದೇಶಿ ( ಅಸ್ತಿಕಾಯ ) ದ್ರವ್ಯಗಳಿರುತ್ತವೆ. ಧರ್ಮ, ಅಧರ್ಮ, ಆಕಾಶ ಇವುಗಳು ಏಕದ್ರವ್ಯ ( ಅವಿಭಾಜ್ಯ )ಗಳಿರುತ್ತವೆ. ಪುದ್ಗಲ ದ್ರವ್ಯವು ಸಂಖ್ಯಾತ, ಅಸಂಖ್ಯಾತ ಮತ್ತು ಅನಂತಪ್ರದೇಶವುಳ್ಳದ್ದಿರುತ್ತದೆ. ಆಕಾಶವು ಕ್ಷೇತ್ರವುಳ್ಳದ್ದಿರುತ್ತದೆ. ಜೀವ ಮತ್ತು ಪುದ್ಗಲಗಳು ಸಕ್ರಿಯವಾಗಿರುತ್ತವೆ. ಧರ್ಮ, ಅಧರ್ಮ, ಆಕಾಶ, ಕಾಲ ಈ ನಾಲ್ಕು ನಿತ್ಯದ್ರವ್ಯಗಳಿರುತ್ತವೆ. ಪುದ್ಗಲ ಮುಂತಾದ ಐದು ದ್ರವ್ಯಗಳು ಕಾರಣರೂಪವಾಗಿಯೂ ಜೀವವು ಕರ್ತೃವಾಗಿಯೂ ಇರುತ್ತವೆ. ಲೋಕಾಲೋಕವನ್ನು ವ್ಯಾಪಿಸಿರುವ ಆಕಾಶವು ಒಂದೇ ಇರುತ್ತದೆ. ಈ ಷಡ್ದ್ರವ್ಯಗಳು ಒಂದೇ ಕ್ಷೇತ್ರವನ್ನು ವ್ಯಾಪಿಸಿಕೊಂಡಿರಬಹುದು.

## ಪರ್ಯಾಯದ ಎರಡು ಭೇದಗಳು.

ಸುಹುಮಾ ಅವಾಯವಿಸಯಾ ಖಣಖಇಣೋ ಅತ್ಥಪಜ್ಜಯಾ ದಿಠ್ಠಾ ॥
ವಂಜಣಪಜ್ಜಾಯಾ ಪುಣ ಥೂಳಾ ಗಿರಗೋಯರಾ ಚಿರವಿವತ್ಥಾ ॥ ೨೬

ಸೂಕ್ಷ್ಮಾ ಅವಾಗ್ವಿಷಯಾಃ ಕ್ಷಣಕ್ಷಯಿಣೋಽರ್ಥಪರ್ಯಾಯಾ ದಿಷ್ಟಾಃ ॥
ವ್ಯಂಜನಪರ್ಯಾಯಾಃ ಪುನಃ ಸ್ಥೂಲಾ ಗಿರೋಗೋಚರಾಶ್ಚಿರವ್ಯವಸ್ಥಾಃ ॥

ಅರ್ಥ:-ಅರ್ಥಪರ್ಯಾಯ ಮತ್ತು ವ್ಯಂಜನಪರ್ಯಾಯ ಎಂದು ಪರ್ಯಾಯದಲ್ಲಿ ಎರಡು ವಿಧವು. ಅರ್ಥಪರ್ಯಾಯವು ಹೇಳಲಿಕ್ಕೆ ಬರದಷ್ಟು ಸೂಕ್ಷ್ಮವಾಗಿದೆ; ಹಾಗು ಪ್ರತಿಕ್ಷಣದಲ್ಲಿ ಉತ್ಪನ್ನವಾಗಲಿ, ನಷ್ಟವಾಗಲಿ ಆಗುತ್ತದೆ. ವ್ಯಂಜನಪರ್ಯಾಯವು ಸ್ಥೂಲಮಾನದಿಂದ ಹೇಳಲಿಕ್ಕೆ ಬರುತ್ತಿದ್ದು, ಚಿರಕಾಲವಿರುತ್ತದೆ. ಅರ್ಥಪರ್ಯಾಯವು ಜೀವ ಮುಂತಾದ ಆರು ದ್ರವ್ಯಗಳಿಗೆ ಇರುತ್ತದೆ. ವ್ಯಂಜನಪರ್ಯಾಯವು ಜೀವ ಮತ್ತು ಪುದ್ಗಲ ದ್ರವ್ಯಗಳಿಗೆ ಇರುತ್ತದೆ. ಶರೀರಕ್ಕೆ ವ್ಯಂಜನವೆಂಬ ಹೆಸರು. ನರನಾರಕಾದಿ ಅನೇಕ ಶರೀರಗಳನ್ನು ಧರಿಸುವದಕ್ಕೆ ವ್ಯಂಜನಪರ್ಯಾಯವೆನ್ನುತ್ತಾರೆ. ಅಣುವಿನಲ್ಲಿ ಸ್ಕಂಧ (ಸಂಪೂರ್ಣಪುದ್ಗಲ)ವಾಗುವದು ಪುದ್ಗಲದ ವ್ಯಂಜನಪರ್ಯಾಯವೆಂದು ತಿಳಿಯತಕ್ಕದ್ದು. ಧರ್ಮ, ಅಧರ್ಮ, ಆಕಾಶ, ಕಾಲ ಇವುಗಳಿಗೆ ವ್ಯಂಜನಪರ್ಯಾಯವಿಲ್ಲ.

ಪರಿಣಾಮಜುದೋ ಜೀಓ ಗಇಗಮಣುವಲಂಭಓ ಅಸಂದೇಹೋ ॥
ತಹ ಪುಗ್ಗಲೋ ಯ ಪಾಹಣಪಹುಈಪರಿಣಾಮದಂಸಣೇ ಣೇಓ ॥ ೨೭ ॥

ಪರಿಣಾಮಯುತೋ ಜೀವೋ ಗತಿಗಮನೋಪಲಂಭಕೋಽಸಂದೇಹಃ ॥
ತಥಾ ಪುದ್ಗಲಶ್ಚ ಪಾಷಾಣಪ್ರಭೃತಿಪರಿಣಾಮದರ್ಶನೇ ಜ್ಞೇಯಃ ॥

ಅರ್ಥ:—ರಾಗ, ದ್ವೇಷ, ಮೋಹ ಮುಂತಾದ ಪರಿಣಾಮದಿಂದ ಯುಕ್ತವಾದ ಜೀವವು ನಿಸ್ಸಂದೇಹವಾಗಿ ನರಕಾದಿ ಗತಿಯನ್ನು ಹೊಂದಲಿಕ್ಕೆ ಯೋಗ್ಯವಾಗುತ್ತದೆ. ಇದಕ್ಕೆ ಜೀವವ್ಯಂಜನಪರ್ಯಾಯವೆನ್ನುತ್ತಾರೆ. ಕಲ್ಲು, ಮಣ್ಣು ಮುಂತಾದ ರೂಪಾಂತರವು ಪುದ್ಗಲದ ವ್ಯಂಜನಪರ್ಯಾಯವಿರುತ್ತದೆ.

ವಂಜಣಪರಿಣಇವಿರಹಾ ಧಮ್ಮಾದೀಆ ಹವೇ ಅಪರಿಣಾಮಾ ॥
ಅತ್ಥಪರಿಣಾಮಮಾಸಿಯ ಸವ್ವೇ ವಿ ಪಾರಿಣಾಮಿಆ ಅತ್ಥಾ ॥ ೨೮ ॥

ವ್ಯಂಜನಪರಿಣತಿವಿರಹಾ ಧರ್ಮಾದಿಕಾ ಭವೇಯುರಪರಿಣಾಮಾಃ ॥
ಅರ್ಥಪರ್ಯಾಯಮಾಶ್ರಿತ್ಯ ಸರ್ವೇಽಪಿ ಪಾರಿಣಾಮಿಕಾ ಅರ್ಥಾಃ ॥

ಅರ್ಥ:—ವ್ಯಂಜನಪರ್ಯಾಯಮಯವಾದ ನರಕಾದಿರೂಪವೂ ಅಣುಸ್ಕಂಧರೂಪವೂ ಇವು ಧರ್ಮ, ಅಧರ್ಮ, ಆಕಾಶ, ಕಾಲ ಇವುಗಳಿಗೆ ಇಲ್ಲದ್ದರಿಂದ ಅವು ಅಪರಿಣಾಮಿ (ವಿಕಾರಹೊಂದದಂಥವು) ಇರುತ್ತವೆ. ಸರ್ವಪದಾರ್ಥಗಳು ಅರ್ಥಪರ್ಯಾಯದ ಅಪೇಕ್ಷೆಯಿಂದ ಪರಿಣಾಮಿ ಇರುತ್ತವೆ.

ಜೀವೋ ಹು ಜೀವದವ್ವಂ ಏಕಂ ಚಿಯ ಚೇಯಣಾಚುಯಾ ಸೇಸಾ ॥
ಮುತ್ತಂ ಪುಗ್ಗಳದವ್ವಂ ರೂವಾಇವಿಲೋಯಣಾ ಣ ಸೇಸಾಣಿ ॥ ೨೯ ॥

ಜೀವಃ ಖಲು ಜೀವದ್ರವ್ಯಮೇಕಂ ಚಿಚ್ಚೇತನಾಚ್ಯುತಾನಿ ಶೇಷಾಣಿ ॥
ಮೂರ್ತಂ ಪುದ್ಗಲದ್ರವ್ಯಂ ರೂಪಾದಿವಿಲೋಕನಾನ್ನ ಶೇಷಾಣಿ ॥

ಅರ್ಥ:—ಆರು ದ್ರವ್ಯಗಳೊಳಗೆ ಜೀವರೂಪಮಯವಾದ ದ್ರವ್ಯವು ಚೇತನವಾಗಿಯೂ ಉಳಿದ ಐದು ದ್ರವ್ಯಗಳು ಅಚೇತನ ( ಜ್ಞಾನರಹಿತ ) ವಾಗಿಯೂ ಇರುತ್ತವೆ. ಪುದ್ಗಲದ್ರವ್ಯವು ಮಾತ್ರ ಮೂರ್ತವಿರುತ್ತದೆ. ಯಾಕಂದರೆ, ಅದರಲ್ಲಿ ರೂಪ, ರಸ, ಗಂಧ ಮುಂತಾದ ಇಂದ್ರಿಯ ವಿಷಯಗಳಿರುತ್ತವೆ. ಉಳಿದ ಐದು ದ್ರವ್ಯಗಳು ಅಮೂರ್ತವೆನಿಸುತ್ತವೆ.

ಸಪಏಸ ಪಂಚ ಕಾಲಂ ಮತ್ತೂಣ ಪಏಸಸಂಚಯಾ ಣೇಯಾ ॥
ಅಪಏಸೋ ಖಲು ಕಾಲೋ ಪಏಸಬಂಧಚ್ಚುದೋ ಜಮ್ಹಾ ॥ ೩೦ ॥

ಸಪ್ರದೇಶಾನಿ ಪಂಚ ಕಾಲಂ ಮುಕ್ತ್ವಾ ಪ್ರದೇಶಸಂಚಯಾಜ್ಞೇಯಾನಿ ॥
ಅಪ್ರದೇಶಃ ಖಲು ಕಾಲಃ ಪ್ರದೇಶಬಂಧಚ್ಯುತೋ ಯಸ್ಮಾತ್ ॥

ಅರ್ಥ:—ಕಾಲದ್ರವ್ಯದ ಹೊರ್ತು ಉಳಿದ ಐದು ದ್ರವ್ಯಗಳು ಪ್ರದೇಶ ಸಮೂಹದಿಂದ ಯುಕ್ತವಾಗಿರುವದರಿಂದ ಪ್ರದೇಶಿದ್ರವ್ಯಗಳೆನಿಸುತ್ತವೆ. ಕಾಲಕ್ಕೆ ಪ್ರದೇಶ ಬಂಧವಿಲ್ಲದ್ದರಿಂದ ಅಪ್ರದೇಶವೆಂದು ಹೇಳಲ್ಪಡುತ್ತದೆ.

ಧಮ್ಮಾಧಮ್ಮಾಗಾಸಾ ಏಕಸರೂವಾ ಪಏಸಅವಿಉಗ್ಗಾ ॥
ವಿವಹಾರಕಾಲಪುಗ್ಗಲಜೀವಾ ಹು ಅಣೇಯರೂವಾ ವೇ ॥ ೩೧ ॥

ಧರ್ಮಾಧರ್ಮಾಕಾಶಾ ಏಕಸ್ವರೂಪಾಃ ಪ್ರದೇಶಾವಿಯುಕ್ತಾಃ ॥
ವ್ಯವಹಾರಕಾಲಪುದ್ಗಲಜೀವಾಃ ಖಲು ಅನೇಕರೂಪಾ ವೈ ॥

ಅರ್ಥ:—ಆರು ದ್ರವ್ಯಗಳೊಳಗೆ ಧರ್ಮ, ಅಧರ್ಮ ಮತ್ತು ಆಕಾಶ ಈ ಮೂರು ದ್ರವ್ಯಗಳು ಒಂದೇ ಸ್ವರೂಪದವುವಿದ್ದು, ತಮ್ಮ ತಮ್ಮ ಪ್ರದೇಶವನ್ನು ಬಿಡದಂಥವು ಇರುತ್ತವೆ. ಕಾಲದ್ರವ್ಯದಲ್ಲಿ ವ್ಯವಹಾರಕಾಲ, ಪುದ್ಗಲ, ಜೀವ ಈ ಮೂರು ದ್ರವ್ಯಗಳು ಅನೇಕವಿಧವಾಗಿರುತ್ತವೆ. ಜೀವ, ಪುದ್ಗಲಗಳು ಅನಂತಾನಂತ ಅವೆ. ವ್ಯವಹಾರ ಕಾಲವಾದರೂ ಅಣುಸಮಯಾದಿ ಭೇದದಿಂದ ಅನಂತವದೆ. ಜೀವ, ಪುದ್ಗಲಗಳ ಪ್ರದೇಶವು ಸಂಕುಚಿತವಾಗಲಿ ವಿಸ್ತಾರವಾಗಲಿ ಇರುತ್ತದೆ.

ಆಗಾಸಮೇವ ಖಿತ್ತಂ ಅವಗಾಹಣಲಖ್ಖಣಂ ಜದೋ ಭಣಿಯಂ ॥
ಸೇಸಾಣಿ ಪುಣೋಖಿತ್ತಾ ಅವಗಾಹಣಲಖ್ಖಣಾಭಾವಾ ॥ ೩೨ ॥

ಆಕಾಶ ಏವ ಕ್ಷೇತ್ರೀ ಅವಗಾಹನಲಕ್ಷಣೋ ಯತೇ ಭಣಿತಃ ॥
ಶೇಷಾಣಿ ಪುನರಕ್ಷೇತ್ರಾಣ್ಯವಗಾಹನಲಕ್ಷಣಾಭಾವಾತ್ ॥

ಅರ್ಥ:—ಆರು ದ್ರವ್ಯಗಳಲ್ಲಿಯು ಆಕಾಶವು ಉಳಿದ ದ್ರವ್ಯಗಳಿಗೆ ಅವಕಾಶವನ್ನು ಕೊಡುತ್ತಿರುವದರಿಂದ ಅದು ಕ್ಷೇತ್ರೀ ಎಂದು ಹೇಳಲ್ಪಡುತ್ತದೆ. ಉಳಿದ ದ್ರವ್ಯಗಳಲ್ಲಿ ಅವಗಾಹನ ( ಅವಕಾಶ ಕೊಡುವ ) ಗುಣವಿಲ್ಲದ್ದರಿಂದ ಅವು ಅಕ್ಷೇತ್ರೀ ದ್ರವ್ಯಗಳಿರುತ್ತವೆ.

ಸಕಿರಿಯ ಜೀವಪುಗ್ಗಲ ಗಮಣಾಗಮಣಾಇಕಿರಿಯಉುವಲಂಭಾ ॥
ಸೇಸಾಣಿ ಪುಣವಿಯಾಣ ಸು ಕಿರಿಯಾಹೀಣಾ ತದಾಭಾವಾ ॥ ೩೩ ॥

ಸಕ್ರಿಯೌ ಜೀವಪುದ್ಗಲೌ ಗಮನಾಗಮನಾದಿಕ್ರಿಯೋಪಲಂಭತಃ ॥
ಶೇಷಾಣಿ ಪುನರ್ವಿಜಾನೀಹಿ ಕ್ರಿಯಾಹೀನಾನಿ ತದಭಾವಾತ್ ॥

ಅರ್ಥಃ—ಜೀವ, ಪುದ್ಗಲಗಳಲ್ಲಿ ಗತಿ ಮತ್ತು ಸ್ಥಿತಿ ಮುಂತಾದ ಕ್ರಿಯೆಗಳಿರುವದರಿಂದ ಅವೆರಡೂ ದ್ರವ್ಯಗಳು ಸಕ್ರಿಯೆವೆಂದು ತಿಳಿಯಬೇಕು. ಕ್ರಿಯಾಹೀನವಾದ ಆಕಾಶ ಮುಂತಾದ ನಾಲ್ಕು ದ್ರವ್ಯಗಳು ಅಕ್ರಿಯೆವೆಂದು ಹೇಳಲ್ಪಡುತ್ತವೆ.

ಮುತ್ತಾ ಜೀವಂ ಕಾಯಂ ಣಿಚ್ಚಾ ಸೇಸಾ ಪಯಾಸಿಯಾ ಸಮಯೇ ॥
ವಂಜಣಪರಿಣಾಮಚುಯಾ ಇಯರೇ ತಂ ಪರಿಣಯಂ ಪತ್ತಾ ॥ ೩೪ ॥

ಮುಕ್ತ್ವಾ ಜೀವಂ ಕಾಯಂ ನಿತ್ಯಾಃ ಶೇಷಾಃ ಪ್ರಕಾಶಿತಾಃ ಸಮಯೇ ॥
ವ್ಯಂಜನಪರಿಣಾಮಚ್ಯುತಾ ಇತರೇ ತಂ ಪರಿಣಯಂ ಪ್ರಾಪ್ತಾಃ ॥

ಅರ್ಥ:—ಜೀವ, ಪುದ್ಗಲಗಳ ಹೊರ್ತು ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಈ ನಾಲ್ಕು ದ್ರವ್ಯಗಳು ಜೈನ ಸಿದ್ಧಾಂತದಲ್ಲಿ ನಿತ್ಯವಿರುತ್ತವೆ; ಯಾಕಂದರೆ ಇವುಗಳಿಗೆ ವ್ಯಂಜನ ಪರ್ಯಾಯವಿಲ್ಲ. ಜೀವಾಜೀವಗಳಿಗೆ ನರನಾರಕಾದಿ ಗತಿಯರೂಪವೂ ವ್ಯಂಜನಪರ್ಯಾಯವೂ ಇದ್ದದ್ದರಿಂದ ಅವೆರಡೂ ಅನಿತ್ಯವೆಂದು ತಿಳಿಯಬೇಕು.

ಜೀವಸ್ಸುವಯಾರಕರಾ ಕಾರಣಭೂಯಾ ಹು ಪಂಚ ಕಾಯಾಈ ॥
ಜೀವೋ ಸತ್ತಾ ಭೂಓ ಸೋ ತಾಣಂ ಣ ಕಾರಣಂ ಹೋಈ ॥ ೩೫ ॥

ಜೀವಸ್ಯೋಪಕಾರಕರಾಃ ಕಾರಣಭೂತಾಃ ಖಲು ಪಂಚ ಕಾಯಾದಯಃ ॥
ಜೀವಃ ಸತ್ತಾಭೂತ: ಸ ತೇಷಾಂ ನ ಕಾರಣಂ ಭವತಿ ॥

ಅರ್ಥಃ–ಆರುದ್ರವ್ಯಗಳಲ್ಲಿ ಪುದ್ಗಲಾದಿ ಪಂಚದ್ರವ್ಯಗಳು ಜೀವಕ್ಕೆ ಉಪಕಾರದ ಸಾಧನಗಳಾಗಿರುತ್ತವೆ. ಸತ್ತಾಸ್ವರೂಪಿಯಾದ ಜೀವವು ಪುದ್ಗಲಾದಿ ಪಂಚದ್ರವ್ಯಗಳಿಗೆ ಉಪಕಾರಕ್ಕೆ ಕಾರಣವಾಗುವದಿಲ್ಲ.

ಕತ್ತಾ ಸುಹಾಸುಹಾಣಂ ಕಮ್ಮಾಣಂ ಫಲಪತ್ತೋಯಓ ಜಮ್ಹಾ ॥
ಜೀವೋ ತಪ್ಫಲಭೋಯಾ ಭೋಯಾ ಸೇಸಾ ಣ ಕತ್ತಾರಾ ॥ ೩೬ ॥

ಕರ್ತಾ ಶುಭಾಶುಭಾನಾಂ ಕರ್ಮಣಾಂ ಫಲೋತ್ಪಾದಕೋ ಯಸ್ಮಾತ್ ॥
ಜೀವಸ್ತತ್ಫಲಭೋಕ್ತಾ ಭೋಕ್ತೃಣಿ ಶೇಷಾಣಿ ನ ಕರ್ತೃಣಿ ॥

ಅರ್ಥ:—ಜೀವವು ಶುಭಾಶುಭ ಕರ್ಮದ ಮತ್ತು ಶುಭಾಶುಭ ಕರ್ಮಫಲದ ಕರ್ತೃವೂ ಭೋಕ್ತೃವೂ ಇರುತ್ತದೆ. ಉಳಿದ ಐದು ದ್ರವ್ಯಗಳು ಶುಭಾಶುಭ ಕರ್ಮದ ಹಾಗು ಕರ್ಮಫಲದ ಕರ್ತೃವಾಗಲಿ ಭೋಕ್ತೃವಾಗಲಿ ಆಗುವದಿಲ್ಲ.

ಸವ್ವಗದತ್ತಾ ಸವ್ವ ಗಮುಯಾಸಂ ಣ ಯ ಸೇಸಗೆಯು ದವ್ವಂ ||
ಅಪರಿಣಾವಮಾದೀಹಿ ಯ ಬೋಹವ್ವಾ ತೇ ಪಯತ್ತೇಣ || ೩೭ ||

ಸರ್ವಗತತ್ವಾತ್ಸರ್ವಗಮಾಕಾಶಂ ನ ಚ ಶೇಷಕಂ ದ್ರವ್ಯಮ್ ||
ಅಪರಿಣಾಮಾದಿಭಿಶ್ಚ ಬೋದ್ಧವ್ಯಾಸ್ತೇ ಪ್ರಯತ್ನೇನ ||

ಅರ್ಥಃ—ಆಕಾಶವು ಎಲ್ಲ ಕಡೆಯಲ್ಲಿ (ಲೋಕಾಲೋಕ ಪ್ರದೇಶದಲ್ಲಿ) ವ್ಯಾಪ್ತವಾಗಿರುವದರಿಂದ ಅದು 'ಸರ್ವಗ' ಎಂದು ಹೇಳಲ್ಪಡುತ್ತದೆ. ಅಪರಿಣಾಮಿ ಮುಂತಾದ ಲಕ್ಷಣಗಳಿಂದ ಉಳಿದ ದ್ರವ್ಯಗಳನ್ನು ಪ್ರಯತ್ನದಿಂದಾದರೂ ತಿಳಿದುಕೊಳ್ಳಬೇಕು.

ಣಾಣಪವೇಸೋ ವಿ ತಹಾ ಣೇಯಂ ಅಣ್ಣೋಣ್ಣಮಣುಪವೇಸೇಣ ||
ಣಿಯಣಿಯಭಾವಂ ಪಿ ಸಯಾ ಏಗೀಹೂಣ ವಿ ಣ ಮುಯಂತಿ || ೩೮

ಜ್ಞಾನಪ್ರವೇಶೋಪಿ ತಥಾ ಜ್ಞೇಯೋನ್ಯೋನ್ಯಮಣುಪ್ರವೇಶೇನ ||
ನಿಜನಿಜಭಾವಮಪಿ ಸದಾ ಏಕೀಭೂತ್ವಾಪಿ ನ ಮುಂಚಂತಿ ||

ಅರ್ಥಃ—ಬೇರೆ ಬೇರೆ ದ್ರವ್ಯಗಳು ಅಣುಸ್ವರೂಪದಿಂದ ಒಂದರೊಳಗೊಂದು ಕೂಡಿಕೊಳ್ಳುತ್ತವೆ. ಆದರೂ ಅವು ತಮ್ಮ ನಿಜವಾದ ಸ್ವಭಾವವನ್ನು ಎಂದೂ ಬಿಡುವದಿಲ್ಲ. ಇವುಗಳಲ್ಲಿ ಜ್ಞಾನಪ್ರವೇಶವಾಗುತ್ತದೆ. ಅಂದರೆ ತಿಳುಕೊಳ್ಳಲಿಕ್ಕೆ ಯೋಗ್ಯವಾಗುತ್ತವೆ.

## ಆಸ್ರವತತ್ವವು.

ಮಿಚ್ಛತ್ತಾವಿರಇಕಸಾಯಜೋಯಹೇತೂಹಿ ಆಸವಇ ಕಮ್ಮಂ ||
ಜೀವಮ್ಹಿ ಉಹಹಿಮಜ್ಝೇ ಜಹ ಸಲಿಲಂ ಛಿದ್ದಣಾವಾಏ || ೩೯ ||

ಮಿಥ್ಯಾತ್ವಾವಿರತಿಕಷಾಯಯೋಗಹೇತುಭಿರಾಸ್ರವತಿ ಕರ್ಮ ||
ಜೀವೇ ಉದಧಿಮಧ್ಯೇ ಯಥಾ ಸಲಿಲಂ ಛಿದ್ರನೌಕಾಯಾಮ್ ||

ಅರ್ಥಃ—ಸಮುದ್ರದಲ್ಲಿರುವ ತೂತುಳ್ಳನಾವಿನಲ್ಲಿ ಹ್ಯಾಗೆ ನೀರು ಸೇರುವದೋ, ಅದರಂತೆ ಜೀವದಲ್ಲಿ ಮಿಥ್ಯಾತ್ವ, ಅವಿರತಿ, ಕಷಾಯ, ಯೋಗ ಮುಂತಾದ ಕಾರಣಗಳಿಂದ ಕರ್ಮವು ಪ್ರವೇಶಮಾಡುತ್ತದೆ.

## ಪುಣ್ಯಾಪಾಪಾಸ್ರವಗಳು.

ಅರಹಂತಭತ್ತಿಯಾಇಸು ಸುಹೋವಓಗೇಣ ಆಸವಇ ಪುಣ್ಣಂ ||
ವಿವರೀಏಣ ದು ಪಾವಂ ಣಿದ್ದಿಟ್ಠಂ ಜಿಣವರಿಂದೇಹಿಂ || ೪೦ ||

ಅರ್ಹದ್ಭಕ್ತ್ಯಾದಿಷು ಶುಭೋಪಯೋಗೇನ ಆಸ್ರವತಿ ಪುಣ್ಯಮ್ |
ವಿಪರೀತೇನ ತು ಪಾಪಂ ನಿರ್ದಿಷ್ಟಂ ಜಿನವರೇಂದ್ರೈಃ ||

ಅರ್ಥ:—ಅರಿಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು ಇವರಲ್ಲಿ ಭಕ್ತಿ, ಜಿನಪೂಜೆ, ವಂದನೆ, ತೀರ್ಥಯಾತ್ರೆ, ಜೀವದಯೆ ಮುಂತಾದ ಶುಭಕೃತ್ಯಗಳಿಂದ ಪುಣ್ಯದ ಆಸ್ರವವೂ ಆಗುತ್ತವೆ. ಇದರ ವಿರುದ್ಧ ನಡತೆಯಿಂದ ಪಾಪದ ಆಸ್ರಗಳು ಆಗುತ್ತವೆ. ಹೀಗೆ ಶ್ರೀಜಿನೇಶ್ವರರು ಹೇಳಿದ್ದಾರೆ.

## ಬಂಧತತ್ವವು.

ಅಣ್ಣೋಣ್ಣಾಣುಪವೇಸೋ ಜೋ ಜೀವಪಏಸಕಮ್ಮಖಂಧಾಣಂ ||
ಸೋ ಪಯಡಿಟ್ಠಿದಿಅಣುಭವಪಏಸದೋ ಚಉವಿಹೋ ಬಂಧೋ ||೪೧||

ಅನ್ಯೋನ್ಯಮನುಪ್ರವೇಶೋ ಯೋ ಜೀವಪ್ರದೇಶಕರ್ಮಸ್ಕಂಧಾನಾಮ್ ||
ಸ ಪ್ರಕೃತಿಸ್ಥಿತ್ಯನುಭಾಗಪ್ರದೇಶತಶ್ಚತುರ್ವಿಧೋ ಬಂಧಃ ||

ಅರ್ಥಃ—ಜೀವದ ಪ್ರದೇಶವೂ ಕರ್ಮಸ್ಕಂಧವೂ ಒಂದಕ್ಕೊಂದು ಕೂಡಿದರೆ ಬಂಧವೆನ್ನುವರು. ಅದರಲ್ಲಿ ಪ್ರಕೃತಿ, ಸ್ಥಿತಿ, ಅನುಭಾಗ, ಪ್ರದೇಶ ಎಂದು ನಾಲ್ಕು ಪ್ರಕಾರಗಳುಂಟು.

## ಸಂವರತತ್ವವು.

ಸಮ್ಮತ್ತೇಹಿ ವಏಹಿಂ ಕೋಹಾಇಕಸಾಯಣಿಗ್ಗಹಗುಣೇಹಿಂ ||
ಜೋಗಣಿರೋಹೇಣ ತಹಾ ಕಮ್ಮಾಸವಸಂವರೋ ಹೋಇ || ೪೨ ||

ಸಮ್ಯಕ್ತ್ವೈರ್ವ್ರತೈಃ ಕ್ರೋಧಾದಿಕಷಾಯನಿಗ್ರಹಗುಣೈಃ ||
ಯೋಗನಿರೋಧೇನ ತಥಾ ಕರ್ಮಾಸ್ರವಸಂವರೋ ಭವತಿ ||

ಅರ್ಥಃ--ಸಮ್ಯಕ್ತ್ವ, ವ್ರತ, ಕ್ರೋಧಾದಿ ಕಷಾಯಗಳ ನಿಗ್ರಹ, ಮನೋವಾಕ್ಕಾಯಗಳ ನಿರೋಧ ಮುಂತಾದ ಕಾರಣಗಳಿಂದ ಕರ್ಮಾಸ್ರವದ ಸಂವರವು ಆಗುತ್ತದೆ. ಅಂದರೆ ಹೊಸದಾಗಿ ಕರ್ಮವು ಬರುವದಿಲ್ಲ.

## ನಿರ್ಜರಾತತ್ವವು.

ಸವಿಪಾಗಾ ಅವಿಪಾಗಾ ದುವಿಹಾ ಪುಣ ಣಿಜ್ಜರಾ ಮುಣೇಯವ್ವಾ ||
ಸವ್ವೇಸಿಂ ಜೀವಾಣಂ ಪಢಮಾ ಬಿದಿಯಾ ತವಸ್ಸೀಣಂ || ೪೩ ||

ಸವಿಪಾಕಾ ಅವಿಪಾಕಾ ದ್ವಿವಿಧಾ ಪುನರ್ನಿರ್ಜರಾ ಮಂತವ್ಯಾ ||
ಸರ್ವೇಷಾಂ ಜೀವಾನಾಂ ಪ್ರಥಮಾ ದ್ವಿತೀಯಾ ತಪಸ್ವಿನಾಮ್ ||

ಅರ್ಥಃ--ಕ್ರಮವಾಗಿ ಕರ್ಮವು ನಾಶ ಹೊಂದುವದಕ್ಕೆ ನಿರ್ಜರೆ ಎಂಬ ಹೆಸರುಂಟು. ಈ ನಿರ್ಜರೆಯು ಸವಿಪಾಕ ಮತ್ತು ಅವಿಕಾಕ ಎಂದು ಎರಡು ವಿಧವಾಗಿರುವದು. ಸಾಮಾನ್ಯ ಜೀವಗಳಿಗೆ ಸವಿಪಾಕ ನಿರ್ಜರೆಯಿಂದಲೂ ತಪಸ್ವಿಗಳಿಗೆ ಅವಿಪಾಕ ನಿರ್ಜರೆಯಿಂದಲೂ ಕರ್ಮವು ನಿರ್ಜರೆಯು ಆಗುತ್ತದೆ.

ಜಹ ರುದ್ಧಮ್ಮಿ ಪವೇಸೇ ಸುಸ್ಸಇ ಸರಪಾಣಿಯಂ ರವಿಕಿರಣೇಹಿಂ ॥
ತಹ ಆಸವೇ ಣಿರುದ್ಧೇ ತವಸಾ ಕಮ್ಮಂ ಮುಣೇಯವ್ವಂ ॥ ೪೪ ॥

ಯಥಾ ರುದ್ಧೇ ಪ್ರವೇಶೇ ಶುಷ್ಯತಿ ಸರಃಪಾನೀಯಂ ರವಿಕಿರಣೈಃ ॥
ತಥಾ ಆಸ್ರವೇ ನಿರುದ್ಧೇ ತಪಸಾ ಕರ್ಮ ಮಂತವ್ಯಮ್ ॥

ಅರ್ಥಃ—ಸರೋವರಕ್ಕೆ ನೀರು ಬರುವ ದಾರಿಯನ್ನು ಕಟ್ಟು ಮಾಡಿದರೆ, ಉಳಿದ ನೀರು ಸೂರ್ಯನ ತಾಪದಿಂದ ಹ್ಯಾಗೆ ಅಟ್ಟಿಸುವದೋ, ಅದರಂತೆ ಕರ್ಮ ಬರುವ ದ್ವಾರವನ್ನು (ಸಂವರದಿಂದ) ಮುಚ್ಚಿದ ಮೇಲೆ ತಪಸ್ಸಿನಿಂದ ಕರ್ಮವು ನಾಶವಾಗುತ್ತದೆ.

## ಮೋಕ್ಷತತ್ವವು.

ಣಿಸ್ಸೇಸಕಮ್ಮಮೋಕ್ಖೋ ಮೋಕ್ಖೋ ಜಿಣಸಾಸಣೇ ಸಮುದ್ದಿಠ್ಠೋ ॥
ತಮ್ಹಿ ಕಯೇ ಜೀವೋ ಯಂ ಅಣುಹವಇ ಅಣಂತಯಂ ಸೋಕ್ಖಂ ॥೪೫

ನಿಃಶೇಷಕರ್ಮಮೋಕ್ಷೋ ಮೋಕ್ಷೋ ಜಿನಶಾಸನೇ ಸಮುದ್ದಿಷ್ಟಃ ॥
ತಸ್ಮಿನ್ ಕೃತೇ ಜೀವೋಯಮನುಭವತ್ಯನಂತಂ ಸೌಖ್ಯಮ್ ॥

ಅರ್ಥಃ—ಯಾವತ್ತೂ ಕರ್ಮಗಳಿಂದ ಬಿಡುಗಡೆ ಹೊಂದುವದೇ ಮೋಕ್ಷ ವೆಂದು ಜಿನಶಾಸ್ತ್ರದಲ್ಲಿ ಹೇಳಿರುತ್ತದೆ. ಸಕಲ ಕರ್ಮಗಳು ನಾಶವಾದ ಮೇಲೆ ಈ ಜೀವವು ಅನಂತ ಸುಖಗಳನ್ನು ಅನುಭವಿಸುತ್ತದೆ.

## ತತ್ವಶ್ರದ್ಧಾನದ ವಿಶೇಷ ಸಾಧನಗಳು.

ಣಿದ್ದೇಸಂ ಸಾಮಿತ್ತಂ ಸಾಹಣಮಹಿಯರಣಠಿದಿವಿಹಾಣಾಣಿ ॥
ಏಏಹಿ ಸವ್ವಭಾವಾ ಜೀವಾದೀಯಾ ಮುಣೇಯವ್ವಾ ॥ ೪೬ ॥

ನಿರ್ದೇಶಃ ಸ್ವಾಮಿತ್ವಂ ಸಾಧನಮಧಿಕರಣಸ್ಥಿತಿವಿಧಾನಿ ॥
ಏತೈಃ ಸರ್ವೇ ಭಾವಾ ಜೀವಾದಿಕಾ ಜ್ಞಾತವ್ಯಾಃ ॥

ಅರ್ಥಃ—ನಿರ್ದೇಶ, ಸ್ವಾಮಿತ್ವ, ಸಾಧನ, ಅಧಿಕರಣ, ಸ್ಥಿತಿ, ಮತ್ತು ವಿಧಾನ ಈ ಆರು ಸಾಧನಗಳಿಂದ ಜೀವ ಮುಂತಾದ ಪದಾರ್ಥಗಳನ್ನು ತಿಳಿದುಕೊಳ್ಳಬೇಕು.

ಟಿಪ್ಪಣಿಃ—(೧) ತತ್ವಾರ್ಥಶ್ರದ್ಧಾನವೇ ಸಮ್ಯಕ್ತ್ವವು ಮತ್ತು ಚೇತನವೇ ಜೀವದ ಲಕ್ಷಣವು ಎಂದು ಹೇಳುವದು ನಿರ್ದೇಶವು. (೨) ಜೀವಕ್ಕೆ ಸಮ್ಯಗ್ದರ್ಶನವು ಉಂಟಾಗುವದೆಂದೂ ಜೀವವು ಸಮ್ಯಕ್ತ್ವದ ಸ್ವಾಮಿಯೆಂದೂ ಹೇಳುವದು ಸ್ವಾಮಿತ್ವವು. (೩) ಅಂತರಂಗ, ಬಹಿರಂಗ ಕಾರಣಗಳಿಂದ ಸಮ್ಯಗ್ದರ್ಶನವನ್ನೂ ಅಥವಾ ಜೀವವನ್ನೂ ತಿಳಿಯುವದು ಸಾಧನವು. (೪) ಸಮ್ಯಗ್ದರ್ಶನವು ಜೀವದ ಬಳಿಯಲ್ಲಿರುತ್ತದೆಂತಲೂ ಜೀವವು ನಿಶ್ಚಯನಯದಿಂದ ತನ್ನ ಬಳಿಯಲ್ಲಿ

ಮತ್ತು ವ್ಯವಹಾರ ನಯದಿಂದ ಶರೀರದಲ್ಲಿ ಅಥವಾ ಲೋಕದಲ್ಲಿ ಇರುತ್ತದೆಂತಲೂ ಹೇಳುವದು ಅಧಿಕರಣವು. (೪) ಅಂತರ್ಮುಹೂರ್ತ, ಸಾದಿ, ಅನಂತ ಮುಂತಾದ ಕಾಲಗಳು ಸಮ್ಯಗ್ದರ್ಶನಕ್ಕೆ ಇರುತ್ತವೆಂದೂ, ಜೀವದ ಕಾಲವು ಅನಾದಿ, ಅನಂತ ಇರುತ್ತದೆಂದೂ ಹೇಳುವದು ಸ್ಥಿತಿಯು. (೬) ಭೇದಗಳನ್ನು ಹೇಳುವದು ವಿಧಾನವು.

ಸತ್ತವಿ ತಚ್ಚಾಣಿ ಮಏ ಭಣಿಯಾ ಜೈಣಾಗಮಾಣುಸಾರೇಣ ॥
ಏಯಾಣಿ ಸದ್ದಹಂತೋ ಸಮ್ಮಾಇಟ್ಠೀ ಮುಣೇಯವ್ವೋ ॥ ೪೭ ॥

ಸಪ್ತಾಪಿ ತತ್ತ್ವಾನಿ ಮಯಾ ಭಣಿತಾನಿ ಜೈನಾಗಮಾನುಸಾರೇಣ ॥
ಏತಾನಿ ಶ್ರದ್ದಧಾನಃ ಸಮ್ಯಗ್ದೃಷ್ಟಿರ್ಜ್ಞಾತವ್ಯಃ ॥

ಅರ್ಥಃ—ಜಿನಶಾಸ್ತ್ರವನ್ನು ಅನುಸರಿಸಿ ಏಳು ತತ್ವಗಳನ್ನು ಹೇಳಿದೆನು. ಇವುಗಳ ಶ್ರದ್ಧಾನವನ್ನು ಮಾಡುವವನು ಸಮ್ಯಗ್ದೃಷ್ಟಿ ಎಂದು ತಿಳಿಯಬೇಕು.

## ಎಂಟು ಅಂಗಗಳ ಹೆಸರು.

ಣಿಸ್ಸಂಕಾ ಣಿಕ್ಕಂಖಾ ಣಿವ್ವಿದಿಗಿಚ್ಛಾ ಅಮೂಢದಿಟ್ಠೀ ಯ ॥
ಉವಗೂಹಣ ಠಿದಿಯರಣಂ ವಚ್ಛಲ್ಲ ಪಹಾವಣಾ ಚೇವ ॥ ೪೮ ॥

ನಿಃಶಂಕಾ ನಿಷ್ಕಾಂಕ್ಷಾ ನಿರ್ವಿಚಿಕಿತ್ಸಾ ಅಮೂಢದೃಷ್ಟಿಶ್ಚ ॥
ಉಪಗೂಹನಂ ಸ್ಥಿತೀಕರಣಂ ವಾತ್ಸಲ್ಯಂ ಪ್ರಭಾವನಾ ಚೈವ ॥

ಅರ್ಥಃ—ನಿಶ್ಶಂಕೆ, ನಿಷ್ಕಾಂಕ್ಷೆ, ನಿರ್ವಿಚಿಕಿತ್ಸೆ, ಅಮೂಢದೃಷ್ಟಿ, ಉಪಗೂಹನ, ಸ್ಥಿತೀಕರಣ, ವಾತ್ಸಲ್ಯ, ಪ್ರಭಾವನೆ ಹೀಗೆ ಎಂಟು ಗುಣಗಳು ಸಮ್ಯಕ್ತ್ವದ ಅಂಗಗಳೆಂದು ಹೇಳಲ್ಪಡುತ್ತವೆ. ಈ ಅಂಗಗಳಿಲ್ಲದೆ ಸಮ್ಯಗ್ದರ್ಶನವು ಉಂಟಾಗಲಾರದು.

## ಎಂಟು ಗುಣಗಳು (ಅಂತರಂಗ ಚಿನ್ಹಗಳು).

ಸಂವೇಓ ಣಿವ್ವೇಓ ಣಿಂದಾ ಗರಹಾ ಉವಸಮೋ ಭತ್ತೀ ॥
ವಚ್ಛಲ್ಲಂ ಅಣುಕಂಪಾ ಅಟ್ಠಗುಣಾ ಹುಂತಿ ಸಮ್ಮತ್ತೇ ॥ ೪೯ ॥

ಸಂವೇಗೋ ನಿರ್ವೇಗೋ ನಿಂದಾ ಗರ್ಹಾ ಉಪಶಮೋ ಭಕ್ತಿಃ ॥
ವಾತ್ಸಲ್ಯಮನುಕಂಪಾ ಅಷ್ಟಗುಣಾ ಭವಂತಿ ಸಮ್ಯಕ್ತ್ವೇ ॥

ಅರ್ಥಃ—ಸಂವೇಗ (ಧರ್ಮ ಮತ್ತು ಧರ್ಮಫಲದ ಬಗ್ಗೆ ಪ್ರೀತಿಯು), ನಿರ್ವೇಗ (ಸಂಸಾರದಲ್ಲಿ ವೈರಾಗ್ಯ), ನಿಂದೆ (ತನ್ನ ವಿಷಯದಲ್ಲಿ) ಗರ್ಹಾ (ತನ್ನನ್ನು ತಾನೇ ಹಳಿಯುವದು), ಉಪಶಮ (ರಾಗದ್ವೇಷಗಳ ಅನುದ್ರೇಕ),

ಭಕ್ತಿ (ಅರಹಂತ ಮುಂತಾದವರಲ್ಲಿ ಪೂಜ್ಯಬುದ್ಧಿ), ವಾತ್ಸಲ್ಯ (ಧರ್ಮದಲ್ಲಿ ಸ್ನೇಹ), ಅನುಕಂಪೆ (ದಯೆ) ಹೀಗೆ ಎಂಟು ಗುಣಗಳು ಸಮ್ಯಕ್ತ್ವದ ಅಂತರಂಗ ಚಿನ್ಹಗಳು ಇರುತ್ತವೆ.

ಇಚ್ಚಾಇಗುಣಾ ವಹಓ ಸಮ್ಮತ್ತವಿಸೋಹಿಕಾರಯಾ ಭಣಿಯಾ ||
ಜೋ ಉಜ್ಜಮೇದಿ ಐಸು ಸಮ್ಮಾಇಠ್ಠೀ ಜಿಣಖ್ಖಾದೋ || ೫೦ ||

ಇತ್ಯಾದಿಗುಣಾ ಬಹವಃ ಸಮ್ಯಕ್ತ್ವವಿಶುದ್ಧಿಕಾರಕಾ ಭಣಿತಾಃ ||
ಯ ಉದ್ಯಮಯತಿ ಐಷು ಸಮ್ಯಗ್ದೃಷ್ಟಿರ್ಜಿನಖ್ಯಾತಃ ||

ಅರ್ಥ:—ಮೇಲೆ ಹೇಳಿದ ಗುಣಗಳಂತೆ ಮತ್ತೂ ಕೆಲವು ಗುಣಗಳು ಸಮ್ಯಕ್ತ್ವದ ಶೋಧನೆಯನ್ನು ಮಾಡುತ್ತವೆ. ಈ ಗುಣಗಳನ್ನು ಸಂಪಾದಿಸುವದಕ್ಕೂ ತನ್ನಲ್ಲಿ ಸ್ಥಿರವಾಗಿ ನಿಲ್ಲಿಸುವದಕ್ಕೂ ಪ್ರಯತ್ನ ಮಾಡುವವನು ಸಮ್ಯಗ್ದೃಷ್ಟಿಯು, ಎಂದು ಶ್ರೀಜಿನೇಶ್ವರನು ಹೇಳಿದ್ದಾನೆ.

## ಶುದ್ಧ ಸಮ್ಯಕ್ತ್ವದ ಸಾಮರ್ಥ್ಯವು.

ಸಂಕಾಇದೋಸರಹಿಓ ಣಿಸ್ಸಂಕಾಇಗುಣಜುಯಂ ಪರಮಂ ||
ಕಮ್ಮಣಿಜ್ಜರಣಹೇಓ ತಂ ಸುದ್ಧಂ ಹೋಇ ಸಮ್ಮತಂ || ೫೧ ||

ಶಂಕಾದಿದೋಷರಹಿತಂ ನಿಃಶಂಕಾದಿಗುಣಯುತಂ ಪರಮಮ್ ||
ಕರ್ಮನಿರ್ಜರಹೇತುಂ ತಚ್ಛುದ್ಧಂ ಭವತಿ ಸಮ್ಯಕ್ತ್ವಮ್ ||

ಅರ್ಥ:—ಶಂಕೆ, ಕಾಂಕ್ಷೆ, ವಿಚಿಕಿತ್ಸೆ, ಮೂಢತೆ, ಆತ್ಮಸ್ತುತಿ, ಅಸ್ಥಿತೀಕರಣ, ಅವಾತ್ಸಲ್ಯ, ಅಪ್ರಭಾವನೆ ಮುಂತಾದ ಎಂಟು ದೋಷಗಳಿಂದ ರಹಿತವಾದ, ನಿಶ್ಶಂಕೆ ಮೊದಲಾದ ಎಂಟು ಅಂಗಗಳಿಂದ ಯುಕ್ತವಾದ ಶುದ್ಧವಾದ ಸಮ್ಯಗ್ದರ್ಶನವು ಕರ್ಮಗಳ ನಿರ್ಜರೆಯನ್ನು ಮಾಡುವದಕ್ಕೆ ಕಾರಣವಾಗುತ್ತದೆ.

## ಅಷ್ಟಾಂಗಧಾರಿಗಳಾದ ಸಮ್ಯಕ್ತ್ವಿಗಳು.

ರಾಯಗಿಹೇ ಣಿಸ್ಸಂಕೋ ಚೋರೋ ಣಾಮೇಣ ಅಂಜಣೋ ಭಣಿಓ ||
ಚಂಪಾಏ ಣಿಕ್ಕಂಖಾ ವಣಿಗಸುದಾಣಂತಮಇಣಾಮಾ || ೫೨ ||
ಣಿವ್ವಿದಿಗಿಚ್ಛೋ ರಾಓ ಉದ್ದಾಯಣು ಣಾಮ ರುದ್ದವರಣಯರೇ ||
ರೇವಇ ಮಹುರಾಣಯರೇ ಅಮೂಢದಿಠ್ಠೀ ಮುಣೇಯವ್ವಾ || ೫೩ ||
ಠಿದಿಯರಣಗುಣಉಪತ್ತೋ ಮಾಗಹಣಯರಮ್ಮಿ ವಾರಿಸೇಣೋ ಹು ||
ಹಥಿಣಾಪುರಮ್ಮಿ ಣಯರೇ ವಚ್ಚಲ್ಲಂ ವಿಣ್ಹುಣಾ ರಇಯಂ || ೫೪ ||
ಉವಗೂಹಣಗುಣಜುತ್ತೋ ಜಿಣಯತ್ತೋ ತಾಮಲಿತ್ತ ಣಯರೀಏ ||
ವಜ್ಜಕುಮಾರೇಣ ಕಯಾ ಪಹಾವಣಾ ಚೇವ ಮಹುರಾಏ || ೫೫ ||

ರಾಜಗೃಹೇ ನಿಃಶಂಕಶ್ಚೌರೋ ನಾಮ್ನಾಂಜನೋ ಭಣಿತಃ ॥
ಚಂಪಾಯಾಂ ನಿಷ್ಕಾಂಕ್ಷಾ ವಣಿಕ್ಸುತಾನಂತಮತಿರ್ನಾಮ್ನಾ ॥
ನಿರ್ವಿಚಿಕಿತ್ಸೋ ರಾಜಾ ಉದ್ದಾಯನೋ ನಾಮ ರುದ್ರವರನಗರೇ ॥
ರೇವತೀ ಮಥುರಾನಗರೇ ಅಮೂಢದೃಷ್ಟಿಶ್ಚ ಜ್ಞಾತವ್ಯಾ ॥
ಸ್ಥಿತೀಕರಣಗುಣಂ ಪ್ರಾಪ್ತೋ ಮಾಗಧನಗರೇ ವಾರಿಷೇಣಃ ಖಲು ॥
ಹಸ್ತಿನಾಪುರೇ ನಗರೇ ವಾತ್ಸಲ್ಯಂ ವಿಷ್ಣುನಾ ರಚಿತಮ್ ॥
ಉಪಗೂಹನಗುಣಯುಕ್ತೋ ಜಿನದತ್ತಸ್ತಾಮ್ರಲಿಪ್ತನಗರ್ಯಾಮ್ ॥
ವಜ್ರಕುಮಾರೇಣ ಕೃತಾ ಪ್ರಭಾವನಾ ಚೈವ ಮಥುರಾಯಾಮ್ ॥

ಅರ್ಥ:—ಅಷ್ಟಾಂಗ ಸಮ್ಯಕ್ತ್ವವನ್ನು ಪಾಲಿಸಿದ ಅನೇಕ ಭವ್ಯ ಜೀವಗಳು ಸದ್ಗತಿಯನ್ನು ಹೊಂದಿದವು. ಒಂದೊಂದು ಅಂಗವನ್ನು ಪಾಲಿಸಿ ಲೋಕಮಾನ್ಯತೆಯನ್ನೂ ಸದ್ಗತಿಯನ್ನೂ ಹೊಂದಿದ ಜೀವಗಳ ನಾಮವನ್ನು ಹೇಳುತ್ತಾರೆ.:— ರಾಜಗೃಹನಗರದಲ್ಲಿ ಅಂಜನಚೋರನು ನಿಶ್ಶಂಕೆ ಅಂಗದಲ್ಲೂ, ಚಂಪಾನಗರದಲ್ಲಿ ಅನಂತಮತಿಯೆಂಬ ವೈಶ್ಯಕನ್ಯೆಯು ನಿಷ್ಕಾಂಕ್ಷೆ ಅಂಗದಲ್ಲೂ, ರೌದ್ರವರ ನಗರದಲ್ಲಿ ಉದ್ದಾಯನನೆಂಬ ಅರಸನು ನಿರ್ವಿಚಿಕಿತ್ಸೆ ಅಂಗದಲ್ಲೂ, ಮಥುರಾನಗರದಲ್ಲಿ ರೇವತೀರಾಣಿಯು ಅಮೂಢದೃಷ್ಟಿಯೆಂಬ ಅಂಗದಲ್ಲೂ, ಮಾಗಧನಗರದಲ್ಲಿ ವಾರಿಷೇಣರಾಜನು ಸ್ಥಿತೀಕರಣ ಅಂಗದಲ್ಲೂ, ಹಸ್ತಿನಾಪಟ್ಟಣದಲ್ಲಿ ವಿಷ್ಣುಕುಮಾರನು ವಾತ್ಸಲ್ಯ ಅಂಗದಲ್ಲೂ, ತಾಮ್ರಲಿಪ್ತನಗರದಲ್ಲಿ ಜಿನದತ್ತನು ಉಪಗೂಹನ ಗುಣದಿಂದಲೂ ಪ್ರಸಂಶೆಯನ್ನು ಹೊಂದಿ, ಜೈನಧರ್ಮದ ಮಹತ್ವವನ್ನು ಜಗತ್ತಿಗೆ ತಿಳಿಸಿದರು. ಹಾಗು ಮಥುರಾ ಪಟ್ಟಣದಲ್ಲಿ ವಜ್ರಕುಮಾರನು ಪ್ರಭಾವನಾ ಅಂಗವನ್ನು ಪ್ರಕಟಿಸಿ, ಜೈನಧರ್ಮದ ಪ್ರಭಾವವನ್ನು ಪ್ರಸಿದ್ಧ ಮಾಡಿದನು.

## ಪೂರ್ಣ-ಸಮ್ಯಕ್ತ್ವದ ಲಕ್ಷಣವು.

ಏರಿಸಗುಣಅಠ್ಠಜುಯಂ ಸಮ್ಮತ್ತಂ ಜೋ ಧರೇಇ ದಿಢಚಿತ್ತೋ ॥
ಸೋ ಹವಇ ಸಮ್ಮಾದಿಠ್ಠೀ ಸದ್ದಹಮಾಣೋ ಪಯತ್ಥೇ ಯ ॥ ೫೬ ॥

ಈದೃಶಗುಣಾಷ್ಟಯುತಂ ಸಮ್ಯಕ್ತ್ವಂ ಯೋ ಧರತಿ ದೃಢಚಿತ್ತಃ ॥
ಸ ಭವತಿ ಸಮ್ಯಗ್ದೃಷ್ಟಿಃ ಶ್ರದ್ದಧಾನಃ ಪದಾರ್ಥೇ ಚ ॥

ಅರ್ಥಃ—ಶ್ರೀಜಿನೇಶ್ವರನಿಂದ ನಿರೂಪಿಸಲ್ಪಟ್ಟ ಒಂಭತ್ತು ಪದಾರ್ಥಗಳಲ್ಲಿ ಭಕ್ತಿಯನ್ನಿಡುವವನೂ ದೃಢನಿಶ್ಚಯಿಯೂ ಆದ ಪುರುಷನು ಎಂಟು ಅಂಗಗಳನ್ನು ಪಾಲಿಸಬಲ್ಲನು. ಆತನೇ ಸಮ್ಯಗ್ದೃಷ್ಟಿ ಆಗುತ್ತಾನೆ.

## ಸಮ್ಯಗ್ದೃಷ್ಟಿಗಳ ವಿಶೇಷ ಕರ್ತವ್ಯವು.

ಪಂಚುಂಬರಸಹಿಯಾಈ ಸತ್ತವಿ ವಿಸಣಾಈ ಜೋ ವಿವಿಜ್ಜೇಈ ॥
ಸಮ್ಮತ್ತವಿಸುದ್ಧಮಈ ಸೋ ದಂಸಣಸಾವಓ ಭಣಿಓ ॥ ೫೭ ॥

ಪಂಚೋದುಂಬರಸಹಿತಾನಿ ಸಪ್ತಾಪಿ ವ್ಯಸನಾನಿ ಯೋ ವಿವರ್ಜಯತಿ ॥
ಸಮ್ಯಕ್ತ್ವವಿಶುದ್ಧಮತಿಃ ಸ ದರ್ಶನಶ್ರಾವಕೋ ಭಣಿತಃ ॥

ಅರ್ಥಃ — ಪಂಚಔದುಂಬರಗಳನ್ನು ಹಾಗು ಸಪ್ತವ್ಯಸನಗಳನ್ನು ಬಿಟ್ಟವನೂ ಸಮ್ಯಗ್ದರ್ಶನದಿಂದ ಬುದ್ಧಿ ಸ್ಥಿರನಾದವನೂ ದರ್ಶನಿಕನೆಂದು ತಿಳಿಯಬೇಕು.

ಉಂಬರವಡಪೀಪಲಪಿಯಪಾಯರಸಂಧಾಣತರುಪಸೂಣಾಇಂ ॥
ಣಿಚ್ಚಂ ತಸಸಂಸಿದ್ಧಾಇ ತಾಇಂ ಪರಿವಜ್ಜಿಯವ್ವಾಇಂ ॥ ೫೮ ॥

ಉದುಂಬರವಟಪಿಪ್ಪಲಫಲಪಾಕರಸಂಧಾನತರುಪ್ರಸೂನಾನಿ ॥
ನಿತ್ಯಂ ತ್ರಸಸಂಸಿದ್ಧಾನಿ ತಾನಿ ಪರಿವರ್ಜಯಿತವ್ಯಾನಿ ॥

ಅರ್ಥಃ—ಅತ್ತಿ, ಆಲ, ಅರಳಿ, ಬಸರಿ, ಗೋಳಿ ಎಂಬ ಐದು ಹಾಲ್ಮರಗಳ ಹಣ್ಣುಗಳನ್ನು ಮತ್ತು ತ್ರಸಜೀವಗಳ ಉತ್ಪತ್ತಿಯ ಪದಾರ್ಥಗಳನ್ನು ಸಮ್ಯಗ್ದೃಷ್ಟಿಯು ಸೇವಿಸಬಾರದು.

## ಸಪ್ತವ್ಯಸನಗಳ ತ್ಯಾಗವು.

ಜೂಯಂ ಮಜ್ಜಂ ಮಂಸಂ ವೇಸಾ ಪಾರದ್ಧಿ ಚೋರ ಪರಯಾರಂ ॥
ದುಗ್ಗಇಗಮಣಸ್ಸೇದಾಣಿ ಹೇಉಭೂದಾಣಿ ಪಾವಾಣಿ ॥ ೫೯ ॥

ದ್ಯೂತಂ ಮದ್ಯಂ ಮಾಂಸಂ ವೇಶ್ಯಾ ಪಾಪರ್ದ್ಧಿಶ್ಚೌರ್ಯಂ ಪರದಾರಾಃ ॥
ದುರ್ಗತಿಗಮನಸ್ಯೈತಾನಿ ಹೇತುಭೂತಾನಿ ಪಾಪಾನಿ ॥

ಅರ್ಥಃ—ಜೂಜಾಡುವದು, ಸರಾಯು ಕುಡಿಯುವದು, ಮಾಂಸತಿನ್ನುವದು, ಸೂಳೆಯರ ಸಹವಾಸ ಮಾಡುವದು, ಬೇಟೆಯಾಡುವದು, ಕಳವು ಮಾಡುವದು, ಪರದಾರಗಮನ ಮಾಡುವದು ಹೀಗೆ ಏಳು ವ್ಯಸನಗಳು ಮನುಷ್ಯನ ಅಧೋಗತಿಗೆ ಕಾರಣವಾಗಿರುತ್ತವೆ. ಆದ್ದರಿಂದ ಇವುಗಳನ್ನು ಬಿಡಬೇಕು.

ಜೂಯಂ ಖೇಲಂತಸ್ಸ ಹು ಕೋಹೋ ಮಾಯಾ ಯ ಮಾಣಲೋಹಾ ಯ ॥
ಏಏ ಹವಂತಿ ತಿವ್ವಾ ಪಾವಇ ಪಾವಂ ತದೋ ವಹುಳಂ ॥ ೬೦ ॥

ದ್ಯೂತಂ ಖೇಲಯತ: ಖಲು ಕ್ರೋಧೋ ಮಾಯಾ ಚ ಮಾನಲೋಭಾಶ್ಚ ॥
ಏತೇ ಭವಂತಿ ತೀವ್ರಾಃ ಪ್ರಾಪ್ನೋತಿ ಪಾಪಂ ತತೋ ಬಹುಲಮ್ ॥

ಅರ್ಥಃ—ಜೂಜಾಡುವವನಿಗೆ ಶಿಟ್ಟು, ಮೋಹ, ಗರ್ವ, ಲೋಭ ಮುಂತಾದ ಕಷಾಯಗಳು ಹೆಚ್ಚಾಗುತ್ತವೆ. ಇವುಗಳಿಂದ ಪಾಪವು ಬೆಳೆಯುತ್ತದೆ.

ಪಾವೇಣ ತೇಣ ಜರಮರಣವೀಚಿಪವರಮ್ಮಿ ದುಕ್ಖಸಲಿಲಮ್ಮಿ ॥
ಚಉಗಇಗಮಣಾವತ್ತಮ್ಮಿ ಹಿಂಡಇ ಭವಸಮುದ್ದಮ್ಮಿ ॥ ೬೧ ॥

ಪಾಪೇನ ತೇನ ಜರಾಮರಣವೀಚೀಪ್ರಚುರೇ ದುಃಖಸಲಿಲೇ ॥
ಚತುರ್ಗತಿಗಮನಾವರ್ತೇ ಭ್ರಮತಿ ಭವಸಮುದ್ರೇ ॥

ಅರ್ಥಃ—ಪಾಪಸಂಯೋಗದಿಂದ ಪ್ರಾಪ್ತವಾದ ಮುಪ್ಪು, ಮರಣಗಳೆಂಬ ತೆರೆಗಳೂ ದು:ಖವೆಂಬ ಜಲವೂ ಚತುರ್ಗತಿಯೆಂಬ ತಿರುಗಣೀ ಮಡವೂ ಇದ್ದ ಸಂಸಾರವೆಂಬ ಸಮುದ್ರದಲ್ಲಿ ಜೀವವು ಅನಂತಕಾಲ ಭ್ರಮಣ ಮಾಡುತ್ತದೆ.

ತತ್ಥವಿ ದುಕ್ಖಮಣಂತಂ ಛೇಯಣಭೇಯಣವಿಕತ್ತಣಾಈಣಂ ॥
ಪಾವಇ ಸರಣವಿರಹಿಓ ಜುವ್ವಸ್ಸ ಫಳೇಣ ಸೋ ಜೀವೋ ॥ ೬೨ ॥

ತತ್ರಾಪಿ ದು:ಖಮನಂತಂ ಛೇದನಭೇದನವಿಕರ್ತನಾದೀನಿ ॥
ಪ್ರಾಪ್ನೋತಿ ಶರಣವಿರಹಿತೋ ದ್ಯೂತಸ್ಯ ಫಲೇನ ಸ ಜೀವ: ॥

ಅರ್ಥಃ—ಅಲ್ಲಿ (ನಾರಕ ಪರ್ಯಾಯದಲ್ಲಿ) ಯಾದರೂ ಕಡಿಯುವದು, ಹೊಡಿಯುವದು, ಕತ್ತರಿಸುವದು ಮುಂತಾದ ಅನೇಕ ದು:ಖಗಳನ್ನು ಜೂಜಾಡುವವನು ಭೋಗಿಸುತ್ತಾನೆ.

ಣ ಗಣಇ ಇಠ್ಠಮಿತ್ತಂ ಣ ಗುರುಂ ಣ ಮಾಯರಂ ಯ ಪಿಯರಂ ವಾ ॥
ಜೂಯಂಧೋ ಣ ಮಣ್ಣಇ ಜಹ ಕುಣ್ಣಇ ಅವಜ್ಜಂ ಬಹುಳಂ ॥ ೬೩ ॥

ನ ಗಣಯತೀಷ್ಟಮಿತ್ರಂ ನ ಗುರುಂ ನ ಮಾತರಂ ಚ ಪಿತರಂ ವಾ ॥
ದ್ಯೂತಾಂಧೋ ನ ಮನ್ಯತೇ ಯಥಾ ಕರೋತ್ಯವದ್ಯಂ ಬಹುಲಮ್ ॥

ಅರ್ಥಃ—ಜೂಜಿನಿಂದ ಕುರಡನಾದವನು ತಂದೆತಾಯಿ, ಇಷ್ಟಮಿತ್ರ ಮುಂತಾದವರನ್ನು ಲೆಕ್ಕಿಸುವದಿಲ್ಲ. ಯಾವದರಿಂದ ಪಾಪ ಹೆಚ್ಚಾಗುವದೋ, ಆ ಆಚರಣೆಯನ್ನು ಮಾಡುತ್ತಾನೆ.

ಸಜಣೇ ಯ ಪರಜಣೇ ವಾ ದೇಸೇ ಸವ್ವತ್ಥ ಹೋಇ ಣಿಲ್ಲಜ್ಜೋ ॥
ಮಾಯಾವಿ ಣ ವಿಸ್ಸಸಈ ವಚ್ಚಇ ಜೂವಂ ರಮಂತಸ್ಸ ॥ ೬೪ ॥

ಸ್ವಜನೇ ಚ ಪರಜನೇ ವಾ ದೇಶೇ ಸರ್ವತ್ರ ಭವತಿ ನಿರ್ಲಜ್ಜ: ॥
ಮಾತಾಪಿ ನ ವಿಶ್ವಸಿತಿ ವಚನೇ ದ್ಯೂತಂ ರಮಮಾಣಸ್ಯ ॥

ಅರ್ಥಃ—ಜೂಜಾಡುವ ಮನುಷ್ಯನು ತನ್ನ ಬಳಗದವರಲ್ಲಿಯೂ ಅನ್ಯ ಜನರಲ್ಲಿಯೂ ನಿರ್ಲಜ್ಜನಾಗುವದಲ್ಲದೆ, ದೇಶದಲ್ಲೆಲ್ಲ ಆಗುತ್ತಾನೆ. ಅವನ ಮಾತಿನಲ್ಲಿ ತಾಯಿಯಾದರೂ ವಿಶ್ವಾಸವಿಡುವದಿಲ್ಲ.

ಅಗ್ಗಿವಿಸಚೋರಸಪ್ಪಾ ದುಕ್ಖಂ ಥೋಕಂ ಕುಣಂತಿ ಇಹಳೋಏ ॥
ದುಕ್ಖಂ ಜಣಯಇ ಜೂಯಂ ಣರಸ್ಸ ಭವಸಯಸಹಸ್ಸೇಸು ॥ ೬೫ ॥

ಅಗ್ನಿವಿಷಚೋರಸರ್ಪಾ ದು:ಖಂ ಸ್ತೋಕಂ ಕುರ್ವಂತೀಹಲೋಕೇ ॥
ದು:ಖಂ ಜನಯತಿ ದ್ಯೂತಂ ನರಸ್ಯ ಭವಶತಸಹಸ್ರೇಷು ॥

ಅರ್ಥಃ—ಜಿಂಕೆ, ವಿಷ, ಕಳ್ಳ, ಹಾವು ಮುಂತಾದವುಗಳು ಈ ಲೋಕದ ಲ್ಲಿಯೇ ದುಃಖಕೊಟ್ಟರೂ ಸ್ವಲ್ಪ ಕೊಡುತ್ತವೆ. ಆದರೆ ಈ ಜೂಜಿನ ವ್ಯಸನವು ಸಾವಿರಾರು ಜನ್ಮಗಳಲ್ಲಿ ಸಹ ಮನುಷ್ಯನಿಗೆ ದುಃಖಕೊಡುತ್ತದೆ.

ಅಚ್ಛೀಹಿ ಣರೋ ರಹಿಓ ಣ ಮುಣಇ ಸೇಸಿಂದಿಏಹಿ ವೇಏಇ ॥
ಜೂಯಂಧೋ ಣ ಯ ಕೇಣವಿ ಜಾಣವಿ ಸಂಪುಣ್ಣಕರಣೋವಿ ॥ ೬೬ ॥

ಅಕ್ಷ್ಣೈರ್ನರೋ ರಹಿತೋ ನ ಮನುತೇ ಶೇಷೇಂದ್ರಿಯೈರ್ವೇದಯತಿ ॥
ದ್ಯೂತಾಂಧೋ ನ ಕೇನಾಪಿ ಜಾನಾತಿ ಸಂಪೂರ್ಣಕರಣೋಪಿ ॥

ಅರ್ಥಃ—ಕಣ್ಣಿಲ್ಲದ ಪುರುಷನು ಕಿವಿಮುಂತಾದ ಬೇರೆ ಇಂದ್ರಿಯಗಳಿಂದ ಶಬ್ದ, ಸ್ಪರ್ಶ ಮುಂತಾದ ವಿಷಯಗಳನ್ನು ತಿಳಿದುಕೊಳ್ಳುತ್ತಾನೆ. ಆದರೆ ಜೂಜಿನಿಂದ ಕುರುಡನಾದವನು ಸಕಲ ಇಂದ್ರಿಯಗಳಿಂದ ಪೂರ್ಣನಿದ್ದರೂ ಅವನಿಗೆ ಯಾವದೂ ಕಾಣುವದಿಲ್ಲ; ಕೇಳುವದಿಲ್ಲ; ಒಂದು ವಿಷಯದ ಜ್ಞಾನವಾದರೂ ಆಗುವದಿಲ್ಲ.

ಅಲಿಯಂ ಕರೇಇ ಸವಹಂ ಜಂಪಇ ಮೋಸಂ ಮಣೇಹ ಅಇದುಟ್ಠಂ ॥
ಪಾಸಮ್ಮಿ ಪಹಿಣಿಮಾಯಂ ಸಿಸುಂ ಪಿ ಹಣೇಇ ಕೋಹಂಧೋ ॥ ೬೭ ॥

ಅಲೀಕಂ ಕರೋತಿ ಶಪಥಂ ಜಲ್ಪತಿ ಮೃಷಾ ಭಣತ್ಯತಿದುಷ್ಟಮ್ ॥
ಪಾರ್ಶ್ವಸ್ಥಾಂ ಭಗಿನೀಂ ಮಾತರಂ ಶಿಶುಮಪಿ ಹಂತಿ ಕ್ರೋಧಾಂಧಃ ॥

ಅರ್ಥಃ— ಜೂಜಾಡುವವನು ಸುಳ್ಳು ಆಣೆಯನ್ನು ಮಾಡುತ್ತಾನೆ. ಅತಿ ಕಠೋರವಾದ ಭಾಷಣದಿಂದ ಮನಸ್ಸಿಗೆ ಬಂದಂತೆ ಬೊಗಳುತ್ತಾನೆ. ಇಷ್ಟೇ ಅಲ್ಲ, ಸಮೀಪದಲ್ಲಿ ತನ್ನ ತಂಗಿಯಾಗಲಿ ತಾಯಿಯಾಗಲಿ ಅಥವಾ ಚಿಕ್ಕ ಮಗುವಾಗಲಿ ಇದ್ದರೆ ಅವರನ್ನು ಸಿಟ್ಟಿನಿಂದ ಹೊಡಿಯುತ್ತಾನೆ.

ಣ ಯ ಭುಂಜಇ ಆಹಾರಂ ಣಿದ್ದಂ ಣ ಲಹೇಇ ರತ್ತಿದಿಣ್ಣಂಪಿ ॥
ಕುತ್ಥವಿ ಣ ಕುಣೇಇ ರಇಂ ಅತ್ಥಇ ಚಿಂತಾಉರೋ ಣಿಚ್ಚಂ ॥ ೬೮ ॥

ನ ಚ ಭುಂಕ್ತೇ ಆಹಾರಂ ನಿದ್ರಾಂ ನ ಲಭತೇ ರಾತ್ರಂದಿನಮಪಿ ॥
ಕುತ್ರಾಪಿ ನ ಕರೋತಿ ರತಿಮಾಸ್ತೇ ಚಿಂತಾತುರೋ ನಿತ್ಯಮ್ ॥

ಅರ್ಥಃ—ದ್ಯೂತಕಾರನು ನಿತ್ಯದಲ್ಲಿ ಚಂಚಲಚಿತ್ತದವನೂ ಚಿಂತಾತುರನೂ ಇರುತ್ತಾನೆ. ಇವನು ಚನ್ನಾಗಿ ಭೋಜನ ಮಾಡುವದಿಲ್ಲ. ಮತ್ತು ಇವನಿಗೆ ನಿದ್ರೆ ಹತ್ತುವದಿಲ್ಲ. ಇವನಿಗೆ ಎಲ್ಲಿ ಹೋದರೂ ಸಮಾಧಾನವಿರುವದಿಲ್ಲ.

ಇಚ್ಚೇವಮಾಇ ಬಹುಳಂ ದೋಸಂ ಣಾಊಣ ಜೂಯರಮಣಮ್ಮಿ ॥
ಪರಿಹರಿಯವ್ವಂ ಣಿಚ್ಚಂ ದಂಸಣಗುಣಜುಯಮಹಂತೇಣ ॥ ೬೯ ॥

ಇತ್ಥೇವಮಾದಿ ಬಹುಲಂ ದೋಷಂ ಜ್ಞಾತ್ವಾ ದ್ಯೂತರಮಣೇ ॥
ಪರಿಹರ್ತವ್ಯಂ ನಿತ್ಯಂ ದರ್ಶನಗುಣಯುತಮಹತಾ ॥

ಅರ್ಥ:—ದ್ಯೂತದಲ್ಲಿ ಇಂಥ ಅನೇಕ ದೋಷಗಳುಂಟೆಂದು ತಿಳಿದು, ಸಮ್ಯಗ್ದರ್ಶನಯುಕ್ತನಾದ ಮಹಾಪುರುಷನು ಅದನ್ನು ದೂರದಲ್ಲಿ ಬಿಡಬೇಕು.

## ಮದ್ಯಪಾನದ ದೋಷವು.

ಮಜ್ಜೇಣ ಣರೋ ಅವಸೋ ಕುಣ್ಣಇ ಕಮ್ಮಾಣಿ ಣಿಲಜ್ಜಾಇಂ ॥
ಇಹಲೋಏ ಪರಲೋಏ ಅಣುಹವಇ ಅಣಂತಾಇ ದುಕ್ಖಾಇ ॥ ೭೦ ॥

ಮದ್ಯೇನ ನರೋವಶೋ ಕರೋತಿ ಕರ್ಮಾಣಿ ನಿರ್ಲಜ್ಜಾನಿ ॥
ಇಹಲೋಕೇ ಪರಲೋಕೇ ಅನುಭವತ್ಯನಂತಾನಿ ದು:ಖಾನಿ ॥

ಅರ್ಥ: —ಸರಾಯಿ ಸೇವನೆಯಿಂದ ಮನುಷ್ಯನು ನಿರಂಕುಶನಾಗಿ, ನಾಚಿಕೆ ಬಿಟ್ಟು, ಅನೇಕ ವಿಧವಾದ ಪಾಪಕೃತ್ಯಗಳನ್ನು ಮಾಡಿ, ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಅನಂತ ದು:ಖಗಳನ್ನು ಅನುಭವಿಸುತ್ತಾನೆ.

ಅಇಲಂಘೇಯ ವಿಚಿತ್ತೋ ಪಡೇಇ ರತ್ಥಾಯಂಗಣೇ ಮತ್ತೋ ॥
ಪಡಿಯಸ್ಸ ಸಾರಮೇಯಾ ವಯಣಂ ವಿಲಿಹಂತಿ ಜಿಬ್ಭಾಯ ॥ ೭೧ ॥

ಅತಿಲಂಘ್ಯೈ ವಿಚಿತ್ತ: ಪತತಿ ರಥ್ಯಾಯಾಂ ಮತ್ತ: ॥
ಪತಿತಸ್ಯ ಸಾರಮೇಯಾ ವದನಂ ವಿಲಿಹಂತಿ ಜಿಹ್ವಯಾ ॥

ಅರ್ಥ:—ಸರಾಯಿ ಕುಡಿದವನು ಸನ್ಮಾರ್ಗವನ್ನು ಉಲ್ಲಂಘಿಸಿ, ಎಚ್ಚರದಪ್ಪಿ ಓಣಿಯಲ್ಲಿ ಬಿದ್ದು ಹೊರಳಾಡುತ್ತಾನೆ. ಆಗ್ಗೆ ಅವನ ಮುಖವನ್ನು ನಾಯಿಗಳು ನೆಕ್ಕುತ್ತವೆ.

ಉಚ್ಚಾರಂ ಪಸ್ಸವಣಂ ತತ್ಥೇವ ಕುಣಂತಿ ತಂ ಸಮುಲ್ಲವಈ ॥
ಪಡಿವುವಿ ಸುರಾ ಮಿಠ್ಠೋ ಪುಣೋ ವಿ ಮೇ ದೇಇ ಮೂಢಮಈ ॥೭೨॥

ಮಲಮೂತ್ರೋತ್ಸರ್ಜನಂ ತತ್ರೈವ ಕುರ್ವಂತಿ ತಂ ಸಮಾಸ್ವಾದಯಂತಿ ॥
ಪ್ರತಿವದತಿ ಸುರಾಂ ಮಿಷ್ಟಾಂ ಪುನರಪಿ ಮೇ ದೇಹಿ ಮೂಢಮತಿಃ ॥

ಅರ್ಥ:—ನಾಯಿಗಳು ಸರಾಯಿ ಕುಡಿದವನ ಬಾಯಿಯಲ್ಲಿ ಮಲಮೂತ್ರ ಬಿಡುತ್ತವೆ. ಆ ಮಂದಮತಿಯಾದ ಕುಡಕನು ಆ ಮಲಮೂತ್ರವನ್ನು ಭಕ್ಷಣಮಾಡಿ, ಅಹಹಾ! ಇದು ಎಷ್ಟು ರುಚಿಯಾಗಿರುವದು! ಇದೇ ಮದ್ಯವನ್ನು ಇನ್ನು ಸ್ವಲ್ಪ ಕೊಡು ಅನ್ನುತ್ತಾನೆ.

ಜಂ ಕಿಂಚಿ ತಸ್ಸ ದವ್ವಂ ಅಜಾಣಮಾಣಸ್ಸ ಹಿಯಂ ಪರೇಹಿಂ ॥
ಲಹಿಊಣ ಕಿಂಚಿ ಸಣ್ಣಂ ಇದೋ ತದೋ ಧಾವಇ ಖಲಂತೋ ॥೭೩॥

ಯತ್ಕಿಂಚಿತ್ತಸ್ಯ ದ್ರವ್ಯಮಜ್ಞಾಯಮಾನಸ್ಯ ಹೃತಂ ಪರೈಃ ॥
ಲಬ್ಧ್ವಾ ಕಿಂಚಿತ್ಸಂಜ್ಞಾಮಿತಸ್ತತೋ ಧಾವತಿ ಸ್ಖಲನ್ ॥

ಅರ್ಥ:—ಸರಾಯಿ ಕುಡಿದು ಎಚ್ಚರಗೆಟ್ಟು ನೆಲದ ಮೇಲೆ ಬಿದ್ದಿರುವ ಪುರುಷನ ಹಣವನ್ನು ಅವನಿಗೆ ತಿಳಿಯದೆ ಯಾರಾದರೂ ತೆಗೆದುಕೊಳ್ಳಲು, ತುಸು ಎಚ್ಚರಿಕೆ ಹುಟ್ಟಿದ ಮೇಲೆ ಅವನು ಹಣದ ಸಲುವಾಗಿ ಅತ್ತಿತ್ತ ಬೀಳುತ್ತ ಏಳುತ್ತ ಓಡಾಡುತ್ತಾನೆ.

ಜೇಣ ಹು ಮಜ್ಝ ದ್ದವ್ವಂ ಗಹಿಯಂ ದುಟ್ಠೇಣ ಸೇಜ್ಜ ಮೋ ಕುದ್ಧೋ ॥
ಕಹಿಂ ಜಾಯ ಸೋ ಜೀವಂತೋ ಸೀಸಂ ಛಿಂದಾಮಿ ಖಗ್ಗೇಣ ॥ ೭೪ ॥

ಯೇನ ಖಲು ಮಮ ದ್ರವ್ಯಂ ಗೃಹೀತಂ ದುಷ್ಟೇನ ಸರ್ಜಿತೋ ಮಮ ಕ್ರೋಧಃ ॥
ಕ್ವ ಗಮಿಷ್ಯತಿ ಸ ಜೀವನ್ ಶೀರ್ಷಂ ಛಿಂದಾಮಿ ಖಡ್ಗೇನ ॥

ಅರ್ಥ:—ಯಾವ ದುಷ್ಟನು ನನ್ನ ಹಣವನ್ನು ಅಪಹರಿಸಿ, ನನಗೆ ಕೋಪವನ್ನುಂಟು ಮಾಡಿರುವನೋ, ಅವನು ಜೀವದಿಂದ ಎಲ್ಲಿ ಹೋದರೂ ಈ ಖಡದಿಂದ ಅವನ ಮಸ್ತಕವನ್ನು ಹೊಡೆಯುತ್ತೇನೆ.

ಏವಂ ಸೋ ಗಜ್ಜಂತೋ ಕುವಿವೋ ಗಂತೂಣ ಮಂದಿರಂ ಣಿಯಯಂ ॥
ಛಿತ್ತೂಣ ಲಉಡಿ ಸಹಸಾ ರುಠ್ಠೋ ಭಂಡಾಈ ಫೋಡೇಈ ॥ ೭೫ ॥

ಏವಂ ಸ ಗರ್ಜಯನ್ಕುಪಿತೋ ಗತ್ವಾ ಮಂದಿರಂ ನಿಜಮ್ ॥
ಛಿತ್ವಾ ಲಕುಟೇನ ಸಹಸಾ ರುಷ್ಟೋ ಭಾಂಡಾನಿ ಸ್ಫೋಟಯತಿ ॥

ಅರ್ಥ:—ಈ ಪ್ರಕಾರ ಒದರುತ್ತ ಸಿಟ್ಟಿನಿಂದ ತನ್ನ ಮನೆಗೆ ಬಂದು, ಮನೆಯಲ್ಲಿದ್ದ ಗಡಿಗೆ ಮಡಿಕೆಗಳನ್ನು ಬಡಿಗೆಯಿಂದ ಒಡಿದು ಬಿಡುತ್ತಾನೆ.

ಣಿಯಯಂ ಪಿ ಸುಯಂ ವಹಿಣಿಂ ಅಣಿಚ್ಛಮಾಣಂ ವಲಾ ವಿಧಂಸೇಈ ॥
ಜಂಪಇ ಅಜ್ಜವಜ್ಜಂ ಣ ವಿಜಾಣಇ ಕಿಂಪಿ ಯ ಪಮತ್ತೋ ॥ ೭೬ ॥

ನಿಜಾಮಪಿ ಸುತಾಂ ಭಗಿನೀಮನಿಚ್ಛಮಾನಾಂ ಬಲಾದ್ವಿಧ್ವಂಸಯತಿ ॥
ಜಲ್ಪತ್ಯವಾಗ್ವಚನಂ ನ ವಿಜಾನಾತಿ ಕಿಮಪಿ ಚ ಪ್ರಮತ್ತಃ ॥

ಅರ್ಥ:—ಆ ತಲೆತಿರುಗಿದ ಕುಡುಕನು ಮನೆಯಲ್ಲಿ ಕೆಟ್ಟ ನುಡಿಗಳನ್ನು ನುಡಿಯುತ್ತಾನೆ. ಯೋಗ್ಯಾಯೋಗ್ಯದ ವಿಚಾರವನ್ನರಿಯದೆ ತನ್ನ ತಂಗಿ ಅಥವಾ ಮಗಳ ಮೇಲಾದರೂ ಬಲಾತ್ಕಾರವನ್ನು ಮಾಡಿ, ಅವರ ಶೀಲ (ಪಾತಿವ್ರತ್ಯ) ವನ್ನು ಕೆಡಿಸುತ್ತಾನೆ.

ಇಯಅವರಾಇವಿ ವಹುಸೋ ಕಾಊಣ ವಹೂಣಿ ಲಜ್ಜಕಜ್ಜಾಣಿ ॥
ಅಣುವಂಧಇ ವಹು ಪಾವಂ ಮಜ್ಜಸ್ಸ ವಸಂಗದೋ ಸಂತೋ ॥ ೭೭ ॥

ಇತ್ಯಪರಾಣ್ಯಪಿ ಬಹುಶಃ ಕೃತ್ವಾ ಬಹೂನಿ ನಿರ್ಲಜ್ಜಕಾರ್ಯಾಣಿ ॥
ಅನುಬಧ್ನಾತಿ ಬಹು ಪಾಪಂ ಮದ್ಯಸ್ಯ ವಶಂಗತಃ ಸನ್ ॥

ಅರ್ಥ:—ಮದ್ಯಪಾನಕ್ಕೆ ವಶನಾದವನು ಅನೇಕ ವಿಧವಾದ ದುಷ್ಟ ಕೆಲಸಗಳನ್ನು ಮಾಡಿ, ಬಹು ಪಾಪಸಂಗ್ರಹವನ್ನು ಮಾಡಿಕೊಳ್ಳುತ್ತಾನೆ.

ಪಾವೇಣ ತೇಣ ವಹುಸೋ ಜಾಇಜರಾಮರಣಸಾವಯಾಇಣ್ಣೇ ॥
ಪಾವಇ ಅಣಂತದುಖ್ಖಂ ಪಡಿಓ ಸಂಸಾರಕಂತಾರೇ ॥ ೭೮ ॥

ಪಾಪೇನ ತೇನ ಬಹುಶೋ ಜಾತಿಜರಾಮರಣಶ್ವಾಪದಾಕೀರ್ಣೇ ॥
ಪ್ರಾಪ್ನೋತ್ಯನಂತಂ ದು:ಖಂ ಪತಿತ್ವಾ ಸಂಸಾರಕಾಂತಾರೇ ॥

ಅರ್ಥಃ—ಆ ಪಾಪದಿಂದ ಜನ್ಮ, ಮುಪ್ಪು, ಮರಣನುಯುವಾದ ಮತ್ತು ಎಷ್ಟೋ ಹಿಂಸ್ರಪಶುಗಳಿಂದ ತುಂಬಿದ ಸಂಸಾರರೂಪಿಯಾದ ಅಡವಿಯಲ್ಲಿ ಬಿದ್ದು, ಅನಂತ ದು:ಖಗಳನ್ನು ಭೋಗಿಸುತ್ತಾನೆ.

ಏವಂ ವಹುಪ್ಪಯಾರಂ ದೋಸಂ ಣಾಊಣ ಮಜ್ಜಪಾಣಮ್ಮಿ ॥
ಮಣವಯಣಕಾಯಕಯಕಾರಿದಾಣುಮೋಏಹಿ ವಜ್ಜಿಜ್ಜೋ ॥ ೭೯ ॥

ಏವಂ ಬಹುಪ್ರಕಾರಾನ್ದೋಷಾನ್ ಜ್ಞಾತ್ವಾ ಮದ್ಯಪಾನೇ ॥
ಮನೋವಚನಕಾಯಕೃತಕಾರಿತಾನುಮೋದೈರ್ವರ್ಜಯಿತವ್ಯಮ್ ॥

ಅರ್ಥ:—ಮೇಲೆ ವರ್ಣಿಸಿದಂತೆ ಸರಾಯ ಕುಡಿಯುವದರಲ್ಲಿ ಬಹಳ ಪಾಪ ಗಳುಂಟೆಂದು ತಿಳಿದು, ಮನ-ವಚನ-ಕಾಯಗಳಿಂದಲೂ ಕೃತ-ಕಾರಿತ-ಅನುಮೋದ ನಗಳಿಂದಲೂ ಅದನ್ನು ಬಿಟ್ಟುಬಿಡಬೇಕು.

## ಮಧುದೋಷವು.

ಜಹ ಮಜ್ಜಂ ತಹ ಯ ಮಹೂ ಜಣಯದಿ ಪಾವಂ ಣರಸ್ಸ ಅಇವಹುಗಂ॥
ಅಸುಇವ್ವ ಣಿಂದಣೀಯಂ ವಜ್ಜೇಯವ್ವಂ ಪಯತ್ತೇಣ ॥ ೮೦ ॥

ಯಥಾ ಮದ್ಯಂ ತಥಾ ಚ ಮಧು ಜನಯತಿ ಪಾಪಂ ನರಸ್ಯಾತಿಪ್ರಚುರಮ್ ॥
ಅಶುಚೀವ ನಿಂದನೀಯಂ ವರ್ಜಯಿತವ್ಯಂ ಪ್ರಯತ್ನೇನ ॥

ಅರ್ಥ:—ಜೇನುತುಪ್ಪವಾದರೂ ಮದ್ಯದಂತೆ ಮನುಷ್ಯನಿಗೆ ಅನೇಕ ಪಾಪ ಗಳನ್ನುಂಟು ಮಾಡುತ್ತದೆ. ಮತ್ತು ಅಶುಚಿ ಪದಾರ್ಥಗಳಂತೆ ನಿಂದ್ಯವಾದ್ದದರಿಂದ ಅದನ್ನು ಯಾವ ಕಾರಣದಿಂದಾದರೂ ಸೇವಿಸಬಾರದು.

ದಟ್ಠೂಣ ಅಸಣಮಜ್ಝೇ ಪಡಿಯಂ ಜಇ ಮಚ್ಛಿಯಂಪಿ ಣಿಟ್ಠಿವಈ ॥
ಕಹ ಮಚ್ಛಿಯಂಡಯಾಣಂ ಣಿಜ್ಜಾಸಂ ಣಿಗ್ಘಿಣೋ ಪಿವಈ ॥ ೮೧ ॥

ದೃಷ್ಟ್ವಾಶನಮಧ್ಯೇ ಪತಿತಾ ಯದಿ ಮಕ್ಷಿಕಾ ನಿಷ್ಠೀವತಿ ॥
ಕಥಂ ಮಕ್ಷಿಕಾಂಡಕಾನಾಂ ನಿರ್ಯಾಸಂ ನಿರ್ಘೃಣಃ ಪಿಬತಿ ॥

ಅರ್ಥ:—ತಿನ್ನುವ ಪದಾರ್ಥದಲ್ಲಿ ಬಿದ್ದಿರುವ ನೊಣವನ್ನು ನೋಡಿ ಯಾವಾತನಿಗೆ ಹೇಸಿಕೆ ಉಂಟಾಗುವದೋ, ಅವನು ಮಧುವೆಂದರೆ ಜೇನುನೊಣಗಳ ತತ್ತಿಗಳ ರಸವನ್ನು ಹ್ಯಾಗೆ ಭಕ್ಷಿಸುವನು? ಎಂದೂ ಭಕ್ಷಿಸಲಾರನು.

ಭೋ ಜಿಬ್ಭಿಂದಿಯ ಲುದ್ಧಯಾ ಣ ಮಚ್ಛೀಯರಂ ಪಲೋ ಏಹ ॥
ಕಿಂ ಮಚ್ಛಿಯಣಿಜ್ಜಾಸಂ ಮಹು ಪ್ಪವಿತ್ತಂ ಭಣಂತಿ ಜದೋ ॥೮೨॥

ಭೋ ಜಿಹ್ವೇಂದ್ರಿಯಲುಬ್ಧಕಾ ನ ಮಾಕ್ಷಿಕಂ ಪಲಮಿಹ ॥
ಕಿಂ ಮಾಕ್ಷಿಕನಿರ್ಯಾಸಂ ಮಧು ಪವಿತ್ರಂ ಭಣಂತಿ ಯತಃ ॥

ಅರ್ಥ:—ಎಲೈ ಜಿಹ್ವೇಂದ್ರಿಯ ಲಂಪಟರಾದ ಜನಗಳಿರಾ, ನೀವು ಜೇನು ಹುಟ್ಟುಗಳಿಂದ ಹುಟ್ಟಿದ ರಸಪದಾರ್ಥವಾದ ಜೇನುತುಪ್ಪವು ಪವಿತ್ರ ಅನ್ನುತ್ತೀರಿ. ಆದರೆ ಅದು ಮಾಂಸವಲ್ಲವೇ?

ಲೋಗೇ ವಿ ಸುಪ್ಪಸಿದ್ಧಂ ಬಾರಹಗಾಮಾಇ ಜೋ ದಹಇ ಅದಓ ॥
ತತ್ತೋ ಸೋ ಅಹಿಯಯರೋ ಪಾವಿಠ್ಠೋ ಜೋ ಮಹುಂ ಹಣಈ ॥೮೩

ಲೋಕೇಪಿ ಸುಪ್ರಸಿದ್ಧಂ ದ್ವಾದಶಗ್ರಾಮಾನ್ಯೋ ದಹತ್ಯದಯಃ ॥
ತತ: ಸೋಧಿಕತರಃ ಪಾಪಿಷ್ಠೋ ಯೋ ಮಧು ಹಂತಿ ॥

ಅರ್ಥ:—ಹನ್ನೆರಡು ಗ್ರಾಮಗಳನ್ನು ಸುಡುವ ನಿರ್ದಯ ಪುರುಷನಿಗಿಂತಲೂ ಜೇನ ಹುಟ್ಟವನ್ನು ಕಡಿಯುವ ಮನುಷ್ಯನು ಅಧಿಕವಾಗಿ ಪಾಪಿಷ್ಠನೆಂದು ಈ ಜಗತ್ತಿನಲ್ಲಿ ಪ್ರಸಿದ್ಧವಿಲ್ಲವೇ?

ಜೋ ಅವಲೇಹಇ ಣಿಚ್ಚಂ ಣಿರಯಂ ಸೋ ಜಾಇ ಣತ್ಥಿ ಸಂದೇಹೋ ॥
ಏವಂ ಣಾಊಣ ಫುಡಂ ವಜ್ಜಇ ದವ್ವಂ ಮಹುಂ ತಮ್ಹಾ ॥ ೮೪ ॥

ಯೋವಲೇಹತಿ ನಿತ್ಯಂ ನರಕಂ ಸ ಯಾತಿ ನಾಸ್ತಿ ಸಂದೇಹಃ ॥
ಏವಂ ಜ್ಞಾತ್ವಾ ಸ್ಫುಟಂ ವರ್ಜಯಿತವ್ಯಂ ಮಧು ತಸ್ಮಾತ್ ॥

ಅರ್ಥ:—ಯಾವನು ಜೇನುತುಪ್ಪವನ್ನು ತಿನ್ನುವನೋ, ಅವನು ನಿಶ್ಚಯವಾಗಿ ನರಕಕ್ಕೆ ಹೋಗುತ್ತಾನೆ. ಕಾರಣ ಅದನ್ನು ಬಿಟ್ಟುಬಿಡಬೇಕು.

## ಮಾಂಸ ಭಕ್ಷಣದ ದೋಷವು.

ಮಂಸಂ ಅಮೇಜ್ಝಸರಿಸಂ ಕಿಮಿಕುಲಭರಿಯಂ ದುಗಂಧ ವೀಭಚ್ಛಂ ॥
ಪಾವೇಣವಿ ಣ ಛಿವೇಯಂ ಣ ತೀರಏ ತಂ ಕಹಂ ಭೋತ್ತುಂ ॥ ೮೫ ॥

ಮಾಂಸಮಮೇಧ್ಯಸದೃಶಂ ಕೃಮಿಕುಲಭೃತಂ ದುರ್ಗಂಧಿ ಬೀಭತ್ಸಮ್ ॥
ಪಾದೇನಾಪಿ ನ ಸ್ಪರ್ಶನೀಯಂ ನ ತೀರೇ ತತ್ಕಥಂ ಭೋಕ್ತ್ರವ್ಯಮ್ ॥

ಅರ್ಥಃ—ಮಾಂಸವು ಮಲದಂತೆ ಅನೇಕವಿಧವಾದ ಹುಳಗಳಿಂದ ತುಂಬಿಕೊಂಡು ದುರ್ಗಂಧವಾಗಿ ಹೇಸಿಕೆಯನ್ನು ಹುಟ್ಟಿಸುತ್ತದೆ. ಅದನ್ನು ಕಾಲಿನಿಂದ ಸಹ ಮುಟ್ಟಬಾರದು. ಇಷ್ಟೇ ಅಲ್ಲ, ಅದರ ಬಳಿಯಲ್ಲಿ ಸಹ ಹೋಗಕೂಡದು. ಹೀಗಿರಲು ಅದನ್ನು ಭಕ್ಷಿಸುವದು ಯೋಗ್ಯವೇನು? ( ಸರ್ವಥಾ ಅಲ್ಲ ).

ಮಂಸಾಸಣೇಣ ವಟ್ಟಇ ದಪ್ಪೋ ದಪ್ಪೇಣ ಮಜ್ಜಮಹಿಲಸಇ ॥
ಜೂಯಂಪಿ ರಮಇ ತೋತ್ತಂ ( ಪಿಬಿಣಿವಿ ? ) ಇ ಪಾಉಣ ದೋಸೋ ॥೮೬

ಮಾಂಸಾಶನೇನ ವರ್ತತೇ ದರ್ಪೋ ದರ್ಪೇಣ ಮದ್ಯಮಭಿಲಷತಿ ॥
ದ್ಯೂತಮಪಿ ರಮತೇ ತತಃ ದ್ವೌ ಪ್ರಾಪ್ನೋತಿ ದೋಷೌ ॥

ಅರ್ಥ:—ಮಾಂಸ ಸೇವನೆಯಿಂದ ಸೊಕ್ಕೇರುವದು, ಸೊಕ್ಕಿನಿಂದ ಮದ್ಯಪಾನವನ್ನು ಮಾಡುತ್ತಾನೆ. ಮತ್ತು ಜೂಜನ್ನಾದರೂ ಆಡುತ್ತಾನೆ. ಮಾಂಸ ಭಕ್ಷಣದಿಂದ ಇವೆರಡೂ ಪಾಪಗಳು ಒದಗುತ್ತವೆ.

ಲೋಇಯಸತ್ಥಮ್ಮಿ ವಿ ವಣ್ಣಿಯಂ ಜಹಾ ಗಯಣಗಮಣೋ ವಿ ॥
ಭುವಿ ವಿಪ್ಪಾ ಮಂಸಾಸಣೇಣ ಪಡಿವೋ ತಮ್ಹಾ ವಜ್ಜಿಯಂ ಮಂಸಂ ॥೮೭

ಲೌಕಿಕಶಾಸ್ತ್ರೇಪಿ ವರ್ಣಿತಂ ಯಥಾ ಗಗನಗಮನೋಪಿ ॥
ಭುವಿ ವಿಪ್ರೋ ಮಾಂಸಾಶನೇನ ಪತಿತಸ್ತಸ್ಮಾದ್ವರ್ಜನೀಯಂ ಮಾಂಸಮ್ ॥

ಅರ್ಥಃ—ಲೌಕಿಕಶಾಸ್ತ್ರದಲ್ಲಿ ಹೇಳಿದ್ದೇನಂದರೆ, ಒಬ್ಬ ಬ್ರಾಹ್ಮಣನು ( ತನ್ನ ತಪೋಬಲದಿಂದ ) ಆಕಾಶದಲ್ಲಿ ಸಂಚಾರ ಮಾಡುತ್ತಿದ್ದನು. ಆದರೆ ಅವನಿಗೆ ಮಾಂಸ ತಿನ್ನುವ ವ್ಯಸನವು ಹತ್ತಿದ್ದರಿಂದ, ಪ್ರಭಾವಶಾಲಿಯಾಗಿದ್ದರೂ ಆಕಾಶದಿಂದ ಕೆಳಗೆ ಬಿದ್ದನು. ಆದಕಾರಣ ಮಾಂಸವನ್ನು ಸೇವಿಸಬಾರದು.

## ವೇಶ್ಯಾಸಂಗದ ದೋಷವು.

ಕಾರುಯಕಿರಾಯಚಂಡಾಲಡೊಂಬಪಾರಸಿಯಾಣಮುಚ್ಛಿಠ್ಠಂ ॥
ಸೋ ಭಕ್ಖೇಈ ಜೋ ಸಹವಸಇ ಏಯರತ್ತಿ ಪಿ ವೇಸ್ಸಾಈ ॥ ೮೮ ॥

ರಜಕಕಿರಾತಚಂಡಾಲಡೊಂಬಪಾರಸ್ಯಾದಿಕಾನಾಮುಚ್ಛಿಷ್ಟಮ್ ॥
ಸ ಭಕ್ಷಯತಿ ಯಃ ಸಹವಸತಿ ಏಕರಾತ್ರಮಪಿ ವೇಶ್ಯಯಾ ॥

ಅರ್ಥಃ—ಯಾವ ಪುರುಷನು ವೇಶ್ಯೆಯು ಸಹವಾಸದಲ್ಲಿ ಒಂದೇ ರಾತ್ರಿಯನ್ನು ಕಳೆದರೂ ಅವನು ಅಗಸ, ಬೇಡ, ಹೊಲಿಯ, ಡೊಂಬ, ಪಾರಶಿ, ಮುಂತಾದವರ ಎಂಜಲವನ್ನು ತಿನ್ನುತ್ತಾನೆಂದು ತಿಳಿಯಬೇಕು.

ರತ್ತಂ ಣಾಊಣ ಣರಂ ಸವ್ವಸ್ಸಂ ಹರಇ ವಂಚಣಸಏಹಿಂ ||
ಕಾಊಣ ಮುಂಚಇ ಪಚ್ಛಾ ಪುರುಸಂ ಚಮ್ಮಟ್ಠಿಪರಿಸೇಸಂ || ೮೯ ||

ರಕ್ತಂ ಜ್ಞಾತ್ವಾ ನರಂ ಸರ್ವಸ್ವಂ ಹರತಿ ವಂಚನಶತೈಃ ||
ಕೃತ್ವಾ ಮುಂಚತಿ ಪಶ್ಚಾತ್ಪುರುಷಂ ಚರ್ಮಾಸ್ಥಿಪರಿಶೇಷಮ್ ||

ಅರ್ಥ:—ಪುರುಷನು ತನ್ನಲ್ಲಿ ಆಸಕ್ತನಾದದ್ದು ತಿಳಿದು, ಕೂಡಲೇ ವೇಶ್ಯೆಯು ನಾನಾ ಪ್ರಕಾರದ ಮೋಸವನ್ನು ಮಾಡಿ, ಅವನಲ್ಲಿದ್ದ ಯಾವತ್ತು ಹಣವನ್ನು ಅಪಹರಿಸುತ್ತಾಳೆ. ಆಮೇಲೆ ಅಸ್ಥಿಚರ್ಮಗಳಿಂದ ಮಾತ್ರ ಉಳಿದ ಆ ಪುರುಷನನ್ನು ತನ್ನ ಮನೆಬಿಟ್ಟು ಹೊರಗೆ ಹಾಕುತ್ತಾಳೆ.

ಪಭಣಇ ಪುರಓ ಏಯಸ್ಸ ಸಾಮಿ ಮುತ್ತೂಣ ಣತ್ಥಿ ಮೇ ಅಣ್ಣೋ ||
ಉಚ್ಚಇ ಅಣ್ಣಸ್ಸ ಪುಣೋ ಕರೇಇ ಚಾಟೂಣಿ ವಹುಯಾಣಿ || ೯೦ ||

ಪ್ರಭಣತಿ ಪುರತ ಏಕಸ್ಯ ಸ್ವಾಮಿನಂ ಮುಕ್ತ್ವಾ ನಾಸ್ತಿ ಮೇ ಅನ್ಯಃ ||
ಉಚ್ಚರತ್ಯನ್ಯಸ್ಯ ಪುನಃ ಕರೋತಿ ಚಾಟೂನಿ ಬಹುತಾನಿ ||

ಅರ್ಥಃ—ಒಬ್ಬ ವಿಟ ಪುರುಷನಿಗೆ ವೇಶ್ಯೆಯು— 'ಮಹಾರಾಯನೇ ನಿನ್ನ ಹೊರ್ತು ಬೇರೆ ಯಾರೂ ನನಗೆ ಇಲ್ಲ.' ಮತ್ತೊಬ್ಬನಿಗಾದರೂ ಹೀಗೆ ಅನ್ನುತ್ತಾಳೆ. ಈ ಪ್ರಕಾರ ಪ್ರತಿಯೊಬ್ಬನ ಮುಂದೆ ಮೋಸದ ಬಹು ಮಾತುಗಳನ್ನು ಆಡುತ್ತಾಳೆ.

ಮಾಣೀ ಕುಳಜೋ ಸೂರೋ ವಿ ಕುಣಈ ದಾಸತ್ತಣಂ ಪಿ ಣೀಯಾಣಂ ||
ವೇಸ್ಸಾಕಏಣ ವಹುಗಂ ಅವಮಾಣಂ ಸಹಇ ಕಾಮಂಧೋ || ೯೧ ||

ಮಾನೀ ಕುಲಜಃ ಶೂರೋಪಿ ಕರೋತಿ ದಾಸತ್ವಮಪಿ ನೀಚಾನಾಮ್ ||
ವೇಶ್ಯಾಕೃತೇನ ಬಹುಲಮವಮಾನಂ ಸಹತೇ ಕಾಮಾಂಧಃ ||

ಅರ್ಥ--ಅಭಿಮಾನಿಯೂ ಉತ್ತಮಕುಲವಂತನೂ ಶೂರನೂ ಆದ ಪುರುಷನು ವೇಶ್ಯೆಯ ಸಂಗವನ್ನು ಮಾಡಹತ್ತಿದರೆ, ಅವನು ಅತಿ ನೀಚಜನರ ಸೇವೆಯನ್ನು ಸಹ ಮಾಡಬೇಕಾಗುವದು. ಈ ಕಾಮಾಂಧನು ವೇಶ್ಯೆಯು ಹೆಜ್ಜೆಜ್ಜೆಗೆ ಮಾಡಿದ ಅವಮಾನವನ್ನು ಸಹಿಸುತ್ತಾನೆ.

ಜೇ ಮಜ್ಜಮಂಸದೋಸಾ ವೇಸ್ಸಾಗಮಣೇ ವಿ ಹುಂತಿ ತೇ ಸವ್ವೇ ||
ಪಾವಂಪಿ ತತ್ಥ ದಿಟ್ಠಂ ಪಾವಇ ಣಿಯಮೇಣ ಸವಿಸೇಸಂ || ೯೨ ||

ಯೇ ಮದ್ಯಮಾಂಸದೋಷಾ ವೇಶ್ಯಾಗಮನೇಪಿ ಭವಂತಿ ತೇ ಸರ್ವೇ ||
ಪಾಪಮಪಿ ತತ್ರ ದಿಷ್ಟಂ ಪ್ರಾಪ್ನೋತಿ ನಿಯಮೇನ ಸವಿಶೇಷಮ್ ||

ಅರ್ಥಃ—ಸರಾಯಿ ಕುಡಿಯುವದರಲ್ಲಿಯೂ ಮಾಂಸ ತಿನ್ನುವದರಲ್ಲಿಯೂ ಯಾವ ಪಾಪಗಳುಂಟೋ, ಅವೆಲ್ಲ ವೇಶ್ಯಾಗಮನದಲ್ಲುಂಟು.

ಪಾವೇಣ ತೇಣ ದುಕ್ಖಂ ಪಾವಇ ಸಂಸಾರಸಾಯರೇ ಘೋರೇ ॥
ತಮ್ಹಾ ಪರಿಹರಿಯವ್ವಾ ವೇಸ್ಸಾ ಮಣವಯಣಕಾಏಹಿಂ ॥ ೯೩ ॥
ಪಾಪೇನ ತೇನ ದುಃಖಂ ಪ್ರಾಪ್ನೋತಿ ಸಂಸಾರಸಾಗರೇ ಘೋರೇ ॥
ತಸ್ಮಾತ್ಪರಿಹರ್ತವ್ಯಾ ವೇಶ್ಯಾ ಮನೋವಚನಕಾಯೈಃ ॥

ಅರ್ಥಃ—ವೇಶ್ಯಾಸಂಗದಿಂದುಂಟಾದ ಪಾಪವು ಸಂಸಾರಸಾಗರದಲ್ಲಿ ಪುರುಷನಿಗೆ ಭಯಂಕರವಾದ ದುಃಖವನ್ನುಂಟು ಮಾಡುತ್ತದೆ. ಆದದರಿಂದ ತ್ರಿಕರಣಪೂರ್ವಕವಾಗಿ ವೇಶ್ಯಾಸಂಗವನ್ನು ಬಿಡಬೇಕು.

## ಪಾಪರ್ಧಿದೋಷವು.

ಸಮ್ಮತ್ತಸ್ಸ ಪಹಾಣೋ ಅಣುಕಂಪಾ ವಣ್ಣಿಊ ಜಮ್ಹಾ ॥
ಪಾರದ್ಧಿರಮಣಸೀಳೋ ಸಮ್ಮತ್ತಂವಿರಾಹಏ ತಮ್ಹಾ ॥ ೯೪ ॥
ಸಮ್ಯಕ್ತ್ವಸ್ಯ ಪ್ರಧಾನಮನುಕಂಪಾ ವರ್ಣಿತಾ ಯಸ್ಮಾತ್ ॥
ಪಾಪರ್ಧಿರಮಣಶೀಲಃ ಸಮ್ಯಕ್ತ್ವವಿರಾಧಕಸ್ತಸ್ಮಾತ್ ॥

ಅರ್ಥ:—ಸಮ್ಯಕ್ತ್ವದ ಸಕಲ ಗುಣಗಳಲ್ಲಿ ಭೂತದಯವು ಶ್ರೇಷ್ಠವೆಂದು ವರ್ಣಿಸಲ್ಪಟ್ಟದೆ. ಆದದರಿಂದ ಬೇಟೆಯಾಡುವ ಮನುಷ್ಯನು ಸಮ್ಯಕ್ತ್ವದ ನಾಶಕನಿರುತ್ತಾನೆ.

ದಟ್ಠೂಣ ಮುಕ್ಕಕೇಸಂ ಪಲಾಯಮಾಣಂ ತಹಾ ಪರಾಹೂತಂ ॥
ರದಧರಿಯತಿಣಂ ಸೂರಾ ಕಯಾಪರಾಹಂ ಪಿ ಣ ಹಣಂತಿ ॥ ೯೫ ॥
ದೃಷ್ಟ್ವಾ ಮುಕ್ತಕೇಶಂ ಪಲಾಯಮಾನಂ ತಥಾ ಪರಾಭೂತಮ್ ॥
ರದಧೃತತೃಣಂ ಶೂರಾಃ ಕೃತಾಪರಾಧಮಪಿ ನ ಘ್ನಂತಿ ॥

ಅರ್ಥ:—ಯುದ್ಧದಲ್ಲಿ ಸೋತು ಕೇಶಪಾಶವನ್ನು ಬಿಚ್ಚಿ ಹಲ್ಲುಗಳಲ್ಲಿ ಹುಲ್ಲಿನ ಕಡ್ಡಿಯನ್ನು ಹಿಡಿದು ಪಲಾಯನ ಮಾಡುವವನನ್ನು ಶೂರನು (ಅವನು ಅಪರಾಧವನ್ನು ಮಾಡಿದ್ದರೂ ಕೂಡಾ) ಹೊಡೆಯುವದಿಲ್ಲ.

ಣಿಚ್ಚಂ ಪಳಾಯಮಾಣೋ ತಿಣಚಾರೀ ತಹ ಣಿರಾಪರಾಹೇ ವಿ ॥
ಕಹ ಣಿಗ್ಘಣೋ ಹಣಿಜ್ಜಇ ಆರಣ್ಣಣಿವಾಸಿಣೋ ವಿಮಏ ॥ ೯೬ ॥
ನಿತ್ಯಂ ಪಲಾಯಮಾನಂ ತೃಣಚಾರಿಣಂ ತಥಾ ನಿರಪರಾಧಿಮಪಿ ॥
ಕಥಂ ನಿರ್ಘೃಣೋ ಹನಿಷ್ಯತ್ಯರಣ್ಯನಿವಾಸಿನಂ ವಿಮದಮ್ ॥

ಅರ್ಥಃ—ನಿತ್ಯದಲ್ಲಿ ಹುಲ್ಲನ್ನು ತಿಂದು ಜೀವಿಸುವಂಥ, ಅಡವಿಯಲ್ಲಿರುವಂಥ, ಪಲಾಯನ ಮಾಡುವಂಥ, ನಿರುಪದ್ರವಿಯಾದಂಥ ಮೃಗವನ್ನು ನಿರ್ದಯ ಮನುಷ್ಯನು ಸಹ ಕೊಲ್ಲಲಾರನು. ಆದರೆ ಬೇಟೆಗಾರನು ಆ ಮೃಗವನ್ನು ಲೀಲೆಯಿಂದ ಸಂಹಾರ ಮಾಡುತ್ತಾನೆ.

ಗೋಬಂಭಣಮಹಿಳಾಣಂ ವಿಣಿವಾಏ ಹವಇ ಜಹ ಮಹಾಪಾವಂ ||
ತಹ ಇಯರಪಾಣಿಘಾಏ ವಿ ಹೋಇ ಪಾವಂ ಣ ಸಂದೇಹೋ || ೯೭ ||

ಗೋವಂಭಣಿತ್ಥಿಪಾಪಂ ಪರಿಹರಮಾಣಸ್ಸ ಹೋಇ ಜಇ ಧಮ್ಮೋ ||
ಸವ್ವೇಸಿಂ ಜೀವಾಣಂ ದಯಾಲುತಾ ಕಿಂ ಣ ಸೋ ಜಾಯೇ || ೯೮ ||

ಗೋಬ್ರಾಹ್ಮಣಮಹಿಲಾನಾಂ ವಿನಿಪಾತೇ ಭವತಿ ಯಥಾ ಮಹಾಪಾಪಮ್ ||
ತಥೇತರಪ್ರಾಣಿಘಾತೇಪಿ ಭವತಿ ಪಾಪಂ ನ ಸಂದೇಹಃ ||

ಗೋಬ್ರಾಹ್ಮಣಸ್ತ್ರೀಪಾಪಂ ಪರಿಹರಮಾಣಸ್ಯ ಭವತಿ ಯದಿ ಧರ್ಮಃ ||
ಸರ್ವೇಷಾಂ ಜೀವಾನಾಂ ದಯಾಲುತಾ ಕಿಂ ನ ಸ ಜಾಯೇತ ||

ಅರ್ಥಃ—ಆಕಳು, ಬ್ರಾಹ್ಮಣ, ಸ್ತ್ರೀ ಇವರನ್ನು ಕೊಲ್ಲುವದರಿಂದ ಹ್ಯಾಗೆ ಬಹು ಪಾಪ ಬರುವದೋ, ಇದರಂತೆ ಬೇರೆ ಪ್ರಾಣಿಗಳ ವಧದಿಂದಾದರೂ ಪಾಪವು ಬರುತ್ತದೆ. ಗೋ, ಬ್ರಾಹ್ಮಣ, ಸ್ತ್ರೀಯರ ಹಿಂಸೆಯನ್ನು ಮಾಡದಿರುವದು ಧರ್ಮವಾಗುತ್ತಿದ್ದರೆ, ಸರ್ವಪ್ರಾಣಿಗಳಲ್ಲಿ ದಯೆಯನ್ನಿಡುವದು ಧರ್ಮವಲ್ಲವೇ? ಆದದರಿಂದ ಯಾವತ್ತು ಪ್ರಾಣಿಗಳ ಮೇಲೆ ದಯೆಯನ್ನಿಡಬೇಕು.

ಮಹುಮಜ್ಜಮಂಸಸೇವೀ ಪಾವಇ ಪಾವಂ ಚಿರೇಣ ಜಂ ಘೋರಂ ||
ತಂ ಏಯದಿಣೇ ಣ ಪುರುಸೋ ಲಹೇಇ ಪಾರದ್ಧಿ ದೇಸವಿರಏಣ || ೯೯ ||

ಮಧುಮದ್ಯ ಮಾಂಸಸೇವೀ ಪ್ರಾಪ್ನೋತಿ ಪಾಪಂ ಚಿರೇಣ ಯತ್ ಘೋರಮ್ ||
ತದೇಕದಿನೇನ ಪುರುಷೋ ಲಭತೇ ಪಾಪರ್ಧಿಃ ದೇಶವಿರತೇನ ||

ಅರ್ಥಃ—ಬಹು ದಿವಸದಿಂದ ಮದ್ಯ, ಮಾಂಸ, ಮಧು ಸೇವನೆಯನ್ನು ಮಾಡಿದರೆ ಎಷ್ಟು ಪಾಪ ಬರುವದೋ, ಅಷ್ಟು ಒಂದು ದಿವಸ ಬೇಟೆಯಾಡುವದರಿಂದ ಬರುತ್ತದೆ. ಆದದರಿಂದ ಬೇಟೆಯನ್ನಾಡಬಾರದು.

ಸಂಸಾರಮ್ಮಿ ಅಣಂತಂ ದುಕ್ಖಂ ಪಾವೇದಿ ತೇಣ ಪಾವೇಣ ||
ತಮ್ಹಾ ವಿವಜ್ಜಿಯವ್ವಾ ಪಾರದ್ಧೀ ದೇಸವಿರಏಣ || ೧೦೦ ||

ಸಂಸಾರೇನಂತಂ ದುಃಖಂ ಪ್ರಾಪ್ನೋತಿ ತೇನ ಪಾಪೇನ ||
ತಸ್ಮಾದ್ವಿವರ್ಜಿತವ್ಯಾ ಪಾಪರ್ದ್ಧಿರ್ದೇಶವಿರತೇನ ||

ಅರ್ಥಃ—ಬೇಟೆಯಾಡುವದರಿಂದ ಸಂಸಾರದಲ್ಲಿ ಅನೇಕ ದುಃಖಗಳುಂಟಾಗುತ್ತವೆ. ಆದದರಿಂದ ಬೇಟೆಯಾಡುವದನ್ನು ಬಿಟ್ಟು ಬಿಡಬೇಕು.

## ಚೌರ್ಯದೋಷವು.

ಪರದವ್ವಹರಣಸೀಲೋ ಇಹಲೋಏ ಅಸಾಯ ಬಹುಳಾಓ ||
ಪಾಉಣಇ ಜಾಯಣಾಓ ಣ ಕಯಾ ವಿ ಸುಹಂ ವಿಲೋಏಸಿ || ೧೦೧ ||

ಪರದ್ರವ್ಯಹರಣಶೀಲ ಇಹಲೋಕೇ ಅಸೂತಾ ಬಹುಲಾ: ||
ಪ್ರಾಪ್ತ್ವಾ ಯಾತನಾತೋ ನ ಕದಾಪಿ ಸುಖಂ ವಿಲೋಕತೇ ||

ಅರ್ಥ:—ಪರದ್ರವ್ಯವನ್ನು ಅಪಹರಿಸುವ ಕಳ್ಳನು ಈ ಲೋಕದಲ್ಲಿ ಬಹು ವಿಧವಾದ ದು:ಖವನ್ನನುಭವಿಸಿ, ಲೇಶವಾದರೂ ಸುಖವನ್ನು ಭೋಗಿಸುವದಿಲ್ಲ.

ಹರಿಉಂ ಪರಸ್ಸ ಧಣಂ ಚೌರೋ ಪರಿವೇವಮಾಣಸವ್ವಂಗೋ ||
ಚಇಊಣ ಣಿಯಯಗೇಹಂ ಧಾವಇ ಉಪಹೇಣ ಸಂತತ್ಥೋ || ೧೦೨ ||

ಹೃತ್ವಾ ಪರಸ್ಯ ಧನಂ ಚೋರ: ಪರಿವೇಪಮಾನಸರ್ವಾಂಗಃ ||
ತ್ಯಕ್ತ್ವಾ ನಿಜಗೇಹಂ ಧಾವತ್ಯುತ್ಪಥೇನ ಸಂತ್ರಸ್ತ: ||

ಅರ್ಥಃ—ಕಳ್ಳನು ಪರದ್ರವ್ಯವನ್ನು ಕದ್ದು, ಅಂಜಿಕೆಯಿಂದ ನಡಗುತ್ತಾನೆ. ತನ್ನನ್ನು ಯಾರಾದರೂ ಹಿಡಿಯುವರೆಂದು ತನ್ನ ಮನೆಯ ಮಾರ್ಗವನ್ನು ಬಿಟ್ಟು ಕೆಟ್ಟದಾರಿಯಿಂದ ಓಡಿ ಹೋಗುತ್ತಾನೆ.

ಕಿಂ ಕೇಣ ವಿ ದಿಠ್ಠೋ ಹಂ ಣ ವೇದಿ ಹಿದಏಣ ಧಗಧಗಂತೇಣ ||
ಲ್ಹುಕಇ ಪಲಾಯಮಾಣೋ ಖಲಇ ಣಿದ್ದಂ ಣ ಲಹೇಇ ಭಯವಿಠ್ಠೋ ||

ಕಿಂ ಕೇನಾಪಿ ದೃಷ್ಟೋಽಹಂ ನ ವೇತ್ತಿ ಹೃದಯೇನ ಕಂಪಮಾನೇನ ||
ಗುಪ್ತಂ ಪಲಾಯಮಾನಃ ಸ್ಖಲತಿ ನಿದ್ರಾಂ ನ ಲಭತೇ ಭಯಾವಿಷ್ಟಃ ||

ಅರ್ಥಃ--ಕಳವು ಮಾಡಿದವನು ನನ್ನನ್ನು ಯಾರಾದರು ನೋಡಿರಬಹುದೇನು? ಹೀಗೆ ಸಂಶಯದಿಂದ ನಡಗುತ್ತಾನೆ. ಅವನ ಹೃದಯವು ಹಾರುತ್ತದೆ. ಮತ್ತು ಗುಪ್ತದಿಂದ ಓಡುವಾಗ ಎಡವಿ ಬೀಳುತ್ತಾನೆ. ರಾಜಸೇವಕರು ತನ್ನನ್ನು ಹಿಡಿಯುವರೆಂಬ ಭೀತಿಯಿಂದ ಒಂದು ಕ್ಷಣವಾದರೂ ಅವನಿಗೆ ನಿದ್ದೆ ಬರುವದಿಲ್ಲ.

ಣ ಗಣೇಇ ಮಾಯಪಪ್ಪಂ ಗುರುಮಿತ್ತಂ ಸಾಮಿಣಂ ತವಸ್ಸಿಂ ವಾ ||
ಪರವಲೇಣ ಹರಇ ಛಲೇಣ ಕಿಂಚಿಣ್ಣಂ ಕಿಂಪಿ ಜಂ ತೇಸಿಂ || ೧೦೪ ||

ನ ಗಣಯತಿ ಮಾತಾಪಿತರೌ ಗುರುಮಿತ್ರೇ ಸ್ವಾಮಿನಂ ತಪಸ್ವಿನಂ ವಾ ||
ಪ್ರಬಲೇನ ಹರತಿ ಛಲೇನ ಕಿಂಚಿನ್ನ ಕಿಮಪಿ ಯತ್ತೇಷಾಮ್ ||

ಅರ್ಥ:—ಕಳ್ಳನು ತಾಯಿ, ತಂದೆ, ಗುರು, ಮಿತ್ರ, ಯಜಮಾನ, ಅಥವಾ ತಪಸ್ವಿ ಮುಂತಾದವರನ್ನು ಲೆಕ್ಕಿಸುವದಿಲ್ಲ, ಬಲಾತ್ಕಾರದಿಂದಾಗಲಿ ಕಪಟದಿಂದಾಗಲಿ ಅವರ ಹಣವನ್ನು ಹರಣಮಾಡುತ್ತಾನೆ. ಆದರೂ ದ್ರವ್ಯವು ಅವನ ಬಳಿಯಲ್ಲಿ ಉಳಿಯದ್ದರಿಂದ ಅವನು ಯಾವಾಗಲೂ ದರಿದ್ರನಾಗಿಯೇ ಇರುತ್ತಾನೆ.

ಲಜ್ಜಾ ತಹಾಭಿಮಾಣಂ ಜಸಸೀಳವಿಣಾಸಮಾದಣಾಸಂ ಚ ||
ಪರಳೋಯಭಯಂ ಚೌರೋ ಅಗಣಂತೋ ಸಾಹಸಂ ಕುಣಈ || ೧೦೫ ||

ಲಜ್ಜಾಂ ತಥಾಭಿಮಾನಂ ಯಶಃಶೀಲವಿನಾಶಮಾತ್ಮನಾಶಂ ಚ ॥
ಪರಲೋಕಭಯಂ ಚೌರೋಗಣಯನ್ಸಾಹಸಂ ಕರೋತಿ ॥

ಅರ್ಥ:—ಕಳ್ಳನು ನಾಚಿಕೆ, ಅಭಿಮಾನ, ಅಪಕೀರ್ತಿ, ದುರಾಚರಣೆ, ಆತ್ಮ ಘಾತ ಮತ್ತು ಪರಲೋಕ ಭೀತಿ ಇವೆಲ್ಲವುಗಳನ್ನು ಲಕ್ಷಕ್ಕೆ ತರದೆ, ಕದಿಯುವ ಸಾಹಸ ವನ್ನು ಮಾಡುತ್ತಾನೆ.

ಹರಮಾಣೇ ಪರದವ್ವಂ ದಠ್ಠೂಣಾರಖ್ಖಿಏಹಿ ತೋ ಸಹಸಾ ॥
ರಜ್ಜೂಹಿ ಪಂದಊಣಂ ಘಿಪ್ಪಇ ಸೋ ಮೋರಪಂಧೇಣ ॥ ೧೦೬ ॥
ಹಿಂಡಾವಜ್ಜಇ ಟಿಂಟಇ ರಥ್ಥಾಸು ಚಡಾವಿಊಣ ಖರಪುಠ್ಠಿಂ ॥
ವಿಥ್ಥಾರಜ್ಜಇ ಚೌರೋ ಏಸೋ ತ್ತಿ ಜಣಸ್ಸ ಮಜ್ಝಮ್ಮಿ ॥ ೧೦೭ ॥
ಅಣ್ಣೋ ವಿ ಪರಸ್ಸಂ ಜೋ ಹರೇಇ ಸೋ ಏರಿಸಂ ಫಲಂ ಲಹಈ ॥
ಏವಂ ಭಣಿಊಣ ಪುಣೋ ಣಿಜ್ಜಇ ಪುರಬಾಹಿರೇ ತುರಿಯಂ ॥ ೧೦೮ ॥
ಣೇಉದ್ಧಾರಂ ಅಹವಾ ಪಾಣಿಪಾಯ ಗಹಣಂ ಣಿಸುಭಣಂ ॥
ಅಹವಾ ಜೀವಂತಸ್ಸ ವಿ ಮೂಲವೀರಾಹಣಂ ಕಿರೇಇ ಖಲೇಹಿಂ ॥ ೧೦೯ ॥

ಹ್ರಿಯಮಾಣೇ ಪರದ್ರವ್ಯೇ ದೃಷ್ಟ್ವಾರಕ್ಷಕೈಸ್ತತಃ ಸಹಸಾ ॥
ರಜ್ಜೂಭಿರ್ಬಂಧಯಿತ್ವಾ ಗೃಹೀತ್ವಾ ಪೃಷ್ಠಾದಿಬಂಧೇನ ॥
ಭ್ರಾಮಯಿತ್ವಾ ಕಲಕಲಂ ಕೃತ್ವಾ ರಥ್ಯಾಸು ಚಟಯಿತ್ವಾ ಖರಪೃಷ್ಠಮ್ ॥
ವಿಸ್ತಾರಯತಿ ಚೌರ ಏಷ ಇತಿ ಜನಸ್ಯ ಮಧ್ಯೇ ॥
ಅನ್ಯೋಽಪಿ ಪರಸ್ವಂ ಯೋ ಹರೇತ್ಸೋಽಪೀದೃಶಂ ಫಲಂ ಲಭೇತ ॥
ಏವಂ ಭಣಿತ್ವಾ ಪುನರ್ನಿರ್ಗಚ್ಛತಿ ಪುರಬಾಹ್ಯೇ ತ್ವರಿತಮ್ ॥
ನೇತ್ರೋತ್ಪಾಟನಮಥವಾ ಪಾಣಿಪಾದಂ ಗೃಹೀತ್ವಾ ವಿಶೋಭನಮ್ ॥
ಅಥವಾ ಜೀವಿತಸ್ಯಾಪಿ ಮೂಲವಿರಾಧನಂ ಕ್ರಿಯತೇ ಖಲೈಃ ॥

ಅರ್ಥ:—ಪರರ ಹಣವನ್ನು ಕದಿಯುವ ಕಳ್ಳನನ್ನು ರಾಜಸೇವಕರು ( ಪೋಲಿಸರು ) ಕಂಡರೆ, ಅವನನ್ನು ಕೂಡಲೇ ಹಿಡಿದು ಹಗ್ಗಗಳಿಂದ ಹೆಡಮುರಿಗೆ ಕಟ್ಟಿ, ಕತ್ತೆಯ ಮೇಲೆ ಕೂಡ್ರಿಸಿ, ನಗರದಲ್ಲಿರುವ ರಾಜಮಾರ್ಗಗಳಲ್ಲಿ ಮೆರೆಸುತ್ತಾರೆ. ಮತ್ತು ದೊಡ್ಡ ಧ್ವನಿಯಿಂದ ಕೂಗಿ “ ನೋಡಿರಿ, ಇವನು ಕಳ್ಳನು ಇರುತ್ತಾನೆ. ಬೇರೆ ಯಾವ ಪುರುಷನಾದರೂ ಕಳ್ಳತನವನ್ನು ಮಾಡಿದರೆ ಇವನಂತೆ ಅವನಿಗಾದರೂ ಫಲ ದೊರೆಯುವದು ” ಎಂದು ಪ್ರಸಿದ್ಧ ಮಾಡುತ್ತಾರೆ. ಆ ಕಳ್ಳನನ್ನು ಊರ ಹೊರಗೆ ಒಯ್ದು, ಅವನ ಅಪರಾಧದಂತೆ ಕೈಕಾಲುಗಳನ್ನು ಕಡಿದು, ಕಣ್ಣುಗಳನ್ನು ಕಿತ್ತು, ಕಿವಿಗಳನ್ನು ಕೊಯ್ದು, ಕುರೂಪಿಯನ್ನು ಮಾಡುತ್ತಾರೆ; ಅಥವಾ ಅವನ ಅಪರಾಧವು ಬಹು ದೊಡ್ಡದಿದ್ದರೆ ಚಂಡಾಲರಿಂದ ಅವನ ವಧವನ್ನು ಸಹ ಮಾಡಿಸುತ್ತಾರೆ. ಈ ಮೇರೆಗೆ ಕಳ್ಳನು ಕಳವಿನ ಫಲವನ್ನು ಈ ಲೋಕದಲ್ಲಿ ಅನುಭವಿ

ಸುತ್ತಾನೆ. ಮತ್ತು ಪರಲೋಕದಲ್ಲಾದರೂ ಅನಂತ ದು:ಖಗಗಳನ್ನು ಭೋಗಿಸುವನು. ಹೀಗಿರುವದರಿಂದ ಕಳವು ಮಾಡುವದನ್ನು ಬಿಡಬೇಕು.

ಏವಂ ಪಿಚ್ಛಂತೋ ವಿಹು ಪರದವ್ವಂ ಚೋರಯಾಇ ಗಿಣ್ಹಂತಿ ॥
ಣ ಮುಣಂತಿ ಕಿಮಪಿ ಸಹಿಯಂ ಪೇಚ್ಛಹ ಹೋ ಮೋಹಮಾಹಪ್ಪಂ ॥ ೧೧೦ ॥

ಏವಂ ಪ್ರೇಕ್ಷಂತೋಪಿ ಖಲು ಪರದ್ರವ್ಯಂ ಚೋರಯಿತ್ವಾ ಗೃಹ್ಣಂತಿ ॥
ನ ಜಾನಂತಿ ಕಿಮಪಿ ಸ್ವಹಿತಂ ಪ್ರೇಕ್ಷಥ ಹೋ ಮೋಹಮಾಹಾತ್ಮ್ಯಮ್ ॥

ಅರ್ಥ:—ಮೇಲೆ ಹೇಳಿದಂತೆ ಕಳವಿನ ದುಷ್ಪರಿಣಾಮವನ್ನು ಪ್ರತ್ಯಕ್ಷ ನೋಡುತ್ತಿದ್ದರೂ ಪುನಃ ಕಳವು ಮಾಡುತ್ತಾರೆ. ಅವರಿಗೆ ಸ್ವಹಿತವಾದರೂ ತಿಳಿಯುವದಿಲ್ಲ. ಮೋಹದ ಲೀಲೆಯು ಹ್ಯಾಗಿರುವದು ನೋಡಿರಿ!

ಪರಲೋಏವಿ ಯ ಚೌರೋ ಚಉಗಇಸಂಸಾರಸಾಯರೇ ಣಿಮ್ಮಣ್ಣೋ ॥
ಪಾವಇ ದುಕ್ಖಮಣಂತಂ ತೇಯಂ ಪರಿವಜ್ಜಪಿ ತಮ್ಹಾ ॥ ೧೧೧ ॥

ಪರಲೋಕೇಪಿ ಚ ಚೌರಶ್ಚತುರ್ಗತಿಸಂಸಾರಸಾಗರೇ ನಿರ್ಮಗ್ನಃ ॥
ಪ್ರಾಪ್ನೋತಿ ದುಃಖಮನಂತಂ ಸ್ತೇಯಂ ಪರಿವರ್ಜಯೇತ್ತಸ್ಮಾತ್ ॥

ಅರ್ಥಃ—ಕಳವು ಮಾಡುವ ಜೀವವು ಮರಣ ಹೊಂದಿದ ಮೇಲೆ ನರಕ ಮುಂತಾದ ನಾಲ್ಕು ಗತಿಯುಳ್ಳ ಸಂಸಾರಸಮುದ್ರದಲ್ಲಿ ಮುಳುಗಿ ಅನಂತ ದು:ಖಗಳನ್ನು ಭೋಗಿಸುತ್ತದೆ.

ದಠ್ಠೂಣ ಪರಕಲತ್ತಂ ಣಿಬ್ಬುದ್ಧೀ ಜೋ ಕರೇಇ ಅಹಿಲಾಸಂ ॥
ಣ ಯ ಕಿಂಪಿ ತತ್ಥ ಪಾವಇ ಪಾವಂ ಏಮೇವ ಅಜ್ಜೇಈ ॥ ೧೧೨ ॥

ದೃಷ್ಟ್ವಾ ಪರಕಲತ್ರಂ ನಿರ್ಬುದ್ಧಿರ್ಯಃ ಕರೋತ್ಯಭಿಲಾಷಮ್ ॥
ನ ಚ ಕಿಮಪಿ ತತ್ರ ಪ್ರಾಪ್ನೋತಿ ಪಾಪಮೇವಾರ್ಜಯತಿ ॥

ಅರ್ಥ:—ಪರಸ್ತ್ರೀಯರನ್ನು ನೋಡಿ ಅವರಲ್ಲಿ ಯಾವನು ಅಭಿಲಾಷೆಯನ್ನಿಡುವನೋ, ಅವನಿಗೆ ಯಾವದೂ ಲಾಭವಾಗದೆ ದುಷ್ಟ ಚಿಂತನೆಯಿಂದ ಪಾಪ ಮಾತ್ರ ಬರುತ್ತದೆ.

ಣಿಸ್ಸಾಸಇ ರುಯಇ ಗಾಯಇ ಣಿಯಸಿರಂ ಹಣಇ ಮಹೀಯಲೆ ಪಡಇ ॥
ಪರಮಹಿಲಮಲಭಮಾಣೋ ಅಸಪ್ಪಲಾವಂ ಪಿ ಜಪ್ಪೇಈ ॥ ೧೧೩ ॥

ನಿಃಶ್ವಸಿತಿ ರುದತಿ ಗಾಯತಿ ನಿಜಶಿರೋ ಹಂತಿ ಮಹೀತಲೇ ಪತತಿ ॥
ಪರಮಹಿಲಾಮಲಭಮಾನೋಸತ್ಪ್ರಲಾಪಮಪಿ ಜಲ್ಪತಿ ॥

ಅರ್ಥ:—ಪರಸತಿಯನ್ನು ಇಚ್ಛಿಸುವ ತಿಳಿಗೇಡಿಯಾದ ಪುರುಷನು ಆ ಸ್ತ್ರೀಯಳ ಧ್ಯಾನದಿಂದ ( ಅವಳು ವಶವಾಗದಿದ್ದರೆ ) ನಿಟ್ಟುಸುರುಗಳನ್ನು ಬಿಡುತ್ತಾನೆ, ಅಳು

ತ್ತಾನೆ, ಹಾಡುತ್ತಾನೆ, ಹಣೆಯನ್ನು ಗಟ್ಟಿಸಿಕೊಳ್ಳುತ್ತಾನೆ, ಸ್ಮೃತಿ ತಪ್ಪಿ ಭೂಮಿಯ ಮೇಲೆ ಬಿದ್ದು ಹುಚ್ಚನಂತೆ ಮನಸ್ಸಿಗೆ ಬಂದಂತೆ ಬೊಗಳುತ್ತಾನೆ.

ಚಿಂತೇಇ ಮಂ ಕಿಮಿಚ್ಛಇ ಣ ವೇಇ ಸಾ ಕೇಣ ವಾ ಉವಾಏಣ ॥
ಅಣೇಮಿ ಕಸ್ಸ ವಿ ಣಾವೆ ಣ ವೇ ತಿ ಚಿಂತಾಉರೋ ಸದದಂ ॥ ೧೧೪ ॥

ಚಿಂತಯತಿ ಮಾಂ ಕಿಮಿಚ್ಛತಿ ನ ವೇತಿ ಸಾ ಕೇನ ವಾ ಉಪಾಯೇನ ॥
ಆನಯಾಮಿ ಕಸ್ಯಾಪಿ ನಿವೇದಯಾಮಿ ನ ವೇತಿ ಚಿಂತಾತುರ: ಸತತಮ್ ॥

ಅರ್ಥಃ—ಅವನು ಮನಸ್ಸಿನಲ್ಲಿ ಅನೇಕ ವಿಧವಾಗಿ ದುರಾಲೋಚನೆ ಮಾಡುತ್ತಾನೆ. ಆ ಸ್ತ್ರೀಯಳು ನನ್ನನ್ನು ಇಚ್ಛಿಸುವಳೋ ಇಲ್ಲವೋ, ಆಕೆಯು ನನಗೆ ವಶವಾಗದಿದ್ದರೆ ಯಾವ ಉಪಾಯವನ್ನು ಯೋಚಿಸಬೇಕು; ಯಾರಮುಂದೆ ಹೇಳಿದರೆ ಈ ಕೆಲಸವಾಗುವದು, ಯಾರಿಗಾದರು ಹೇಳಲೋ? ಹೀಗೆ ಯಾವಾಗಲೂ ಚಿಂತೆಯನ್ನು ಮಾಡುತ್ತಾನೆ.

ಣ ಕುತ್ಥ ವಿ ಕುಣಇ ರಇ ಮಿಠ್ಠಂ ಮಿ ಯ ಭೋಯಣಂ ಣ ಭುಂಜೇಇ ॥
ಣಿದ್ದಂ ಪಿ ಅಲಹಮಾಣೋ ಇತ್ಥಿವಿರಹೇಣ ಸಂತತ್ತೋ ॥ ೧೧೫ ॥

ನ ಕುತ್ರಾಪಿ ಕರೋತಿ ರತಿಂ ಮಿಷ್ಟಮಪಿ ಚ ಭೋಜನಂ ನ ಭುನಕ್ತಿ ॥
ನಿದ್ರಾಮಪ್ಯಲಭಮಾನಃ ಸ್ತ್ರೀವಿರಹೇನ ಸಂತಪ್ತಃ ॥

ಅರ್ಥ:—ಪರಸ್ತ್ರೀಯ ವಿರಹದಿಂದ ಸಂತಪ್ತನಾದ ಪುರುಷನು ಎಲ್ಲಿ ಹೋದರೂ ಸಮಾಧಾನ ಹೊಂದುವದಿಲ್ಲ; ಮಿಷ್ಟಾನ್ನವು ಅವನಿಗೆ ಸೇರುವದಿಲ್ಲ; ಒಂದು ಕ್ಷಣವಾದರೂ ನಿದ್ದೆ ಹತ್ತುವದಿಲ್ಲ.

ಲಜ್ಜಾ ಕುಲಕ್ಕಮಂ ಛಂಡಿಊಣ ಮಜ್ಜಾಇಭೋಯಣಂ ಕಿಚ್ಚಾ ॥
ಪರಮಹಿಳಾಣಂ ಚಿತ್ತಂ ಅಮುಣಂತೋ ಪತ್ಥಣಂ ಕುಣಇ ॥ ೧೧೬ ॥

ಲಜ್ಜಾಂ ಕುಲಕ್ರಮಂ ಛಂಡಯಿತ್ವಾ ಮದ್ಯಾದಿಭೋಜನಂ ಕೃತ್ವಾ ॥
ಪರಮಹಿಲಾನಾಂ ಚಿತ್ತಮಜಾನನ್ ಪ್ರಾರ್ಥನಾಂ ಕರೋತಿ ॥

ಅರ್ಥ:—ಪರಸ್ತ್ರೀ ಲಂಪಟನು ತನ್ನ ಕುಲಾಚಾರವನ್ನು ಬಿಟ್ಟು, ನಾಚಿಕೆ ಇಲ್ಲದೆ ಮದ್ಯಸೇವನೆಯನ್ನು ಮಾಡುತ್ತಾನೆ. ಆಕೆಯು ಇಚ್ಛೆಯು ಯಾವದೆಂಬದನ್ನು ತಿಳಿಯದೆ ಅವಳ ಪ್ರಾರ್ಥನೆಯನ್ನು ಮಾಡುತ್ತಾನೆ.

ಣೇಚ್ಛತಿ ಜಇ ವಿ ತ್ತಾಊ ಉವಯಾರಸಯಾಣಿ ಕುಣಈ ಸೋ ॥
ತಹ ವಿ ಣಿಬ್ಭಡಿಜ್ಜತ್ತೋ ಪುಣ ಅಪ್ಪಾಣಂ ಝೂರಇ ವಿಲಖ್ಖೋ ॥ ೧೧೭॥

ನೇಚ್ಛತಿ ಯದ್ಯಪಿ ತಥಾಪ್ಯುಪಚಾರಶತಾನಿ ಕರೋತಿ ಸಃ ॥
ತಥಾಪಿ ನಿರ್ಭರ್ತ್ಸ್ಯಮಾನ: ಪುನರಾತ್ಮಾನಂ ಝೀರ್ಯತಿ ವಿಲಕ್ಷ: ॥

ಅರ್ಥ:—ಬಹುವಿಧವಾದ ಆರ್ಜವಗಳನ್ನು ಮಾಡಿದರೂ ಆ ಸ್ತ್ರೀಯಳು ವಶವಾಗದಿದ್ದರೆ, ನಿರಾಶೆನಾಗದೆ ಮತ್ತೂ ನೂರಾರು ಕುಯುಕ್ತಿಗಳನ್ನು ರಚಿಸುತ್ತಾನೆ. ಇಷ್ಟಾದರೂ ಆಕೆಯು ವಶವಾಗದೆ ಇವನನ್ನು ಧಿಕ್ಕರಿಸಿದರೆ, ಹತಾಶನಾಗಿ ಆಕೆಯ ಧ್ಯಾನದಿಂದ ಸೊರಗುತ್ತಾನೆ.

ಅಹ ಭುಂಜಇ ಪರಮಹಿಲಂ ಅಣಿಚ್ಛಮಾಣಂ ಬಲಾ ಧರೇಊಣ ॥
ಕಿಂ ತತ್ಥ ಹವಇ ಸುಕ್ಖಂ ಪಚ್ಛೇಲಿಉ ಪಾವಈ ದುಕ್ಖಂ ॥ ೧೧೮ ॥

ಅಥ ಭುನಕ್ತಿ ಪರಮಹಿಲಾಮನಿಚ್ಛಮಾನಾಂ ಬಲಾದ್ಧಾರಯಿತ್ವಾ ॥
ಕಿಂ ತತ್ರ ಭವತಿ ಸೌಖ್ಯಂ ಪಶ್ಚಾತ್ಪ್ರಾಪ್ನೋತಿ ದುಃಖಮ್ ॥

ಅರ್ಥ:—ಕಾಮಾಂಧನು ಆ ಸ್ತ್ರೀಯಳ ಇಚ್ಛೆಯಿಲ್ಲದೆ ಬಲಾತ್ಕಾರದಿಂದ ಪರಸ್ತ್ರೀ ಸಂಭೋಗಮಾಡಿದರೆ, ಆದರಲ್ಲಿ ಅವನಿಗೆ ಯಾವತರದ ಸುಖವಾಗದೆ ಕಡೆಗೆ ದುಃಖವೇ ಆಗುವದು.

ಅಹ ಕಾ ವಿ ಪಾವಬಹೂಳಾ ಅಸಈ ಣಿಣ್ಣಾಸಿಊಣ ಣಿಯಸೀಳಂ ॥
ಸಯಮೇವ ಪೀಛಿಯಾಊ ಉವರೋಹವಸೇಣ ಅಪ್ಪಾಣಂ ॥ ೧೧೯ ॥

ಜಇ ದೇವಿ ತತ್ಥ ಸುಂಣಹರಖಂಡದೇಉಳಯಮಜ್ಝಮ್ಮಿ ॥
ಸಚಿಂತೋ ಭಯಭೀದೋ ಸೋಖ್ಖಂ ಕಿಂ ತತ್ಥ ಪಾಉಣಈ ॥ ೧೨೦ ॥

ಅಥ ಕಾಪಿ ಪಾಪಬಹುಲಾ ಅಸತೀ ನಿರ್ನಾಶಯಿತ್ವಾ ನಿಜಶೀಲಮ್ ॥
ಸ್ವಯಮೇವ ಪ್ರಾರ್ಥಯತ್ಯುಪರೋಧವಶೇನಾತ್ಮಾನಮ್ ॥
ಯದಿ ದೇವೀ ತತ್ರ ಶೂನ್ಯಗೃಹಖಂಡದೇವಾಲಯೇಷು ॥
ಸಚಿಂತೋ ಭಯಭೀತಃ ಸೌಖ್ಯಂ ಕಿಂ ತತ್ರ ಪ್ರಾಪ್ನೋತಿ ॥

ಅರ್ಥ:—ಒಂದು ಸಮಯದಲ್ಲಿ ದುರಾಚಾರಿಣಿಯೂ ಪಾಪಿಣಿಯೂ ಆದ ಸ್ತ್ರೀಯಳು ತನ್ನ ಕುಲಶೀಲವನ್ನು ಬಿಟ್ಟು, ಕಾಮಪೀಡಿತಳಾಗಿ ತಾನಾಗಿ ಪರಪುರುಷನನ್ನು ಅಪೇಕ್ಷಿಸಿದರೆ, ಈ ವಿಷಯಾಸಕ್ತನು ಅವಳ ಆಶೆಯಿಂದ ಹಾಳು ಗುಡಿಗಳಲ್ಲಿ ಅಥವಾ ಹಾಳು ಮನೆಯಲ್ಲಿ ತನ್ನ ಕಾಮಿನಿಯು ಯಾವಾಗ ಬರುತ್ತಾಳೆಂದು ಚಿಂತೆ ಮಾಡುತ್ತ, ಜನರು ನೋಡುವರೆಂದು ಭಯಭೀತನಾಗಿ ಭಯಂಕರ ಪ್ರದೇಶದಲ್ಲಿ ಕೂತಿರುತ್ತಾನೆ. ಹೀಗಿದ್ದ ಮೇಲೆ ಅಲ್ಲಿ ಅವನಿಗೆ ಯಾವತರದ ಸೌಖ್ಯವು ಪ್ರಾಪ್ತವಾಗುವದು? ಯಾವದೂ ಇಲ್ಲ.

ಸೋಊಣ ಕಿಂ ಪಿ ಸದ್ದಂ ಸಹಸಾ ಪರಿವೇವಮಾಣಸವ್ವಂಗೋ ॥
ಛಿಪ್ಪಇ ಪಲಾಇ ಲುಕ್ಕಇ ಚಉದ್ದಿಸಂ ಣಿಯಇ ಭಯಭೀಓ ॥ ೧೨೧ ॥

ಶ್ರುತ್ವಾ ಕಿಮಪಿ ಶಬ್ದಂ ಸಹಸಾ ಪರಿವೇಪಮಾನಸರ್ವಾಂಗಃ ||
ಛಿಪಯತಿ ಪಲಾಯತಿ ಸ್ಖಲತಿ ಚತುರ್ದಿಶಂ ನಿರೀಕ್ಷತೇ ಭಯಭೀತಃ ||

ಅರ್ಥ:—ಪರಸತಿಯು ಕೂಡ ಏಕಾಂತದಲ್ಲಿರುವಾಗ ಯಾವದಾದರೂ ಸಪ್ಪಳವಾದ ಕೂಡಲೆ, ವಿಟಪುರುಷನು ಒಂಮ್ಮಿಂದೊಮ್ಮೆ ಅಂಜಿ ಗದಗದ ನಡುಗುತ್ತಾನೆ. ಅಡಗಿಕೊಳ್ಳುವದಕ್ಕಾಗಿ ಓಡುವಾಗ ಎಡವಿ ಬೀಳುತ್ತಾನೆ. ಜನರು ನೋಡುವರೆಂದು ನಾಲ್ಕೂ ಕಡೆಗೆ ನೋಡಹತ್ತುತ್ತಾನೆ.

ಜಇ ಪುಣ ಕೇಣ ವಿ ದೀಸಇ ಣಿಜ್ಜಇ ತೋ ವಂಧಿಊಣ ಣಿವಗೇಹಂ ||
ಚೋರಸ್ಸ ಣಿಗ್ಗಹಂ ಸೋ ತತ್ಥಇ ಪಾಉಣಇ ಸವಿಸೇಸಂ || ೧೨ ||

ಯದಿ ಪುನಃ ಕೇನಾಪಿ ದೃಶ್ಯತೇ ನೀಯತೇ ತರ್ಹಿ ಬಂಧಯಿತ್ವಾ ನೃಪಗೇಹಮ್ ||
ಚೋರಸ್ಯ ನಿಗ್ರಹಂ ಸ ತತ್ರಾಪಿ ಪ್ರಾಪ್ನೋತಿ ಸವಿಶೇಷಮ್ ||

ಅರ್ಥ:— ಇಷ್ಟರಲ್ಲಿ ಯಾರಾದರೂ ನೋಡಿದರೆ ಕಳ್ಳನಂತೆ ಅವನನ್ನು ಹಿಡಿದು ಮುಸಿಕೆ ಕಟ್ಟಿ ಅರಸನ ಕಡಿಗೆ ಒಯ್ಯುತ್ತಾರೆ. ಅಲ್ಲಿ ಅವನಿಗೆ ಕಠಿಣವಾದ ಶಿಕ್ಷೆಯನ್ನು ಮಾಡುತ್ತಾರೆ.

ಪೇಚ್ಛಹ ಮೋಹವಿಡಂವಣ ಳೋಗೋ ದಠ್ಠೂಣ ಏರಿಸಂ ದೋಸಂ ||
ಪೇಚ್ಛಂತೋ ತಹ ವಿ ಖಳೋ ಪರತ್ಥಿಮಹಿಸಲದಿ ದುಚ್ಚಿತ್ತೋ || ೧೩ ||

ಪ್ರೇಕ್ಷಧ ಮೋಹವಿಡಂಬನಂ ಲೋಕೋ ದೃಷ್ಟ್ವೇದೃಶಂ ದೋಷಮ್ ||
ಪ್ರೇಕ್ಷಂಸ್ತಥಾಪಿ ಖಲಃ ಪರಸ್ತ್ರಿಯಮಭಿಲಷತಿ ದುಶ್ಚಿತ್ತಃ ||

ಅರ್ಥಃ—ಎಲೈ ಸಜ್ಜನರೇ, ಮೋಹದ ಪ್ರಭಾವವು ಹ್ಯಾಗಿರುವದು ನೋಡಿರಿ, ಪರಸ್ತ್ರೀಯರ ಭೋಗದಲ್ಲಿ ಮೇಲೆ ಹೇಳಿದಂತೆ ದೋಷಗಳನ್ನು ಪ್ರತ್ಯಕ್ಷ ನೋಡುತ್ತಿದ್ದರೂ ದುಷ್ಟಜನರು ಮತ್ತೂ ಆ ಪರಸ್ತ್ರೀಯರ ಅಭಿಲಾಷವನ್ನು ಬಿಡುವದಿಲ್ಲ.

ಪರಳೋಯಮ್ಮಿ ಅಣಂತಂ ದುಕ್ಖಂ ಪಾಉಣದಿ ಭವಸಮುದ್ದಮ್ಮಿ ||
ಪರದಾರೋ ಪರಮಹಿಳಾ ತಮ್ಹಾ ತಿವಿಹೇಣ ವಜ್ಜಿಜ್ಜಾ || ೧೪ ||

ಪರಲೋಕೇನಂತಂ ದುಃಖಂ ಪ್ರಾಪ್ನೋತಿ ಭವಸಮುದ್ರೇ ||
ಪರದಾರಾಃ ಪರಮಹಿಲಾಃ ತಸ್ಮಾತ್ತ್ರಿವಿಧೇನ ವರ್ಜಿತವ್ಯಾಃ ||

ಅರ್ಥಃ—ಪರಸ್ತ್ರೀಲಂಪಟನು ಈ ಲೋಕದಂತೆ ಪರಲೋಕದಲ್ಲಾದರೂ ಈ ಸಂಸಾರಸಾಗರದಲ್ಲಿ ಒದಗುವ ಅನಂತ ದುಃಖಗಳನ್ನು ಭೋಗಿಸುತ್ತಾನೆ. ಆದದರಿಂದ ಪರಸ್ತ್ರೀಯರ ಅಭಿಲಾಷೆಯನ್ನು ತ್ರಿಕರಣಪೂರ್ವಕವಾಗಿ ಬಿಡಬೇಕು.

# ಒಂದೊಂದು ವ್ಯಸನದ ಪರಿಣಾಮಗಳ ದೃಷ್ಟಾಂತಗಳು.

ರಜ್ಜಭಂಸಂ ವಸಣಂ ಬಾರಹಸಂವಚ್ಛರಾಣಿ ವಣವಾಸಂ ||
ಪತ್ತೋ ತಹಾವಮಾಣಂ ಜೂಏಣ ಜುಹಿಟ್ಠಿರೋ ರಾಯಾ || ೧೨೫ ||

ರಾಜ್ಯಭ್ರಂಶಂ ವ್ಯಸನಂ ದ್ವಾದಶಸಂವತ್ಸರಾನ್ ವನವಾಸಮ್ ||
ಪ್ರಾಪ್ತಸ್ತಥಾಪಮಾನಂ ದ್ಯೂತೇನ ಯುಧಿಷ್ಠಿರೋ ರಾಜಾ ||

ಅರ್ಥ:—ಜೂಜಿನಿಂದ ಧರ್ಮರಾಜನು ರಾಜ್ಯವನ್ನು ಕಳೆದುಕೊಂಡು, ಅವಮಾನವನ್ನು ಹೊಂದಿ, ಹನ್ನೆರಡು ವರ್ಷದ ತನಕ ಅರಣ್ಯವಾಸವನ್ನು ಅನುಭವಿಸಿ, ಅನೇಕ ದುಃಖಗಳನ್ನು ಹೊಂದಿದನು.

ಉಜ್ಜಾಣಮ್ಮಿ ರಮಂತಾ ತಿಸಾಭಿಭೂಯಾ ಜಲೇತ್ತಿ ಣಾಊಣ ||
ಪಿವಿಊಣ ಜುಣ್ಣಮಜ್ಜಂ ಣಟ್ಠಾ ತೇ ಜಾದವಾ ತೇಣ || ೧೨೬ ||

ಉದ್ಯಾನೇ ರಮಂತಸ್ತೃಷಾಭಿಭೂತಾ ಜಲಮಿತಿ ಜ್ಞಾತ್ವಾ ||
ಪೀತ್ವಾ ಜೀರ್ಣಮದ್ಯಂ ನಷ್ಟಾಸ್ತೇ ಯಾದವಾಸ್ತೇನ ||

ಅರ್ಥ:—ಕ್ರೀಡೆಯನ್ನು ಮಾಡುವದಕ್ಕೋಸ್ಕರ ತೋಟಕ್ಕೆ ಹೋಗಿರುವ ಯಾದವರು ನೀರಡಕೆಯಿಂದ ಬಳಲಿದ್ದರಿಂದ, ಇದೇ ನೀರೆಂದು ತಿಳಿದು ( ಕೊಳೆತ ಎಲೆಗಳಿಂದುಂಟಾದ ) ಹಳೇ ಮದ್ಯವನ್ನು ಕುಡಿದು, ತಮ್ಮೊಳಗೆ ಕಲಹ ಮಾಡಿ ನಾಶಹೊಂದಿದರು.

ಮಂಸಾಸಣೇಣ ಲುದ್ಧೋ ವಗರಖ್ಖೋ ಏಯಚಕ್ಕಣಯರಮ್ಮಿ ||
ರಜ್ಜಾಓ ಪಯಭಟ್ಟೋ ಅಯಸೇಣ ಮಓ ಗಯೋ ಣಯರಂ || ೧೨೭ ||

ಮಾಂಸಾಶನೇನ ಲುಬ್ಧೋ ಬಕರಾಕ್ಷಸ ಏಕಚಕ್ರನಗರೇ ||
ರಾಜ್ಯಪದಭ್ರಷ್ಟೋಯಶಸಾ ಮೃತೋ ಗತೋ ನರಕಮ್ ||

ಅರ್ಥ:—ಮಾಂಸ ತಿನ್ನುವದರಲ್ಲಿ ಲುಬ್ಧನಾದ ಬಕನೆಂಬ ರಾಕ್ಷಸನು ಏಕಚಕ್ರನಗರದಲ್ಲಿ ( ಭೀಮಸೇನನಿಂದ ಹತನಾಗಿ ) ರಾಜ್ಯವನ್ನು ಕಳೆದುಕೊಂಡು ಅಪಕೀರ್ತಿಯನ್ನು ಪಡೆದನು.

ಸವ್ವತ್ಥ ಣಿವುಣವುದ್ಧೀ ವೇಸಾಸಂಗೇಣ ಚಾರುದತ್ತೋ ವಿ ||
ಖಇಊಣ ಧಣಂ ಪತ್ತೋ ದುಕ್ಖಂ ಪರದೇಸಗಮಣಂ ವಾ || ೧೨೮

ಸರ್ವತ್ರ ನಿಪುಣಬುದ್ಧಿರ್ವೇಶ್ಯಾಸಂಗೇನ ಚಾರುದತ್ತೋಪಿ ||
ಕ್ಷಪಯಿತ್ವಾ ಧನಂ ಪ್ರಾಪ್ತೋ ದುಃಖಂ ಪರದೇಶಗಮನಂ ವಾ ||

ಅರ್ಥ:—ಸಕಲಕಾರ್ಯದಲ್ಲಿ ಕುಶಲನಾದ ಚಾರುದತ್ತನೆಂಬ ಶ್ರೇಷ್ಠಿಯು ಗಣಿಕೆ (ವಸಂತತಿಲಕೆ)ಯ ಸಂಗದಿಂದ ಹಣವನ್ನು ಕಳೆದು ದರಿದ್ರನಾಗಿ ಕಡೆಗೆ ಸ್ವದೇಶವನ್ನು ಬಿಟ್ಟು ಪರದೇಶಗಮನ ಮಾಡಿದನು.

ಹೋಊಣ ಚಕ್ಕವಟ್ಟಿ ಚಉದಹರಯಣಾಹಿಪತ್ತಸಂಪತ್ತೋ ॥
ಮರಿಊಣ ಬಮ್ಹಯತ್ತೋ ಣರಯಂ ಪಾರದ್ಧಿರಮಣೇಣ ॥ ೧೨೯ ॥

ಭೂತ್ವಾ ಚಕ್ರವರ್ತೀ ಚತುರ್ದಶರತ್ನಾಧಿಪತ್ಯಂ ಸಂಪ್ರಾಪ್ತಃ ॥
ಮೃತ್ವಾ ಬ್ರಹ್ಮದತ್ತೋ ನರಕಂ ಪಾಪರ್ಧಿರಮಣೇನ ॥

ಅರ್ಥ:—ಬ್ರಹ್ಮದತ್ತನೆಂಬ ಅರಸನು ೧೪ ರತ್ನಗಳಿಗೆ ಅಧಿಪತಿಯಾಗಿ ಚಕ್ರವರ್ತಿಯಾಗಿದ್ದರೂ ಬೇಟೆಯಾಡಿದ ಪಾಪದಿಂದ ಅವನಿಗೆ ನರಕಗತಿಯುಂಟಾಯಿತು.

ಣಾಸಾಪಹಾರದೋಸೇಣ ದಂಡಣಂ ಪಾವಿಊಣ ಸಿರಿಭೂಈ ॥
ಮರಿಊಣ ಅಟ್ಟಝಾಣೇಣ ಹಿಂಡಿಓ ದೀಹಸಂಸಾರೇ ॥ ೧೩೦ ॥

ನ್ಯಾಸಾಪಹಾರದೋಷೇಣ ದಂಡಂ ಪ್ರಾಪ್ಯ ಶ್ರೀಭೂತಿಃ ॥
ಮೃತ್ವಾ ಆರ್ತಧ್ಯಾನೇನ ಭ್ರಮಿತೋ ದೀರ್ಘಸಂಸಾರೇ ॥

ಅರ್ಥ:—ಬ್ರಹ್ಮದತ್ತನೆಂಬ ಬ್ರಾಹ್ಮಣನು ತನ್ನಲ್ಲಿಟ್ಟ ಹಣವನ್ನು ಅಪಹರಿಸಿದ್ದರಿಂದ ಅರಸನಿಂದ ಶಿಕ್ಷಿಸಲ್ಪಟ್ಟು ಆರ್ತಧ್ಯಾನದಿಂದ ಮರಣಹೊಂದಿದ ಮೇಲೆ ದುಃಖಮಯವಾದ ಸಂಸಾರದಲ್ಲಿ ಅನಂತಕಾಲದ ತನಕ ಭ್ರಮಣಮಾಡಿದನು.

ಹೋಊಣ ಖಯರಣಾಹೋ ವಿಯಕ್ಖಣೋ ಅದ್ಧಚಕ್ಕವಟ್ಟೀ ವಿ ॥
ಮರಿಊಣ ಗಓ ಣರಯಂ ಪರತ್ಥಿಹರಣೇಣ ಲಂಕೇಸೋ ॥ ೧೩೧ ॥

ಭೂತ್ವಾ ಖಚರನಾಥೋ ವಿಚಕ್ಷಣೋರ್ಧಚಕ್ರವರ್ತ್ಯಪಿ ॥
ಮೃತ್ವಾ ಗತೋ ನರಕಂ ಪರಸ್ತ್ರೀಹರಣೇನ ಲಂಕೇಶಃ ॥

ಅರ್ಥ:—ಆಕಾಶದಲ್ಲಿ ಸಂಚಾರ ಮಾಡುವ ವಿದ್ಯಾಧರರ ಒಡೆಯನಾದ ಅರ್ಧಚಕ್ರವರ್ತಿಯಾದ ರಾವಣನು ಚತುರನಿದ್ದರೂ ಪರಸ್ತ್ರೀಯನ್ನು (ಸೀತೆಯನ್ನು) ಹರಣ ಮಾಡಿದ ಪಾಪದಿಂದ ಮರಣಹೊಂದಿ ನರಕಕ್ಕೆ ಹೋದನು.

ಏದೇ ಮಹಾಣುಭಾವಾ ದೋಸಂ ಏಕ್ಕೇಕವಿಸಣಸೇವಾಓ ॥
ಪತ್ತಾ ಜೋ ಪುಣ ಸತ್ತ ವಿ ಸೇವಇ ವಣ್ಣಿಜ್ಜಏ ಕಿಂ ಸೋ ॥ ೧೩೨ ॥

ಏತೇ ಮಹಾನುಭಾವಾ ದೋಷಮೇಕೈಕವ್ಯಸನಸೇವಾತಃ ॥
ಪ್ರಾಪ್ತಾ ಯಃ ಪುನಃ ಸಪ್ತಾಪಿ ಸೇವತೇ ವರ್ಣ್ಯತೇ ಕಿಂ ಸಃ ॥

ಅರ್ಥ:—ಮೇಲೆ ಹೇಳಿದ ಪ್ರಸಿದ್ಧ ಪುರುಷರು ಒಂದೊಂದು ವ್ಯಸನ ದಿಂದಲೇ ದುರ್ಗತಿಯನ್ನು ಹೊಂದಿದರು. ಆದರೆ ಏಳು ವ್ಯಸನಗಳನ್ನು ಸೇವಿಸುವ ಮನುಷ್ಯನ ಹಾಡು ಏನಾಗುವದು? ಅವನ ವರ್ಣನೆಯನ್ನು ಮಾಡುವದು ಅಸಾಧ್ಯವು.

ಸಾಕೇತೇ ಸೇವಂತೋ ಸತ್ತ ವಿ ವಿಸಣಾಇ ರುದ್ದದತ್ತೋ ವಿ ||
ಮರಿಊಣ ಗಓ ಣರಯಂ ಭಮಿಊಣ ಪುಣ ದೀಹಸಂಸಾರೇ || ೧೩೩ ||

**ಸಾಕೇತಾಯಾಂ ಸೇವಮಾನಃ ಸಪ್ತಾಪಿ ವ್ಯಸನಾನಿ ರುದ್ರದತ್ತೋಽಪಿ ||**
**ಮೃತ್ವಾ ಗತೋ ನರಕಂ ಭ್ರಮಿತ್ವಾ ಪುನರ್ದೀರ್ಘಸಂಸಾರೇ ||**

ಅರ್ಥಃ—ಸಾಕೇತ (ಅಯೋಧ್ಯ)ವೆಂಬ ಪಟ್ಟಣದಲ್ಲಿ ವಾಸಮಾಡುವ ರುದ್ರದತ್ತನೆಂಬ ಬ್ರಾಹ್ಮಣನು ಸಪ್ತವ್ಯಸನಗಳನ್ನು ಸೇವಿಸಿ, ಈ ಲೋಕದಲ್ಲಿ ಅನಂತ ದುಃಖಗಳನ್ನನುಭವಿಸಿ, ಮರಣ ಹೊಂದಿದ ಮೇಲೆ ನರಕದಲ್ಲಾದರೂ ಯಾತನೆಗಳನ್ನು ಭೋಗಿಸಿದನು.

## ಏಳು ವ್ಯಸನಗಳಿಂದುಂಟಾಗುವ ಫಲಗಳ ಪ್ರತಿಜ್ಞೆಯು.

ಸತ್ತಣ್ಹಂ ವಿಸಣಾಣಂ ಫಳೇಣ ಸಂಸಾರಸಾಗರೇ ಜೀವೋ ||
ಜಂ ಪಾವಇ ವಹುದುಕ್ಖಂ ತಂ ಸಂಖೇವೇಣ ವೋಚ್ಛಾಮಿ || ೧೩೪ ||

**ಸಪ್ತಾನಾಂ ವ್ಯಸನಾನಾಂ ಫಲೇನ ಸಂಸಾರಸಾಗರೇ ಜೀವಃ ||**
**ಯತ್ಪ್ರಾಪ್ನೋತಿ ಬಹುದುಃಖಂ ತತ್ಸಂಕ್ಷೇಪೇಣ ವಕ್ಷ್ಯಾಮಿ ||**

ಅರ್ಥಃ— ಜೀವವು ಸಂಸಾರಸಾಗರದಲ್ಲಿ ಸಪ್ತವ್ಯಸನಗಳಿಂದುಂಟಾಗುವ ಬಹು ದುಃಖಗಳನ್ನು ಅನುಭವಿಸುವ ಪ್ರಕಾರವನ್ನು ಸಂಕ್ಷೇಪದಿಂದ ಹೇಳುತ್ತೇನೆ.

ಅಇಣಿಟ್ಠುರಫರಸಾಈ ಪೂಯರುಹಿಆಇದುಗಂಧಾಈ ||
ಅಸುಹಾವಇಂ ಚ ಣಿಚ್ಚಂ ಣಿರವಿಸೂ ಪತ್ತಠಾಣಾಇ || ೧೩೫ ||
ತೋ ತೇಸು ಸಮುಪ್ಪಣ್ಣೋ ಆಹಾರೇಊಣ ಪೋಗ್ಗಲೇ ಅಸುಹೇ ||
ಅಂತೋಮುಹುತ್ತಕಾಳೇ ಪಜ್ಜತೀಓ ಸಮಾಣೇಈ || ೧೩೬ ||

**ಅತಿನಿಷ್ಠುರಸ್ಪರ್ಶಾನಿ ಪೂಯರುಧಿರಾದಿದುರ್ಗಂಧೀನಿ ||**
**ಅಶುಭಾನಿ ಚ ನಿತ್ಯಂ ನಿರಯೇಷು ಪ್ರಾಪ್ತಸ್ಥಾನಾನಿ ||**
**ತತ್ರೇಷು ಸಮುತ್ಪನ್ನ ಆಹೃತ್ಯ ಪುದ್ಗಲಾನಶುಭಾನ್ ||**
**ಅಂತರ್ಮುಹೂರ್ತಕಾಲೇ ಪರ್ಯಾಪ್ತೀಃ ಸಮಾನಯತಿ ||**

ಅರ್ಥ:—ಯಾವ ಸ್ಥಲದಲ್ಲಿ ಸಹಿಸಲಿಕ್ಕೆ ಅಶಕ್ಯವಾದ ಸ್ಪರ್ಶ ( ಉಷ್ಣ ಮತ್ತು ಶೀತ ) ವಿರುತ್ತದೋ, ಕೀವು, ರಕ್ತ ಮುಂತಾದವುಗಳ ದುರ್ಗಂಧವಿರುತ್ತದೋ, ಅಶುಭಸ್ಥಾನಗಳು ಎಲ್ಲ ಕಡೆಯಲ್ಲಿ ತುಂಬಿರುತ್ತವೋ, ಇಂಥ ನರಕದಲ್ಲಿ ವ್ಯಸನೀ ಜೀವವು ಹುಟ್ಟಿ, ಆರು ಪರ್ಯಾಪ್ತಗಳನ್ನು ಪ್ರಾಪ್ತಮಾಡಿಕೊಳ್ಳುತ್ತದೆ.

ಉವವಾಯಾವು ಣಿವಡಈ ಪಜ್ಜತ್ತೌ ದಂಡತೀ ಮಹೀವಿಠ್ಠೇ ॥
ಅಇಕಕ್ಕಡಮಸಹಂತೋ ಸಹಸಾ ಉಪಡೀದಿ ಪುಣ ಪಡಈ ॥ ೧೩೭ ॥

ಉಪಪಾದಾನ್ನಿಪತತಿ ಪರ್ಯಾಪ್ತೋ ದಂಡವನ್ಮಹೀಪೃಷ್ಠೇ ॥
ಅತಿಕರ್ಕಶಮಸಹಮಾನ: ಸಹಸೋತ್ಪತತಿ ಪುನಃ ಪತತಿ ॥

ಅರ್ಥ:—ಜೀವಕ್ಕೆ ಆರು ಪರ್ಯಾಪ್ತಿಗಳು ಪ್ರಾಪ್ತವಾದ ಮೇಲೆ ಉತ್ಪತ್ತಿಯ ಸ್ಥಾನದಿಂದ ಒಮ್ಮಿಂದೊಮ್ಮೆ ಭೂಮಿಯ ಮೇಲೆ ಬಡಿಗಿಯಂತೆ ಅಡ್ಡ ಬೀಳುತ್ತದೆ. ಪುನ: ಆ ಭೂಮಿಯ ಕಠಿನತ್ವವು ಸಹನವಾಗದ್ದರಿಂದ ಮೇಲೆ ಹಾರುತ್ತದೆ. ಮತ್ತು ಕೆಳಗೆ ಬೀಳುತ್ತದೆ. ಈ ಪ್ರಕಾರ ಬೀಳುವದು ಏಳುವದು ನಡೆದಿರುತ್ತದೆ. ( ಯಾವ ನರಕದಲ್ಲಿ ಎಷ್ಟು ಎತ್ತರ ಶರೀರವಿರುವದೋ, ಅಷ್ಟು ಎತ್ತರದ ತನಕ ಆ ಜೀವವು ಹಾರಿಬೀಳುತ್ತದೆ. )

ಜಇ ಕೋ ವಿ ಉಸಣಣರಏ ಮೇರುಪಮಾಣಂ ಖಿವೇಇ ಲುಹಪಂಡಂ ॥
ಣ ವಿ ಪಾವಇ ಧರಣಿತಳಂ ವಿಳಯಂ ಜಾತ್ಯಂತರಾಳೇ ವಿ ॥ ೧೩೮ ॥

ಯದಿ ಕೋಪಿ ಉಷ್ಣನರಕೇ ಮೇರುಪ್ರಮಾಣಂ ಕ್ಷಿಪೇತ್ ಲೋಹಪಿಂಡಮ್ ॥
ನಾಪಿ ಪ್ರಾಪ್ನೋತಿ ಧರಣೀತಲಂ ವಿಲಯಂ ಯಾತ್ಯಂತರಾಲೇಪಿ ॥

ಅರ್ಥ:—ಎಷ್ಟೋ ನರಕಗಳಲ್ಲಿಯ ಉಷ್ಣತೆಯ ಮಾನವನ್ನು ನೋಡಿದರೆ, ಅಲ್ಲಿ ಮೇರುಪರ್ವತದಷ್ಟು ಕಬ್ಬಿಣದ ಗೋಲನ್ನು ಚಲ್ಲಿದರೆ ಅದು ಬುಡದ ವರೆಗೆ ಹೋಗದೆ ಮಧ್ಯದಲ್ಲಿ ಕರಗಿ ನೀರಾಗಿ ನಾಶಹೊಂದುತ್ತದೆ. ( ಏಳು ನರಕಗಳಲ್ಲಿ ೧, ೨, ೩, ೪, ೫ ಇವುಗಳೊಳಗೆ $\frac{3}{4}$ ಭಾಗದಲ್ಲಿ ಮೇಲೆ ಹೇಳಿದ ಉಷ್ಣತೆಯು ಇರುತ್ತದೆ. )

ಅಹ ತೇವ ವಟ್ಟ ತತ್ತಂ ಖಿವೇಇ ಜಇ ಕೋ ವಿ ಸೀಯಣರಯಮ್ಮಿ ॥
ಸಹಸಾ ಧರಣಿಮಪತ್ತಂ ಸಡೇಜ್ಜ ತಂ ಖಂಡಖಂಡೇಹಿಂ ॥ ೧೩೯ ॥

ಅಥ ತದೇವ ವೃತ್ತಂ ತಪ್ತಂ ಕ್ಷೇಪಯತಿ ಯದಿ ಕೋಪಿ ಶೀತನರಕೇ ॥
ಸಹಸಾ ಧರಣೀಮಪ್ರಾಪ್ತಂ ಗಲತಿ ತತ್ಖಂಡಖಂಡೈಃ ॥

ಅರ್ಥಃ—ಮೇರುಪರ್ವತದಷ್ಟು ದೊಡ್ಡದಾದ ಕಬ್ಬಿಣದ ಗೋಲನ್ನು ಶೀತ ನರಕದಲ್ಲಿ ಚಲ್ಲಿದರೆ ಅದು ಬುಡದ ವರೆಗೆ ಮುಟ್ಟದೆ ಚಳಿಯಿಂದ ಪುಡಿಪುಡಿಯಾಗಿ ನಾಶಹೊಂದುತ್ತದೆ.

ತಂ ತಾರಿಸಸೀದುಣ್ಹಂ ಖೇತ್ತಸಹಾವೇಣ ಹೋಇ ಣರಏಸು ॥
ವಿಸಹಇ ಜಾವಜ್ಜೀವಂ ವಿಸಣಸ್ಸ ಫಳೇಣ ಸೋ ಜೀವೋ ॥ ೧೪೦ ॥

ತತ್ತಾದೃಶಶೀತೋಷ್ಣಂ ಕ್ಷೇತ್ರಸ್ವಭಾವೇನ ಭವತಿ ನರಕೇಷು ॥
ವಿಸಹತೇ ಯಾವಜ್ಜೀವಂ ವ್ಯಸನಸ್ಯ ಫಲೇನ ಸ ಜೀವಃ ॥

ಅರ್ಥ:—ನರಕದಲ್ಲಿ ಉಷ್ಣತೆಯೂ ಶೀತವೂ ಆಯಾಸ್ಥಾನದಲ್ಲಿ ಸ್ವಾಭಾವಿಕವಾಗಿರುತ್ತವೆ. ಇಂಥ ಶೀತೋಷ್ಣತೆಯನ್ನು ಜೀವವು ವ್ಯಸನದ ಫಲದಿಂದ ತನ್ನ ಆಯುಷ್ಯವಿರುವ ವರೆಗೂ ತಡಕೊಳ್ಳಬೇಕಾಗುತ್ತದೆ.

ತೋ ತಮ್ಹಿ ಜಾಯಮತ್ತೇ ಸಹಸಾ ದಠ್ಠೂಣ ಣಾರಯಾ ಸವ್ವೇ ॥
ಪಹರಂತಿ ಸತ್ತಿಮುಗ್ಗರತಿಸೂಳಣಾರಾಯಖಗ್ಗೇಹಿಂ ॥ ೧೪೧ ॥

ತರ್ಹಿ ತಸ್ಮಿಂಜಾತಮಾತ್ರೇ ಸಹಸಾ ದೃಷ್ಟ್ವಾ ನಾರಕಾಃ ಸರ್ವೇ ॥
ಪ್ರಹರಂತಿ ಶಕ್ತಿಮುದ್ಗರತ್ರಿಶೂಲನಾರಾಚಖಡ್ಗೈಃ ॥

ಅರ್ಥ:—ಪಾಪಿಯಾದ ಜೀವವು ನರಕದಲ್ಲಿ ಹುಟ್ಟಿದ ಕೂಡಲೆ ಅಲ್ಲಿಯು ಮೊದಲಿದ್ದ ಯಾವತ್ತು ನಾರಕರು ಅವನನ್ನು ಕಂಡಕೂಡಲೆ ಶಕ್ತಿ, ಗದ, ತ್ರಿಶೂಲ, ಬಾಣ, ಖಡ್ಗ ಮುಂತಾದವುಗಳಿಂದ ಹೊಡಿಯಲಿಕ್ಕೆ ಹತ್ತುತ್ತಾರೆ.

ತೋ ಖಂಡಿಯಸವ್ವಂಗೋ ಕರುಣ ಪಲಾವೇ ರುವೇಇ ದೀಣಮುಹೋ ॥
ಪಭಣಂತಿ ತದೋ ರುಠ್ಠಾ ಕಿಂ ಕಂದಸಿ ರೇ ದುರಾಯಾರಾ ॥ ೧೪೨ ॥

ತತಃ ಖಂಡಿತಸರ್ವಾಂಗಃ ಕರುಣಃ ಪಲಾಯತಿ ರೋದಿತಿ ದೀನಮುಖಃ ॥
ಪ್ರಭಣಂತಿ ತತೋ ರುಷ್ಟಾಃ ಕಿಂ ಕ್ರಂದಸಿ ರೇ ದುರಾಚಾರ ॥

ಅರ್ಥ:—ನಾರಕ ಜನರ ಹೊಡತದಿಂದ ಸರ್ವಾಂಗವು ಚೂರ ಚೂರಾಗುತ್ತದೆ. ಅದನ್ನು ಸಹಿಸಲಾರದೆ ದೀನವಾದ ಜೀವವು ಅಳುತ್ತ ಓಡಲಿಕ್ಕೆ ಹತುತ್ತದೆ. ಇದನ್ನು ನೋಡಿ ನಾರಕೀ ಜೀವಗಳು ಎಲೈ ದುಷ್ಟನೇ, ಅತಿ ನೀಚಕೃತ್ಯಗಳನ್ನು ಮಾಡಿ ಈಗ್ಗೆ ಯಾಕೆ ಶೋಕ ಮಾಡುತ್ತೀ? ಎಂದು ಅನ್ನುತ್ತವೆ.

ಜೋವಣಮಏಣ ಮತ್ತೋ ಲೋಹಕಸಾಯೇಣ ರಂಜಿಓ ಪುವ್ವಂ ॥
ಗುರುವಯಣಂ ಲಂಘಿತ್ತಾ ಜೂಯಂ ರಮಿಓ ಸಿ ಜಮ್ಮಮ್ಮಿ ॥ ೧೪೩ ॥

ಯೌವನಮದೇನ ಮತ್ತೋ ಲೋಭಕಷಾಯೇಣ ರಂಜಿತಃ ಪೂರ್ವಮ್ ॥
ಗುರುವಚನಂ ಲಂಘಯಿತ್ವಾ ದ್ಯೂತಂ ರಮಿತೋಸಿ ಜನ್ಮನಿ ॥

ಅರ್ಥ:—ಎಲೈ ಪಾಪಿಯೇ, ನೀನು ಪೂರ್ವಜನ್ಮದಲ್ಲಿ ತಾರುಣ್ಯಮದದಿಂದ ಮತ್ತನಾಗಿ, ಲೋಭ ಕಷಾಯದಿಂದ ಗುರುಗಳ ಉಪದೇಶವನ್ನು ಕೇಳದೆ, ಜೂಜಿನಲ್ಲಿ ಹೊತ್ತು ಕಳೆದಿರುತ್ತೀ, ಆದ್ದರಿಂದ ನಿನಗೆ ಈ ವಿಧವಾದ ದುಃಖಗಳಾಗುತ್ತವೆ.

ತಸ್ಸ ಫಲಮುದಯಮಾಗಯಮಲಂ ಹಿ ರುಯಣೇಣ ವಿಸಹೆ ರೇ ದುಠ್ಠ ॥
ರೋವಂತೋ ವಿ ಣ ಛುಟ್ಟಸಿ ಕಯಾ ವಿ ಪುವ್ವಕಯಕಮ್ಮಸ್ಸ ॥ ೧೪೪ ॥

ತಸ್ಯ ಫಲಮುದಯಮಾಗತಮಲಂ ಹಿ ರುದನೇನ ವಿಸಹ ರೇ ದುಷ್ಟ ॥
ರುದನ್ನಪಿ ನ ಛೂಟಸಿ ಕದಾಪಿ ಪೂರ್ವಕೃತಕರ್ಮಣಃ ॥

ಅರ್ಥ:—ಇನ್ನು ಮೇಲೆ ಶೋಕ ಮಾಡಿದರೇನು ಫಲವು? ಬಂದದ್ದನ್ನು ಸುಮ್ಮನೆ ತಾಳು; ಪೂರ್ವದಲ್ಲಿ ಮಾಡಿದ ಕರ್ಮಗಳ ಫಲವನ್ನು ಭೋಗಿಸದೆ ನಿನಗೆ ಎಂದೂ ಬಿಡುಗಡೆಯಾಗುವದಿಲ್ಲ.

ಏವಂ ಸೋಊಣ ತಓ ಮಾಣಸದುಖ್ಖಂ ವಿಸೇಸಮುಪ್ಪಣ್ಣಂ ॥
ತೋ ದುವಿಹದುಖ್ಖದಗ್ಧೋ ರೋಸಾಇಠ್ಠೋ ಇಮಂ ಭಣಈ ॥ ೧೪೫ ॥

ಏವಂ ಶ್ರುತ್ವಾ ತತೋ ಮಾನಸದುಃಖಂ ವಿಶೇಷಮುತ್ಪನ್ನಮ್ ॥
ತತೋ ದ್ವಿವಿಧದುಃಖದಗ್ಧೋ ರೋಷಾವಿಷ್ಟ ಇದಂ ಭಣತಿ ॥

ಅರ್ಥ:— ನಾರಕಜನರ ಬಿರಿನುಡಿಗಳನ್ನು ಕೇಳಿ ಆ ಹೊಸ ಜೀವಿಗೆ ಮತ್ತಿಷ್ಟು ಹೆಚ್ಚು ದುಃಖವಾಗುತ್ತದೆ. ಈ ವಿಧವಾಗಿ ಮಾನಸಿಕ, ಶಾರೀರಿಕ ದುಃಖದಿಂದ ಸಂತಪ್ತನಾಗಿ ಆ ನೂತನ ನಾರಕಿಯು ಸಿಟ್ಟಿನಿಂದ ಮೊದಲಿದ್ದ ನಾರಕೀ ಜನರಿಗೆ ಅನ್ನುವದೇನಂದರೆ--

ಜಇ ವಾ ಪುವ್ವಮ್ಮಿ ಭವೇ ಜೂಯಂ ರಮಿಯಂ ಮಏ ಮದವಸೇನ ॥
ತುಮ್ಹಂ ಕೋ ಅವರಾಹೋ ಕೋಹವಲಾ ಜೇಣ ಹಂ ಹಣಈ ॥ ೧೪೬ ॥

ಯದಿ ವಾ ಪೂರ್ವಸ್ಮಿನ್ಭವೇ ದ್ಯೂತಂ ರಮಿತಂ ಮಯಾ ಮದವಶೇನ ॥
ತವ ಕೋಽಪರಾಧಃ ಕ್ರೋಧಬಲಾದ್ಯೇನಾಹಂ ಹನ್ಯೇ ॥

ಅರ್ಥಃ—ಎಲೈ ನಾರಕೀ ಜನರೇ, ನಾನು ಪೂರ್ವಜನ್ಮದಲ್ಲಿ ಮದೋನ್ಮತ್ತನಾಗಿ ಜೂಜನ್ನು ಆಡಿರಬಹುದು. ನಿಮ್ಮ ಅಪರಾಧವನ್ನು ನಾನೇನು ಮಾಡಿದೇನು? ಸುಮ್ಮನೆ ಯಾಕೆ ಸಿಟ್ಟಿನಿಂದ ಹೊಡಿಯುತ್ತೀರಿ?

ಏವಂ ಭಣಿಏ ಘಿತ್ತೂಣಂ ಮುಧಾ ರುಠ್ಠೇಹಿ ಅಗ್ಗಿಕುಂಡಮ್ಮಿ ॥
ಪಜ್ಜಾಲಯಮ್ಮಿ ಣಿಹಿತೋ ಅಭ್ಭಂಗಉ ಅಂಗೇಸು ॥ ೧೪೭ ॥

ಏವಂ ಭಣಿತೇ ಗೃಹೀತ್ವಾ ಮುಧಾ ರೋಷ್ಟೈರಗ್ನಿಕುಂಡೇ ॥
ಪ್ರಜ್ವಾಲಿತೇ ನಿಹಿತೋಽಭ್ಯಂಗತೋಽಂಗಮಂಗೇಷು ॥

ಅರ್ಥ:—ಹೀಗೆ ಅವನು ಮಾತಾಡಿದ ಕೂಡಲೆ ಆ ನಾರಕೀ ಜನರು ಪುನಃ ಸಿಟ್ಟಿಗೆದ್ದು ಅವನನ್ನು ಪ್ರದೀಪ್ತವಾದ ಬೆಂಕಿಯ ಕಿಚ್ಚಿನಲ್ಲಿ ಒಗಿಯುತ್ತಾರೆ. ಅದರ ತಾಪದಿಂದ ಅವನ ಸರ್ವಾಂಗವು ಸುಡುತ್ತದೆ.

ತತ್ತೋ ಣಿಸ್ಸರಮಾಣಂ ದಟ್ಠೂಣ ತಾಸಹೀ ಅಣ್ಣಕುಂತೇಹಿಂ ॥
ಪಿಲ್ಲೇಊಣ ರಡಂತಂ ತತ್ಥೇವ ಛುಹಂತಿ ಅದಯಾ ವಿ ॥ ೧೪೮ ॥

ತತೋ ನಿಸ್ಸರಮಾಣಂ ದೃಷ್ಟ್ವಾ ತ್ರಾಸ್ಯೈರನ್ಯಕುಂತೈ: ॥
ಪ್ರಹೃತ್ಯ (?) ರಟಂತಂ ತತ್ರೈವ ಕ್ಷಿಪಂತಿ ನಿರ್ದಯಾಸ್ತೇ ॥

ಅರ್ಥ:—ಆ ಜಳವನ್ನು ತಾಳಲಾರದೆ ಅಗ್ನಿಕುಂಡದಿಂದ ಅವನು ಅಳುತ್ತ ಹೊರೆ ಬೀಳಲಿಕ್ಕೆ ಪ್ರಯತ್ನ ಮಾಡಲು ನಿರ್ದಯರಾದ ನಾರಕರು ತಮ್ಮ ಸಿಟ್ಟಿನ ಆವೇಶದಿಂದ ಅವನನ್ನು ಬರಚಿ, ಕೊಡ್ಲೆ ಮುಂತಾದ ಆಯುಧಗಳಿಂದ ಹೊಡೆದು ಮತ್ತೂ ಅದೇ ಕಿಚ್ಚಿನಲ್ಲಿ ಚೆಲ್ಲುತ್ತಾರೆ.

ಹಾ ಮುಯಹ ಮಮ ಪರಿಹರ ಪುಣೋ ವಿ ಣ ಕರೇಮಿ ಏರಿಸಂ ಪಾವಂ ॥
ದಂತೇಹಿಂ ಅಂಗುಲಿಓ ಧರೇಇ ಕರುಣಂ ಪುಣೋ ಪುಣೋ ರುವಈ ॥೧೪೯॥

ಹಾ ಮುಂಚಥ ಮಾಂ ಪರಿಹರಥ ಪುನರಪಿ ನ ಕರೋಮೀದೃಶಂ ಪಾಪಮ್ ॥
ದಂತೈರಂಗುಲ್ಯೋ ಧರತಿ ಕರುಣಂ ಪುನ: ಪುನಾ ರೋದಿತಿ ॥

ಅರ್ಥಃ—ಅಯ್ಯೋ, ನಾನು ಸಾಯುತ್ತೇನೆ. ಯಾರಾದರೂ ನನ್ನನ್ನು ಬಿಡಿಸಿರಿ! ನಾನು ಎಂದೂ ಇಂಥ ಪಾಪವನ್ನು ಮಾಡುವದಿಲ್ಲ. ಎಂದು ಹಲ್ಲಿನಿಂದ ಬೆರಳುಗಳನ್ನು ಕಚ್ಚುತ್ತ ದೊಡ್ಡ ಧ್ವನಿಯಿಂದ ಅಳುತ್ತ ಅನ್ನುತ್ತಾನೆ.

ಣ ಮುಯಂತಿ ತಹ ವಿ ಪಾವಾ ಪೇಚ್ಛಇ ಲೀಲವಿ ಕುಣಇ ಜಂ ಜೂವಂ ॥
ತಂ ಪಾವಂ ವಿಲವಂತೋ ಏಯಹದುಖ್ಖೇಹಿಂ ಣಿತ್ಥರೋ ಹಂ ಹೋ ॥ ೧೫೦॥

ನ ಮುಂಚಂತಿ ತಥಾಪಿ ಪಾಪಾಃ ಪ್ರೇಕ್ಷಸ್ವ ಲೀಲಯಾ ಕರೋತಿ ಯತ್ ದ್ಯೂತಂ ॥
ತತ್ಪಾಪಂ ವಿಲಯಂ ಯಾವತ್ ಏತೈರ್ದುಃಖೈರ್ನಿಸ್ತರೋ ಹಂ ಹೋ (?) ॥

ಅರ್ಥ:—ನೋಡು, ವಿನೋದಕ್ಕೋಸ್ಕರ ಆಡಿದ ಜೂಜಾಟದ ಪಾಪದ ಫಲವು ಯಾವವರೆಗೆ ಅನುಭವಿಸಿ ಮುಗಿಯುವದಿಲ್ಲವೋ, ಆ ವರೆಗೆ ಆ ಕ್ರೂರರಾದ ನಾರಕರು ಹ್ಯಾಗಾದರೂ ಅವನನ್ನು ಬಿಡುವದಿಲ್ಲ.

ತತ್ತೋ ಪಲಾಯಊಣ ಕಹ ವಿ ಪಮಾಏಣ ದದ್ಧಸವ್ವಂಗೋ ॥
ಗಿರಿಕಂಧಮ್ಮಿ ಸಹಸಾ ಪವಿಸಇ ಸರಣತ್ತಿ ಮಣ್ಣಂತೋ ॥ ೧೫೧ ॥

ತತಃ ಪಲಾಯ್ಯ ಕಥಮಪಿ ಪ್ರಮಾದೇನ ದಗ್ಧಸರ್ವಾಂಗ: ॥
ಗಿರಿಕಂದರೇ ಸಹಸಾ ಪ್ರವಿಶತಿ ಶರಣಮಿತಿ ಮನ್ಯಮಾನಃ ॥

ಅರ್ಥ:–ಎಲ್ಲ ದೇಹವನ್ನು ಸುಟ್ಟುಕೊಂಡು ದೀನನಾದ ವ್ಯಸನೀಪುರುಷನು ಅಗ್ನಿಕುಂಡದಿಂದ ಹ್ಯಾಗಾದರೂ ಹೊರಬಿದ್ದು ಗುಡ್ಡದ ಹೊದರಿನಲ್ಲಿ ಪ್ರವೇಶಮಾಡುತ್ತಾನೆ.

ತತ್ಥ ವಿ ಪಡಂತಿ ಉವರಿಂ ಸಿಲಾಉ ತತೋ ಹಿ ಚುಣ್ಣಿಓ ಸಂತೋ ॥
ಗಳಮಾಣರುಹಿರಧಾರೋ ರಹಿಊಣ ಖಣಂ ತತೋ ಣಿಯಾಈ ॥ ೧೫೨ ॥

ತತ್ರಾಪಿ ಪತಂತ್ಯುಪರಿ ಶಿಲಾಸ್ತತೋ ಹಿ ಚೂರ್ಣಿತಃ ಸನ್ ॥
ಗಲಮಾನರುಧಿರಧಾರಃ ಸ್ಥಿತ್ವಾ ಕ್ಷಣಂ ತತೋ ನಿರ್ಯಾತಿ ॥

ಅರ್ಥ:—ಆ ಗುಡ್ಡದಲ್ಲಾದರೂ ಮೇಲಿಂದ ಕಲ್ಲುಗಳು ಬಿದ್ದು ತಲೆ ಒಡೆದು ರಕ್ತದ ಧಾರೆಯು ನಡೆಯುತ್ತದೆ. ಆದದರಿಂದ ಅಲ್ಲಿ ಒಂದು ಕ್ಷಣವಾದರೂ ನಿಲ್ಲದೆ ಹೊರಬೀಳುತ್ತಾನೆ.

ಣೇರಇಯಾಣ ಸರೀರಂ ಕೀರಇ ಜಇ ತಿಳಪಮಾಣಖಂಡಾಇ ॥
ಪಾರದರಸವಲ್ಲಗಈ ಅಪುಣ್ಣಕಾಳಮ್ಮಿ ಣ ಮರೇಈ ॥ ೧೫೩ ॥

ನಾರಕಾಣಾಂ ಶರೀರಂ ಕ್ರಿಯತೇ ಯದಿ ತಿಲಪ್ರಮಾಣಖಂಡಾನಿ ॥
ಪಾರದರಸವನ್ಮಿಲತಿ ಅಪೂರ್ಣಕಾಲೇ ನ ಮ್ರಿಯತೇ ॥

ಅರ್ಥ:—ನಾರಕೀ ಜೀವಗಳ ಶರೀರವನ್ನು ಕಡಿದು ಎಳ್ಳಷ್ಟು ಚೂರ ಚೂರ ಮಾಡಿದರೂ ಅದು ಪಾರಜದ ರಸದಂತೆ ಪುನಃ ಒಂದಾಗುತ್ತದೆ. ಅಪೂರ್ಣ ಕಾಲ ದಲ್ಲಿ ಅಂದರೆ ಆಯುಷ್ಯ ತೀರಿದ ಹೊರ್ತು ಎಂದೂ ಸಾಯುವದಿಲ್ಲ.

ತತ್ತೋ ಪಳಾಯಮಾಣೋ ರುಂಧಇ ಸೋ ಣಾರಏಹಿ ದಠ್ಠೂಣ ॥
ಪಾವಿಜ್ಜಇ ವಿಳವಂತೋ ಅಯಸಂ ವಯ ಕಳಯಳಂ ತತ್ತಂ ॥ ೧೫೪

ತತಃ ಪಲಾಯಮಾನೋ ರುಧ್ಯತೇ ಸ ನಾರಕೈರ್ದೃಷ್ಟ್ವಾ ॥
ಪಾಯ್ಯತೇ ವಿಲಪನ್ನಾಯಸಂ ವೈ ರಸಂ ತಪ್ತಮ್ ॥

ಅರ್ಥ:—ವಿಲಾಪ ಮಾಡುತ್ತ ಓಡಿಹೋಗುವ ನಾರಕೀ ಜೀವವನ್ನು ಕಂಡು ಬೇರೆ ನಾರಕೀಯರು ಜುಲುಮೆಯಿಂದ ಅವನಿಗೆ ತಪ್ತವಾದ ಉಕ್ಕಿನ ರಸವನ್ನು ಕುಡಿಸುತ್ತಾರೆ.

ಪಚ್ಛಾವಿಜ್ಜಇ ಜಂತೋ ಪೀಯಂ ಮಜ್ಜ ಮಹುಂ ಚ ಪುವ್ವಭವೇ ॥
ತಂ ಪಾವಫಳಂ ಪತ್ತಂ ಪಿವೇಹಿ ಅಯಕಳಯಳಂ ಘೋರಂ ॥ ೧೫೫ ॥

ಸ್ಮಾರಯಂತಿ ಜಂತೋಃ ಪೀತಂ ಮದ್ಯಂ ಮಧು ಚ ಪೂರ್ವಭವೇ ॥
ತತ್ಪಾಪಫಲಂ ಪ್ರಾಪ್ತಂ ಪಿಬಾಯೋರಸಂ ಘೋರಮ್ ॥

ಅರ್ಥಃ—ಪೂರ್ವಜನ್ಮದಲ್ಲಿ ಮಧು ಮತ್ತು ಮದ್ಯವನ್ನು ಸೇವಿಸಿದ ನೆನಪು ಕೊಟ್ಟು, ಆ ಪಾಪದ ಫಲವು ನಿನಗೆ ಪ್ರಾಪ್ತವಾದ್ದರಿಂದ ಈ ಉಕ್ಕಿನ ರಸವನ್ನು ಕುಡಿ ಎಂದೆನ್ನುವರು.

ಕಹ ವಿ ತೇಓ ಜಇ ಛುಟ್ಟೋ ಅಸಿಪತ್ತವಣ್ಣಮ್ಮಿ ಪವಿಸಈ ಭಯಭೀಓ ॥
ಣಿಪಡಂತಿ ತತ್ಥ ಪತ್ತಾಇಂ ಖಗ್ಗಸರಿಸಾಇ ಅಣವರಯಂ ॥ ೧೫೬ ॥

ಕಥಮಪಿ ತತೋ ಯದಿ ಮುಕ್ತೋಽಸಿಪತ್ರವನೇ ಪ್ರವಿಶತಿ ಭಯಭೀತೋ ॥
ನಿಪತಂತಿ ತತ್ರಾಪಿ ಖಡ್ಗಸದೃಶಾನ್ಯನವರತಮ್ ॥

ಅರ್ಥ:—ಬಹು ಪ್ರಯಾಸದಿಂದ ಅಲ್ಲಿಂದ ಬಿಡುಗಡೆ ಹೊಂದಿ ಹೊರಬಿದ್ದ ನಾರಕಿಯು ಭಯಭೀತನಾಗಿ ಅಸಿಪತ್ರವೆಂಬ ವನದಲ್ಲಿ (ನೆರಳಿನ ಸಲುವಾಗಿ) ಹೋಗುತ್ತಾನೆ. ಆ ಸ್ಥಲದಲ್ಲಿ ಸಹ ಕತ್ತಿಯ ಧಾರೆಯಂತಿರುವ ಅಸಿಪತ್ರದ ಎಲೆಗಳು ಒಂದೇಸವನೆ ಅವನ ಮೈಮೇಲೆ ಬೀಳುತ್ತವೆ.

ತೌ ತಮ್ಮಿ ಪತ್ತಪಡಣೇಣ ಛಿಣ್ಣಕರಚರಣ ಭಿಣ್ಣಪುಟ್ಠಿಸಿರೋ ॥
ಪಗಳಂತರುಹಿರಧಾರೋ ಕಂದಂತೋ ಸೋ ತೇಓ ಣಿಯಈ ॥ ೧೫೭ ॥

ತದಾ ತತ್ರ ಪತ್ರಪತನೇನ ಛಿನ್ನಕರಚರಣೋ ಭಿನ್ನಪೃಷ್ಠಶಿರಾ: ॥
ಪ್ರಗಲದ್ರುಧಿರಧಾರ: ಕ್ರಂದನ್ಸ ತತೋ ನಿರ್ಯಾತಿ ॥

ಅರ್ಥ:—ಆ ಹದನಾದ ಎಲೆಗಳಿಂದ ಅವನ ಕೈಕಾಲುಗಳು ಭಿನ್ನಭಿನ್ನವಾಗಿ, ಬೆನ್ನಿನ ಹುರಿಯು ಬಿಚ್ಚಿ, ಶಿರಗಳು ಹರಿದು, ಸರ್ವಾಂಗದಿಂದ ರಕ್ತದ ಪ್ರವಾಹವು ಹರಿಯು ಹತ್ತುತ್ತದೆ. ಆ ವೇದನೆಯನ್ನು ತಾಳಲಾರದೆ ಆ ನಾರಕಿಯು ಆ ಸ್ಥಳವನ್ನಾದರೂ ಬಿಡುತ್ತಾನೆ.

ತುರಿಯಂ ಪಳಾಯಮಾಣಂ ಸಹಸಾ ಧರಿಊಣ ಣಾರಯಾ ಕೂರಾ ॥
ಛಿತ್ತೂಣ ತಸ್ಸ ಮಂಸಂ ತುಂಡಮ್ಮಿ ಛುಹಂತಿ ತಸ್ಸೇವ ॥ ೧೫೮ ॥

ತ್ವರಿತಂ ಪಲಾಯಮಾನಂ ಸಹಸಾ ಧೃತ್ವಾ ನಾರಕಾಃ ಕ್ರೂರಾಃ ॥
ಛಿತ್ವಾ ತಸ್ಯ ಮಾಂಸಂ ತುಂಡೇ ಕ್ಷಿಪಂತಿ ತಸ್ಯೈವ: ॥

ಅರ್ಥ:—ತನ್ನನ್ನು ಯಾರಾದರೂ ನೋಡುವರೆಂಬ ಅಂಜಿಕೆಯಿಂದ ಆ ನಾರಕಿಯು ಅತಿ ವೇಗದಿಂದ ಓಡುವಾಗ ಅವನನ್ನು ಹಿಡಿದು, ದೇಹವನ್ನು ಕಡಿದು, ಹೊರಬಿದ್ದ ಮಾಂಸವನ್ನು ಅವನ ಮುಖದಲ್ಲಿಯೇ ಹಾಕುತ್ತಾರೆ.

ಭೋತ್ತುಂ ಅಣಿಚ್ಛಮಾಣಂ ಣಿಯಮಂಸಂ ತೋ ಭಣಂತಿ ರೇ ದುಟ್ಠಾ ॥
ಅಇಮಿಟ್ಠಂ ಭಣಿಊಣ ಭಕ್ಖಂತೋ ಆಸಿ ಜಂ ಪುವ್ವಂ ॥ ೧೫೯ ॥

ಭೋಕ್ತುಮನಿಚ್ಛಮಾನಂ ನಿಜಮಾಂಸಂ ತದಾ ಭಣಂತಿ ರೇ ದುಷ್ಟ ॥
ಅತಿಮಿಷ್ಟಂ ಭಣಿತ್ವಾ ಭಕ್ಷಯನ್ನಾಸೀರ್ಯತ್ಪೂರ್ವಮ್ ॥

ಅರ್ಥ:—ಅವನು ತನ್ನ ಮಾಂಸವನ್ನು ತಿನ್ನದೇ ಹೋದರೆ, ಅಲ್ಲಿರುವ ಜನರು:— 'ಎಲೈ ದುಷ್ಟನೇ' ನೀನು ಪೂರ್ವಜನ್ಮದಲ್ಲಿ ಜೀವ ಹಿಂಸೆಯನ್ನು ಮಾಡಿ ಮಾಂಸ

ವನ್ನು ಭಕ್ಷಿಸುವಾಗ ಅದು ಎಷ್ಟು ರುಚಿಕರವಾಗಿ ಇರುತ್ತದೆಂದು ಅನ್ನುತ್ತಿದ್ದಿ? ಎಂದು ಅನ್ನುವರು.

ತ ಕ್ಕಿಂ ತೇ ವಿಸ್ಸರಿಯಂ ಜೇಣ ಮುಹಂ ಕುಣಸಿ ರೇ ಪರಾಹೂತಂ ॥
ಏವಂ ಭಣಿಊಣ ಕುಸಿಂ ಛುಹತಿಂ ತುಂಡಮ್ಮಿ ಪಜ್ಜಾಳಿಯಂ ॥ ೧೬೦ ॥

ತಕ್ತಿಂ ತ್ವಯಾ ವಿಸ್ಮೃತಂ ಯೇನ ಮುಖಂ ಕರೋಷಿ ರೇ ಪರಾವೃತ್ತಂ ॥
ಏವಂ ಭಣಿತ್ವಾ ಕುಶೀಂ ಕ್ಷಿಪಂತಿ ತುಂಡೇ ಪ್ರಜ್ವಲಿತಾವ್ ॥

ಅರ್ಥ:—ಪೂರ್ವದಲ್ಲಿ ಮಾಡಿದ ಸಂಗತಿಯು ನೆನಪಿನಲ್ಲಿ ಇಲ್ಲವೋ? ಈಗ್ಗೆ ಯಾಕೆ ಮೋರೆ ತಿರುವುತ್ತೀ ಎಂದು ಕಠೋರ ಭಾಷಣವನ್ನು ಮಾಡಿ ಅವನ ಮುಖದಲ್ಲಿ ಕಾದಂಥ ಕಬ್ಬಿಣದ ಕುಳವನ್ನು ತುರುಕುತ್ತಾರೆ.

ಅಇ ತಿವ್ವದಾಹಸಂತಾವಿಓತಿ ಸೋ ವೇಯಣಾಸಮುಭಿಭೀಓ ॥
ಕಿಮಿಪೂಇರುಹಿರಪುಣ್ಣಾಂ ವಇತರಣೀ ಣಈ ತಓ ವಿಸಈ ॥ ೧೬೧ ॥

ಅತಿತೀವ್ರದಾಹಸಂತಾಪಿತ: ಸ ವೇದನಾಸಮಭಿಭೂತಃ ॥
ಕೃಮಿಪೂತಿರುಧಿರಪೂರ್ಣಾಂ ವೈತರಣೀಂ ನದೀಂ ತತೋ ವಿಶತಿ ॥

ಅರ್ಥಃ—ಆ ತಪ್ತವಾದ ಲೋಹದ ದು:ಖವನ್ನು ಸಹಿಸಲಾರದೆ ವ್ಯಾಕುಲನಾಗಿ, ವೈತರಣೀ ನದಿಯಲ್ಲಿ ಪ್ರವೇಶ ಮಾಡುತ್ತಾನೆ. ಆ ನದಿಯು ಅನೇಕ ವಿಧವಾದ ಹುಳಗಳಿಂದಲೂ, ಕೀವು, ಮುಂತಾದ ಕೆಟ್ಟ ಪದಾರ್ಥಗಳಿಂದಲೂ ತುಂಬಿರುತ್ತದೆ.

ತತ್ಥ ವಿ ಪವಿಠ್ಠಮಿತ್ತೋ ಖಾರುಣ್ಹಜಳೇಣ ದಠ್ಠಸವ್ವಂಗೋ ॥
ಣಿಸ್ಸರಇ ತಓ ತುರಿಓ ಹಾಹಾಕಾರಂ ಪಕುವಂತೋ ॥ ೧೬೨ ॥

ತತ್ರಾಪಿ ಪ್ರವಿಷ್ಟಮಾತ್ರಃ ಕ್ಷಾರೋಷ್ಣಜಲೇನ ದಷ್ಟಸರ್ವಾಂಗಃ ॥
ನಿಸ್ಸರತಿ ತತಸ್ತ್ವರಿತಂ ಹಾಹಾಕಾರಂ ಪ್ರಕುರ್ವನ್ ॥

ಅರ್ಥ:—ಆ ನದಿಯಲ್ಲಿ ಸೇರಿದ ಕೂಡಲೇ ಕಾದಂಥ ಕ್ಷಾರವಾದ ನೀರು ಸರ್ವಾಂಗಕ್ಕೆ ಲೇಪವಾಗಲು ದುಸ್ಸಹವಾದ ವೇದನೆಯುಂಟಾದ್ದರಿಂದ, ಅಯ್ಯೋ ಅಯ್ಯೋ, ಎಂದು ಚೀರುತ್ತ ಒದರುತ್ತ ಅಲ್ಲಿಂದ ಹೊರಬೀಳುತ್ತಾನೆ.

ದಠ್ಠೂಣ ಣಾರಯಾ ಪೀಲಮುಂಡವೇ ತತ್ತಳೋಹಪಡಿಮಾಓ ॥
ಆಳಿಂಗಾವಿಂತಿ ತಹಿಂ ಧರಿಊಣ ಬಳಾ ವಿಲವಮಾಣಂ ॥ ೧೬೩ ॥

ದೃಷ್ಟ್ವಾ ನಾರಕಾ ನಿವೇಶಯಂತಿ ತಪ್ತಲೋಹಪ್ರತಿಮಾ: ॥
ಆಲಿಂಗಯಂತಿ ತಾಭಿರ್ಧೃತ್ವಾ ಬಲಾದ್ವಿಲಪಮಾನಮ್ ॥

ಅರ್ಥ:—ಈ ವಿಧವಾದ ಓಡುವ ಆ ಜೀವವನ್ನು ಕಂಡು ಪೂರ್ವದ ವಾರೆಕರು ಅವನನ್ನು ಹಿಡಿದು ಬಲಾತ್ಕಾರದಿಂದ ತಪ್ತವಾದ ಕಬ್ಬಿಣದ ಗೊಂಬೆಯ ಆಲಿಂಗನವನ್ನು ಮಾಡಿಸುತ್ತಾರೆ.

ಅಗಣಿತ್ತಾ ಗುರುಬಯಣಂ ಪರಾತ್ಥಿವೇಸಂ ಚ ಆಸಿ ಸೇವಂತೋ ॥
ಏಇಹ ತೇ ಪಾವಫಲಂ ಣ ಸಹಸಿ ಕಿಂ ರುವಸಿ ತಂ ಜೇಣ ॥ ೧೬೪ ॥

ಅಗಣಿತ್ವಾ ಗುರುವಚನಂ ಪರಸ್ತ್ರಿಯಂ ವೇಶ್ಯಾಂ ಚಾಸೀಃ ಸೇವಮಾನಃ ॥
ಇದಂ ತ್ವಂ ಪಾಪಫಲಂ ನ ಸಹಸೇ ಕಿಂ ರೋದಿಷಿ ಯದ್ಯೇನ ॥

ಅರ್ಥಃ—ಎಲೈ ಪಾಪಿಯೇ, ನೀನು ಪೂರ್ವಜನ್ಮದಲ್ಲಿ ಗುರುಗಳ ಉಪದೇಶವನ್ನು ಕೇಳದೆ, ಪರಸ್ತ್ರೀಯರ ಮತ್ತು ಸೂಳೆಯರ ಸಹವಾಸವನ್ನು ಮಾಡಿರುತ್ತೀ, ಅದರ ಫಲವಿದು. ಸುಮ್ಮನೇ ಇದನ್ನು ಸಹಿಸದೆ ಯಾಕೆ ಅಳುತ್ತೀ? ಎಂದು ಪುನಃ ತಪ್ತವಾದ ಕಬ್ಬಿಣದ ಗೊಂಬೆಯು ಆಲಿಂಗನವನ್ನು ಮಾಡಿಸುತ್ತಾರೆ.

ಪುವ್ವಭವೇ ಜಂ ಕಮ್ಮಂ ಪಂಚೇಂದಿಯವಸಗಏಣ ಜೀವೇಣ ॥
ಹಸಮಾಣೇಣ ಣಿವದ್ಧಂ ತೋ ಕಿಂ ಣಿತ್ಥರಸಿ ರೋವಂತೋ ॥ ೧೬೫ ॥

ಪೂರ್ವಭವೇ ಯತ್ಕರ್ಮ ಪಂಚೇಂದ್ರಿಯವಶಗತೇನ ಜೀವೇನ ॥
ಹಸಮಾನೇನ ನಿಬದ್ಧಂ ತತ್ಕಿಂ ನಿಸ್ತರಸಿ ರುದನ್ ॥

ಅರ್ಥ:—ಪೂರ್ವಜನ್ಮದಲ್ಲಿ ಪಂಚೇಂದ್ರಿಯಗಳ ಸ್ವಾಧೀನನಾಗಿ ನಗುತ್ತ ನಗುತ್ತ ಮಾಡಿದ ಕರ್ಮಗಳ ಫಲವನ್ನು ಈಗ ಯಾಕೆ ಅಳುತ್ತ ಅಳುತ್ತ ಭೋಗಿಸುತ್ತೀ, ಎಂದು ನುಡಿಯುತ್ತಾರೆ.

ಕಿಕವಾಉಗಿದ್ಧವಾಯಸ ಸರೂವ ಧರಿಊಣ ಣಾರಯಾ ಚೇವ ॥
ಪಹಣಂತಿ ವಜ್ಜಮಯತುಂಡತಿಖ್ಖಣೇಹಿಂ ರದೇಹಿಂ ದಯಾರಹಿಯಾ ॥

ಕೃಕವಾಕುಗೃಧ್ರವಾಯಸಸ್ವರೂಪಂ ಧೃತ್ವಾ ನಾರಕಾಶ್ಚೈವ ॥
ಪ್ರಘ್ನಂತಿ ವಜ್ರಮಯತುಂಡತೀಕ್ಷ್ಣೈಃ ರದೈರ್ದಯಾರಹಿತಾ: ॥

ಅರ್ಥಃ—ಆ ನಿರ್ದಯರಾದ ನಾರಕರು ಕೋಳಿ, ಕಾಗಿ ಮುಂತಾದ ದುಷ್ಟ ಪಕ್ಷಿಗಳ ರೂಪವನ್ನು ಧರಿಸಿ ಆ ನೂತನ ನಾರಕೀ ಜೀವಕ್ಕೆ ತಮ್ಮ ವಜ್ರದಂತಿರುವ ಚುಂಚಿನಿಂದಲೂ ಹಲ್ಲುಗಳಿಂದಲೂ ಛೇದನ ಮಾಡುತ್ತಾರೆ.

ಧರಿಊಣ ಉಡ್ಢಜಂಘಂ ಕರಕಯಚೇಕೇಹಿಂ ಕೇಇ ಫಾಡಂತಿ ॥
ಮುಸಳೇಹಿಂ ಮುಗ್ಗವೇಹಿಂ ಯ ಚಕುಣ್ಣೀಕುವ್ವಂತಿ ಪರೇ ಣಿರಯಾ ॥

ಧೃತ್ವೋರ್ಧ್ವಜಂಘಂ ಕ್ರಕಚೈಃ ಕೇಚಿದ್ವಿದಾರಯಂತಿ ॥
ಮುಸಲೈರ್ಮುದ್ಗರೈಶ್ಚ ಚೂರ್ಣೀಕುರ್ವಂತಿ ಪರೇ ನಾರಕಾಃ ॥

ಅರ್ಥ:—ಬೇರೆ ನಾರಕರು ಬಂದು ಅವನ ಕಾಲುಗಳನ್ನು ಹಿಡಿದು ಕರಗಸದಿಂದ ಕೊರೆಯುತ್ತಾರೆ. ಮತ್ತು ಕೆಲವರು ಒನಕೆಗಳಿಂದಲೂ ಮುದ್ಗರಗಳಿಂದಲೂ ಜಡಿಯುತ್ತಾರೆ.

ಜಿಬ್ಭಾಭೇಯಣಂ ಣಯಣಾಣ ಫೋಡಣಂ ದಂತಚೂರಣಂ ಜಳಣಂ ||
ಮಿಳಣಂ ಕುಣಂತಿ ಖಂಡಂತಿ ಕೇಇ ತಿಳಮತ್ತಖಂಡೇಹಿಂ || ೧೬೮ ||

ಜಿಹ್ವಾಭೇದನಂ ನಯನಾನಾಂ ಸ್ಫೋಟನಂ ದಂತಚೂರಣಂ ಜ್ವಲನಮ್ ||
ಮೇಲನಂ ಕುರ್ವಂತಿ ಖಂಡಯಂತಿ ಕೇಚಿತ್ತಿಲಮಾತ್ರಖಂಡೈಃ ||

ಅರ್ಥ:—ಕೆಲವರು ಆ ವ್ಯಸನಿಯ ನಾಲಿಗೆಯನ್ನು ಕೊಯ್ಯುತ್ತಾರೆ. ಬೇರೆ ಕೆಲವರು ಬಂದು ಕಣ್ಣುಗಳನ್ನು ಒಡೆಯುತ್ತಾರೆ. ಹಲ್ಲುಗಳನ್ನು ಕಿತ್ತು ಸುಡುತ್ತಾರೆ. ಮತ್ತು ಎಳ್ಳಷ್ಟು ಚೂರು ಚೂರು ಮಾಡಿ ಬೀಸುತ್ತಾರೆ.

ಭಾವಾರ್ಥಃ—ಪೂರ್ವ ಜನ್ಮದಲ್ಲಿ ಯಾವನು ಪರನಿಂದೆ, ಅಸತ್ಯಭಾಷಣ, ಅಭಕ್ಷಭಕ್ಷಣ ಮುಂತಾದ್ದನ್ನು ಮಾಡಿರುವನೋ, ಅವನ ನಾಲಿಗೆಯನ್ನು ಕೊಯ್ಯುತ್ತಾರೆ. ಯಾವನು ವಿಕಾರವಶನಾದಾಗ ಪರಸ್ತ್ರೀಯರನ್ನು ನೋಡಿರುವನೋ, ಅವನ ಕಣ್ಣುಗುಡ್ಡೆಗಳನ್ನು ಒಡೆಯುತ್ತಾರೆ. ಅಭಕ್ಷ್ಯಚರ್ವಣವನ್ನು ಮಾಡಿದವನ ಹಲ್ಲುಗಳನ್ನು ಕಿಳುತ್ತಾರೆ. ಪರರ ಮನೆಗಳನ್ನು ಸುಟ್ಟಂಥ ಮನುಷ್ಯನನ್ನು ಬೆಂಕೆಯಲ್ಲಿ ಚೆಲ್ಲುತ್ತಾರೆ. ಹುಳುಕಾದ, ಕೇರಿ ಸ್ವಚ್ಛ ಮಾಡದ ಧಾನ್ಯವನ್ನು ಬೀಸಿದಂಥ ಜನರನ್ನು ಎಳ್ಳುಕಾಳಷ್ಟು ಚೂರು ಚೂರು ಮಾಡಿ ಬೀಸುತ್ತಾರೆ.

ಅಣ್ಣೇ ಕಳಂಬವಾಳುಯಥಳಮ್ಮಿ ತತ್ತಮ್ಮಿ ಪಾಡಿಊಣ ಪುಣೋ ||
ಲೋಟಾವಿಂತಿ ರಡಂತಂ ಣಿಹಣಂತಿ ಘಸಂತಿ ಭೂಮೀಏ || ೧೬೯ ||

ಅನ್ಯೇ ಕಠೋರವಾಲುಕಾಸ್ಥಲೇ ತಪ್ತೇ ಪಾತಯಿತ್ವಾ ಪುನಃ ||
ಲೋಢಯಂತಿ ರಟಂತಂ ನಿಘ್ನಂತಿ ಘರ್ಷಯಂತಿ ಭೂಮ್ಯಾಮ್ ||

ಅರ್ಥ:—ಬೇರೆ ನಾರಕರು ಬಂದು ಆ ವ್ಯಸನಿಯನ್ನು ಕಾದ ಮತ್ತು ಬಿರುಸಾದ ಉಸುಬಿನಲ್ಲಿ ಕೆಡವಿ ಎಳೆಯುತ್ತಾರೆ. ಆ ದುಃಖವನ್ನು ತಾಳದೆ ಶೋಕ ಮಾಡಹತ್ತಿದರೆ ಪುನಃ ಹೊಡೆದು ನೆಲದ ಮೇಲೆ ಕೆಡವಿ ತುಳಿಯುತ್ತಾರೆ. (ಪೂರ್ವ ಜನ್ಮದಲ್ಲಿ ಹುಳುಕ ಧಾನ್ಯವನ್ನು ಸುಟ್ಟಂಥವನಿಗೆ ಹೀಗೆ ಶಿಕ್ಷೆಯನ್ನು ಮಾಡುತ್ತಾರೆ.)

ಅಸುರಾ ವಿ ಕುರಾ ಪಾವಾ ತತ್ಥ ವಿ ಗಂತೂಣ ಪುವ್ವವೇರಾಇಂ ||
ಸುಮರಾವೀಣ ತಓ ಜುದ್ಧಂ ಲಾವಂತಿ ಅಣ್ಣೋಣ್ಣಂ || ೧೭೦ ||

ಅಸುರಾ ಅಪಿ ಕ್ರೂರಾಃ ಪಾಪಾಸ್ತತ್ರಾಪಿ ಗತ್ವಾ ಪೂರ್ವವೈರಾಣಿ ||
ಸ್ಮಾರಯಿತ್ವಾ ತತೋ ಯುದ್ಧಂ ಕಾರಯಂತ್ಯನ್ಯೋನ್ಯಮ್ ||

ಅರ್ಥಃ—ಕ್ರೂರ ಮತ್ತು ಪಾಪಿಷ್ಟರಾದ ಅಸುರರಾದರೂ ಆ ನರಕದ ಹತ್ತರ ಹೋಗಿ ಅಲ್ಲಿರುವ ಜೀವಗಳಿಗೆ ಪೂರ್ವವೈರದ ಸ್ಮರಣೆಯನ್ನು ಮಾಡಿಕೊಟ್ಟು ಪರಸ್ಪರ ಯುದ್ಧವನ್ನು ಹಚ್ಚುತ್ತಾರೆ. ಹತ್ತು ಪ್ರಕಾರದ ಭವನವಾಸೀ

ದೇವರಲ್ಲಿ ಅಸುರ ಕುಮಾರ ಜಾತಿಯ ದೇವರಿರುತ್ತಾರೆ. ಅವರು ಎಷ್ಟು ಕ್ರೂರ ರೆಂದರೆ ೧ನೇ, ೨ನೇ, ೩ನೇ, ನರಕದ ಹತ್ತರ ಹೋಗಿ ಅಲ್ಲಿರುವ ನಾರಕರ ಪೂರ್ವ ವೃತ್ತಾಂತವನ್ನು ತಮ್ಮ ವಿಭಂಗಾವಧಿಯಿಂದ ತಿಳಿದು ಅವರಲ್ಲಿ ಪರಸ್ಪರ ಯುದ್ಧ ವನ್ನು ಹಚ್ಚುತ್ತಾರೆ.

## ನರಕದಲ್ಲಿಯ ಬಿಲಗಳ ಸಂಖ್ಯೆಯು.

ಸತ್ತೇಯ ಅಹೋಳೋಏ ಪುಢವೀಓ ತತ್ಥ ಸಯಸಹಸ್ಸಾಇಂ ॥
ತಿರಿಯಾಣೀ ಚಉಲಸೀಸಇ ಸೇಡಿಂದಪಇಣ್ಣಯಾಇ ಹವೇ ॥ ೧೭೧ ॥

ಸಪ್ತೈವಾಧೋಲೋಕೇ ಪೃಥಿವ್ಯಸ್ತತ್ರ ಶತಸಹಸ್ರಾಣಿ ॥
ತ್ರೀಣಿ ಚತುರಶೀತಿಃ ಶ್ರೇಣೀಬದ್ಧೇಂದ್ರಪ್ರಕೀರ್ಣಕಾನಿ ಭವೇಯುಃ ॥

ಅರ್ಥ:—ಅಧೋಲೋಕದಲ್ಲಿ ನರಕದ ಏಳು ಸ್ಥಾನಗಳಿರುತ್ತವೆ. ಅವುಗಳಲ್ಲಿ ಶ್ರೇಣಿಬದ್ಧ, ಇಂದ್ರಕ, ಪ್ರಕೀರ್ಣಕ ಇವು ಮೂರು ಕೂಡಿ ಒಟ್ಟಿಗೆ ೮೪ ಲಕ್ಷ ಬಿಲ (ನಾರಕರ ಉತ್ಪತ್ತಿಸ್ಥಾನಗ)ಳಿರುತ್ತವೆ. ಅವು:— ೧ನೇ ನರಕದಲ್ಲಿ ೩೦ ಲಕ್ಷ, ೨ನೇದರಲ್ಲಿ ೨೫ ಲಕ್ಷ, ೩ನೇದರಲ್ಲಿ ೧೫ ಲಕ್ಷ, ೪ನೇದರಲ್ಲಿ ೧೦ ಲಕ್ಷ, ೫ನೇದರಲ್ಲಿ ೩ ಲಕ್ಷ, ೬ನೇದರಲ್ಲಿ ಐದು ಕಡಿಮೆ ೧ ಲಕ್ಷ, ೭ನೇದರಲ್ಲಿ ೫ ಹೀಗೆ ಒಟ್ಟಿಗೆ ೮೪ ಲಕ್ಷಗಳಿರುತ್ತವೆ. ಅವು ಗಂಟೆಯ ಆಕಾರದಂತೆ ಅಧೋಮುಖವಾಗಿರುತ್ತವೆ.

## ನರಕಗಳ ಹೆಸರುಗಳು.

ರಯಣಪ್ಪಹ ಸಕ್ಕರಪಹ ವಾಳುಪ್ಪಹ ಪಂಕಧೂಮತಮಭಾಸಾ ॥
ತಮತಮಪಹಪುಢವೀಣಂ ಜಾಣಹ ಅಣುವತ್ಥಣಾವಾಮಾಈ ॥ ೧೭೨ ॥

ರತ್ನಪ್ರಭಾ ಶರ್ಕರಾಪ್ರಭಾ ವಾಲುಕಾಪ್ರಭಾ ಪಂಕಧೂಮತಮೋಭಾಸಾ ॥
ತಮಸ್ತಮಃಪ್ರಭಾ ಪೃಥ್ವೀನಾಂ ಜಾನೀಥಾನ್ವರ್ಥನಾಮಾನಿ ॥

ಅರ್ಥ:—೧ ರತ್ನಪ್ರಭಾ ೨ ಶರ್ಕರಾಪ್ರಭಾ ೩ ವಾಲುಕಾಪ್ರಭಾ ೪ ಪಂಕ ಪ್ರಭಾ ೫ ಧೂಮಪ್ರಭಾ ೬ ತಮ:ಪ್ರಭಾ ೭ ತಮಸ್ತಮ:ಪ್ರಭಾ ಹೀಗೆ ಏಳು ನರ ಕಗಳು ಅನ್ವರ್ಥಕ ನಾಮವನ್ನು ಧರಿಸುತ್ತವೆ.

ಪಢಮಾಇ ಜಮುಕ್ಕಸ್ಸಂ ಬಿದಿಯಾಇ ಸುಸಾಲು ಜಹಣ್ಣಂ ತಂ ॥
ತಿಯ ಸತ್ತ ದಸ ಯ ಸತ್ತರಸ ದು ಸಹಿ ಬಾಈಸ ತೇತೀಸಂ ॥ ೧೭೩ ॥

ಪ್ರಥಮಾಯೊಂ ಯದುತ್ಕೃಷ್ಟಂ ದ್ವಿತೀಯಾಯಾ ಸ್ವಸ್ಯಾರ ಜಘನ್ಯಂ ತತ್ ॥
ತ್ರೀಣಿ ಸಪ್ತ ದಶ ಚ ಸಪ್ತದಶ ತು ದ್ವಾವಿಂಶತಿಸ್ತ್ರಯಸ್ತ್ರಿಂಶತ್ ॥

ಅರ್ಥ:—೧ನೇ ನರಕದಲ್ಲಿ ಯಾವ ಆಯುಷ್ಯವು ಉತ್ತಮವೆನಿಸುದೋ, ಅದು ೨ನೇ ನರಕದಲ್ಲಿ ಜಘನ್ಯ (ಕನಿಷ್ಟ)ವೆನಿಸುವದು. ಇದರಂತೆ ೨ನೇಯ ನರಕ

ದಿಂದ ೩, ೭, ೧೦, ೧೭, ೨೨, ೩೩ ಸಾಗರ ಉತ್ಕೃಷ್ಟ ಆಯುಷ್ಯವೆಂದು ಕ್ರಮ ದಿಂದ ತಿಳಿಯಬೇಕು. (೧ನೇಯ ನರಕದಲ್ಲಿ ದೊಡ್ಡ ಆಯುಷ್ಯವೆಂದರೆ ಒಂದು ಸಾಗರ, ೨ನೆಯುದರಲ್ಲಿ ಜಘನ್ಯ ಆಯುಷ್ಯವು ೧ ಸಾಗರ, ಮತ್ತು ಉತ್ಕೃಷ್ಟ ಆಯುಷ್ಯ ೩ ಸಾಗರ, ೩ನೆಯುದರಲ್ಲಿ ಜಘನ್ಯ ಆಯುಷ್ಯ ೩ ಸಾಗರ ಮತ್ತು ಉ ತ್ಕೃಷ್ಟ ೭ ಸಾಗರ, ೪ನೇದರಲ್ಲಿ ಜಘನ್ಯ ೭ ಸಾಗರ ಮತ್ತು ಉತ್ಕೃಷ್ಟ ೧೦ ಸಾ ಗರ, ೫ನೇಯುದರಲ್ಲಿ ಜಘನ್ಯ ೧೦ ಸಾಗರ ಮತ್ತು ಉತ್ಕೃಷ್ಟ ೧೭ ಸಾಗರ, ೬ನೆಯು ದರಲ್ಲಿ ಜಘನ್ಯ ೧೭ ಸಾಗರ ಹಾಗು ಉತ್ಕೃಷ್ಟ ೨೨ ಸಾಗರ, ೭ನೆಯುದರಲ್ಲಿ ಜಘ ನ್ಯ ೨೨ ಸಾಗರ ಹಾಗು ಉತ್ಕೃಷ್ಟ ೩೩ ಸಾಗರ ಆಯುಷ್ಯವೆಂದು ತಿಳಿಯಬೇಕು.

ಸಾಯರಸಂಖಾ ಏಸಾ ಕಮೇಣ ಬಿದಿಯಾಇ ಜಾಣ ಪುಢವೀಸು ||
ಏಕ್ಕಸ್ಸ ಸಾಉವಮಾಣಂ ಣಿದ್ದಿಠ್ಠಂ ಜಿಣವರಿಂದೇಹಿಂ || ೧೭೪ ||

ಸಾಗರಸಂಖ್ಯೈಷಾ ಕ್ರಮೇಣ ದ್ವಿತೀಯಾದಿಷು ಜಾನೀಹಿ ಪೃಥ್ವೀಷು ||
ಏಕಸ್ಯ ಸಾಗರೋಪಮಾನಂ ನಿರ್ದಿಷ್ಟಂ ಜಿನವರೇಂದ್ರೈಃ ||

ಅರ್ಥಃ—ಮೇಲೆ ಹೇಳಿದ ಸಂಖ್ಯೆಯು ಕ್ರಮವಾಗಿ ೨ ನೆಯ ನರಕದಿಂದ ಇರುತ್ತದೆ. ೧ ನೇ ನರಕದಲ್ಲಿ ಜಘನ್ಯ ಆಯುಷ್ಯವು ೧೦,೦೦೦ ವರ್ಷ ಇರುತ್ತದೆ. ಉತ್ಕೃಷ್ಟ ಆಯುಷ್ಯವು ಸಾಗರವಿರುತ್ತದೆ. ಹೀಗೆ ಶ್ರೀ ಜಿನೇಂದ್ರರು ಹೇಳಿರುತ್ತಾರೆ.

ಏತಿಯಪಮಾಣಕಾಳಂ ಸಾರೀರಂ ಮಾಣಸಂ ವಹುಪಯಾರಂ ||
ದುಕ್ಖಂ ಸಹೇಇ ತಿವ್ವಂ ವಿಸಣಸ್ಸ ಫಳೇಣಿಮೋ ಜೀವೋ || ೧೭೫ ||

ಏತತ್ಪ್ರಮಾಣಕಾಲಂ ಶಾರೀರಂ ಮಾನಸಂ ಬಹುಪ್ರಕಾರಂ ||
ದುಃಖಂ ಸಹತೇ ತೀವ್ರಂ ವ್ಯಸನಸ್ಯ ಫಲೇನಾಯಂ ಜೀವಃ ||

ಅರ್ಥ:—ಮೇಲೆ ಹೇಳಿದಂತೆ ಪ್ರಮಾಣಕಾಲದ ವರೆಗೂ ಜೀವವು ಶರೀರ ಸಂಬಂಧದಿಂದ ಮನಸ್ಸಿಗೆ ಆಗುವ ಬಹು ದು:ಖವನ್ನು ವ್ಯಸನದಿಂದ ಭೋಗಿಸುತ್ತದೆ.

ತಿರಿಯಗಈಏ ವಿ ತಹಾ ಥಾವರಕಾಯೇಸು ವಹುಪಯಾರೇಸು ||
ಅತ್ಥಇ ಅಣಂತಕಾಳಂ ಹಿಂಡಂತೋ ಜೋಣಿಲಕ್ಖೇಸು || ೧೭೬ ||

ತಿರ್ಯಗ್ಗತಾವಪಿ ತಥಾ ಸ್ಥಾವರಕಾಯೇಷು ಬಹುಪ್ರಕಾರೇಷು ||
ಆಸ್ತೇ ಅನಂತಕಾಲಂ ಹಿಂಡನ್ಯೋನಿಲಕ್ಷೇಷು ||

ಅರ್ಥ:—ನರಕದ ಆಯುಷ್ಯವು ಮುಗಿದ ಮೇಲೆ ಜೀವವು ನೀಚಯೋನಿ ಯಲ್ಲಿ ಹುಟ್ಟಿ ನರಕದಂತೆ ಶಾರೀರಿಕ, ಮಾನಸಿಕ ದು:ಖವನ್ನು ಭೋಗಿಸಿ ಅನೇಕ ಪ್ರಕಾರದ ಯೋನಿಗಳಲ್ಲಿ ಮೇಲಿಂದ ಮೇಲೆ ಜನ್ಮ ಮರಣಗಳನ್ನು ಹೊಂದಿ ಅನಂತ ಕಾಲದ ತನಕ ತಿರ್ರುಗುತ್ತದೆ.

ಕಹಮವಿ ಣಿಸ್ಸರಿಊಣಂ ತತ್ತೋ ವಿಯಳಿಂದಿಯೇಸು ಸಂಭವಇ ||
ತತ್ಥ ವಿ ಕಿಳಿಸ್ಸಮಾಣೋ ಕಾಳಮಸಂಖಿಜ್ಜಈ ವಸಈ || ೧೬೭ ||

ಕಥಮಪಿ ತಸ್ಮಾನ್ನಿಸ್ಸೃತ್ಯ ತತೋ ವಿಕಲೇಂದ್ರಿಯೇಷು ಸಂಭವತಿ ||
ತತ್ರಾಪಿ ಕ್ಲಿಶ್ಯಮಾನಃ ಕಾಲಮಸಂಖ್ಯೇಯಂ ವಸತಿ ||

ಅರ್ಥ:-ಅಲ್ಲಿಂದ ಹ್ಯಾಗಾದರೂ ಬಿಡುಗಡೆಹೊಂದಿ ವಿಕಲೇಂದ್ರಿಯ (೨-೩-೪ ಇಂದ್ರಿಯ ಜೀವ) ದಲ್ಲಿ ಹುಟ್ಟುತ್ತದೆ. ಮತ್ತು ಅಲ್ಲಾದರೂ ಅನಂತಕಾಲ ದುಃಖವನ್ನು ಭೋಗಿಸುತ್ತದೆ.

ತೋ ಖಿಲ್ಲವಿಜೋಏಣ ಕಹ ವಿ ಪಂಚೇಂದಿಏಸು ಉವವಣ್ಣೋ ||
ತತ್ಥ ವಿ ಅಸಂಖಕಾಳಂ ಜೋಣಿಸಹಸ್ಸೇಸು ಪರಿಭಮಇ || ೧೬೮ ||

ತತಃ ಸ್ಖಲಿತಯೋಗೇನ ಕಥಮಪಿ ಪಂಚೇಂದ್ರಿಯೇಷೂತ್ಪನ್ನಃ ||
ತತ್ರಾಪ್ಯಸಂಖ್ಯಕಾಲಂ ಯೋನಿಸಹಸ್ರೇಷು ಪರಿಭ್ರಮತಿ ||

ಅರ್ಥ:—ಆ ಮೇಲೆ ವಿಕಲೇಂದ್ರಿಯದಿಂದ ಬಿಡುಗಡೆಹೊಂದಿ ಪಂಚೇಂದ್ರಿಯಗಳಲ್ಲಿ (ಪಶುಗಳಲ್ಲಿ) ಹುಟ್ಟುತ್ತದೆ. ಮತ್ತು ಅಲ್ಲಾದರೂ ಅಸಂಖ್ಯಕಾಲಪ ವರೆಗೆ ಸಾವಿರಾರು ಯೋನಿಗಳಲ್ಲಿ ದುಃಖವನ್ನು ಅನುಭವಿಸುತ್ತಾ ತಿರುಗುತ್ತದೆ.

ಛೇಯಣ ಭೇಯಣ ತಾಸಣ ಣಿಲಂಛಣಂ ಜಹಾ ತಹಾ ದಮಣಂ ||
ಣಿಖಳಣ ಮಳಣಂ ದಳಣಂ ಪಉಳಣ ಉಕ್ಕತ್ತಣ್ಣಂ ಚೇವ || ೧೬೯ ||
ವಂಧಣ ಭಾರಾರೋವಣ ಳಂಛಣಪಾಣಸ್ಸ ರೋಹಣಂ ಸಹಣಂ ||
ಸೀಉಣ್ಹ ಭುಕ್ಖತಣ್ಹಂ ಹಿಯಾಣ ತಹ ಪಿಲ್ಲಯವಿಓಯಂ || ೧೭೦ ||

ಛೇದನಂ ಭೇದನಂ ತ್ರಾಸನಂ ವಶೀಕರಣಂ ಯಥಾ ತಥಾ ದಮನಮ್ ||
ನಿಷ್ಖಲನಮಲನಂ (?) ದಲನಂ ಪ್ರಜ್ವಲನಂ ತು ಕರ್ತನಂ ಚೈವ ||
ಬಂಧನಂ ಭಾರಾರೋಪಣಂ ಅಶನಪಾನಸ್ಯ ರೋಧನಂ ಸಹನಮ್ ||
ಶೀತೋಷ್ಣಕ್ಷುತ್ತೃಷ್ಣಾ ಹೃದಯಸ್ಯ ತಥಾ ಬಾಲವಿಯೋಗಃ ||

ಅರ್ಥ:—ತಿರ್ಯಂಚಗತಿಯಲ್ಲಿ ಜನಸಿದ ಮೇಲೆ ಕಡಿಯುವದು, ಬಡಿಯುವದು, ತ್ರಾಸಕೊಡುವದು, ಪೀಡಿಸುವದು, ಅಜ್ಞಿಯಲ್ಲಿ ಇಟ್ಟುಕೊಳುವದು, ಸುಡೋಣ, ಅಂಜಿಕೆ, ಬಂಧನ, ಒಜ್ಜೆಹೊರಿಸುವದು, ಅನ್ನಪಾನಗಳ ನಿರೋಧ, ಚಳಿ, ಬಿಸಲು, ಹಸಿವೆ, ನೀರಡಿಕೆ, ಕರುಗಳ ವಿಯೋಗ ಮುಂತಾದ ದುಃಖಗಳನ್ನು ನಿರಂತರವಾಗಿ ಭೋಗಿಸಬೇಕಾಗುತ್ತದೆ.

ಇಚ್ಚೇವಮಾಇ ವಹುಳಂ ದುಕ್ಖಂ ಪಾಉಣಇ ತಿರಿಯಜೋಣೀಏ ||
ವಿಸಣಸ್ಸ ಫಳೇಣ ಜದೋ ವಿಸಣಂ ಪರಿವಜ್ಜಏ ತಮ್ಹಾ || ೧೭೧ ||

ಇತ್ಯೇವಮಾದಿ ಬಹುಲಂ ದುಃಖಂ ಪ್ರಾಪ್ನೋತಿ ತಿರ್ಯಗ್ಯೋನ್ಯಾಮ್ ||
ವ್ಯಸನಸ್ಯ ಫಲೇನ ಯತೋ ವ್ಯಸನಂ ಪರಿವರ್ಜಯೇತ್ತಸ್ಮಾತ್ ||

ಅರ್ಥ:—ಈ ಮೇರೆಗೆ ಸಪ್ತವ್ಯಸನಗಳಿಂದ ಉಂಟಾದ ದು:ಖಗಳನ್ನು ಪಶು ಜನ್ಮದಲ್ಲಿ ಭೋಗಿಸಬೇಕಾಗುತ್ತದೆ. ಆದದರಿಂದ ಸಪ್ತವ್ಯಸನಗಳನ್ನು ಬಿಟ್ಟು ಬಿಡಬೇಕು.

## ಮನುಷ್ಯಗತಿಯ ದು:ಖವು.

ಮಣುಯತ್ತೇ ವಿಸು ಜೀವಾ ದುಕ್ಖಇ ಪಾವಂತಿ ವಹುವಿಯಪ್ಪೇಹಿಂ ||
ಇಠ್ಠಾಣಿಠ್ಠೇಸು ಸಯಾ ವಿಯೋಯಸಂಜೋಯಜಂ ತಿವ್ವಂ || ೧೮೭ ||

ಮನುಷ್ಯತ್ವೇಪಿ ಚ ಜೀವಾ ದುಃಖಾನಿ ಪ್ರಾಪ್ನುವಂತಿ ಬಹುವಿಕಲ್ಪೈಃ ||
ಇಷ್ಟಾನಿಷ್ಟೇಷು ಸದಾ ವಿಯೋಗಸಂಯೋಗಜಂ ತ್ರೀವ್ರಮ್ ||

ಅರ್ಥ:—ಮನುಷ್ಯ ಜನ್ಮದಲ್ಲಾದರೂ ಇಷ್ಟಜನರ ವಿಯೋಗ, ಅನಿಷಟ ಜನರ ಸಂಯೋಗದಿಂದಲೂ ಮತ್ತೂ ಅನೇಕ ರೀತಿಯಿಂದಲೂ ತೀವ್ರವಾದ ದು:ಖಗಳು ಜೀವಕ್ಕೆ ಪ್ರಾಪ್ತವಾಗುತ್ತವೆ.

ಉಪ್ಪಣ್ಣಪಢಮಸಮಯಮ್ಹಿ ಕೇಇ ಜಣಣೀಇ ಛಂಡಿಓ ಸಂತಾ ||
ಕಾರಣವಸಭ್ಭುಉಣ್ಹಭೂಖತ್ತಣ್ಹಾಉರೋ ಮರಈ || ೧೮೮ ||

ಉತ್ಪನ್ನಪ್ರಥಮಸಮಯೇ ಕೇಚಿಜ್ಜನನ್ಯಾ ತ್ಯಕ್ತಾಃ ಸಂತಃ ||
ಕಾರಣವಶೇನ ಶೀತೋಷ್ಣಕ್ಷುತ್ತೃಷ್ಣಾತುರಾ ಮ್ರಿಯಂತೇ ||

ಅರ್ಥಃ—ಈ ಮನುಷ್ಯ ಜನ್ಮದಲ್ಲಿ, ಎಷ್ಟೋ ಜೀವಗಳು ಜನಸಿದ ಕೂಡಲೆ ತಾಯಿಯ ವಿಯೋಗಯದಿಂದ ಹಸಿವೆ, ನೀರಡಿಕೆ, ಚಳಿ, ಬಿಸಿಲು ಮುಂತಾದ ಕಾರಣಗಳಿಂದ ವ್ಯಾಕುಲವಾಗಿ ತತ್ಕಾಲಕ್ಕೆ ಮರಣ ಹೊಂದುತ್ತವೆ.

ಬಾಳತ್ತಣೇ ವಿ ಜೀಪೋ ಮಾಯಾಪಿಯರೇಹಿ ಕೋವಿ ಪರಿಹೀಣೋ ||
ಉಚ್ಛಿಠ್ಠಂ ಭಕ್ಖಂತೋ ಜೀವಇ ದುಕ್ಖೇಣ ಪರಗೇಹೇ || ೧೮೯ ||

ಬಾಲತ್ವೇಪಿ ಜೀವೋ ಮಾತೃಪಿತೃಭ್ಯಾಂ ಕೋಪಿ ಪರಹೀನಃ ||
ಉಚ್ಛಿಷ್ಟಂ ಭಕ್ಷಯಂಜೀವತಿ ದುಃಖೇನ ಪರಗೇಹೇ ||

ಅರ್ಥ:—ಯಾವದಾದರೊಂದು ಜೀವವು ಬಾಲ್ಯದಲ್ಲಿಯೇ ತಾಯಿ ತಂದೆಗಳನ್ನು ಅಗಲಿದರೆ ಅದು ಪರರ ಮನೆಯಲ್ಲಿ ಎಂಜಲವನ್ನು ತಿಂದು ಬದುಕುತ್ತದೆ.

ಪುವ್ವಂ ದಾಣಂ ದಾಊಣ ಕೋ ವಿ ಸಧಣೋ ಜಣಸ್ಸ ಜಹಜೋಯಂ ||
ಪಚ್ಛಾ ಸೋ ಧಣರಹಿಓ ಣ ಲಹಇ ಕೂರಂ ಪಿ ಜಾಯಂತೇ || ೧೯೦ ||

ಪೂರ್ವಂ ದಾನಂ ದತ್ವಾ ಕೋಪಿ ಸಧನೋ ಜನಸ್ಯ ಯಥಾಯೋಗ್ಯಮ್ ॥
ಪಶ್ಚಾತ್ಸ ಧನರಹಿತೋ ನ ಲಭತೇ ಕೂರಮಪಿ ಯಾಚಮಾನಃ ॥

ಅರ್ಥಃ—ಪೂರ್ವಜನ್ಮದಲ್ಲಿ ಯಥಾಯೋಗ್ಯವಾಗಿ ದಾನವನ್ನು ಮಾಡಿ ಧನಿಕನಾದ ಪುರುಷನು ತನ್ನ ಪುಣ್ಯವು ತೀರಿದ ಮೇಲೆ ನಿರ್ಧನನಾಗಿ ಭಿಕ್ಷೆಯನ್ನು ಬೇಡಹತ್ತಲು ಆಗ್ಗೆ ಅವನಿಗೆ ತುಸುವಾದರೂ ಅನ್ನವು ದೊರೆಯುವದಿಲ್ಲ.

ಅಣ್ಣೋ ಉ ಪಾವರೋಏಣ ವಾಹಿಉಣ ವರವಜ್ಜ ದೇಸಮ್ಮಿ ॥
ಅಚ್ಛಇ ಸಹಾಯರಹಿಓ ಣ ಲಹಇ ಸಘರೇ ವಿ ಚಿಠ್ಠೇಉಂ ॥ ೧೮೬ ॥

ಅನ್ಯಸ್ತು ಪಾಪೋದಯೇನ ವ್ಯಾಧಿತೋ ವರ್ಜಯಿತ್ವಾ ದೇಶೇ ॥
ಆಸ್ತೇ ಸಹಾಯರಹಿತೋ ನ ಲಭತೇ ಸ್ವಗೃಹೇಪಿ ಸ್ಥಾತುಮ್ ॥

ಅರ್ಥ:—ಬೇರೊಬ್ಬ ಮನುಷ್ಯನು ಪಾಪವು ಫಲೋನ್ಮುಖ (ಪಾಪದ ಫಲವನ್ನು ಅನುಭವಿಸುವ ಸಮಯು ಪ್ರಾಪ್ತವಾಗಲು)ವಾಗಲು ರೋಗ ಪೀಡಿತನಾಗಿ ಸ್ವದೇಶ ಬಿಟ್ಟು ಪರದೇಶದಲ್ಲಿ ವಾಸಮಾಡುತ್ತಾನೆ. ಯಾಕಂದರೆ, ಅವನಿಗೆ ಯಾರದಾದರೂ ಸಹಾಯುವಿಲ್ಲದ್ದರಿಂದ ತನ್ನ ಮನೆಯುಲ್ಲಿ ಸಹ ವಾಸ ಮಾಡುವದಿಲ್ಲ.

ತಿಸಿಓ ವಿ ಭುಖ್ಖಿಓ ಹಂ ಪುತ್ತಾ ಮೇ ದೇಹಿ ಪಾಣಮಸಣಂ ಚ ॥
ಏವಂ ಕುವ್ವಂತಸ್ಸ ವಿ ಣ ಕೋ ವಿ ವಯಣಂ ಚ ಸದ್ದಹದಿ ॥ ೧೮೭ ॥

ತೃಷಿತೋಪಿ ಕ್ಷುಧಿತೋಹಂ ಪುತ್ರ ಮೇ ದೇಹಿ ಪಾನಮಶನಂ ಚ ॥
ಏವಂ ಕುರ್ವತೋಪಿ ನ ಕೋಪಿ ವಚನಂ ಶ್ರದ್ದಧಾತಿ ॥

ಅರ್ಥ:—ವೃದ್ಧಾವಸ್ಥೆಯನ್ನು ಹೇಳುತ್ತಾರೆ. “ ಎಲೈ ಮಕ್ಕಳಿರಾ, ನನಗೆ ಹಸಿವೆ, ನೀರಡಿಕೆ ಆಗಿರುವದರಿಂದ ತಿನ್ನಲಿಕ್ಕೂ ಕುಡಿಯಲಿಕ್ಕೂ ಏನಾದರೂ ಕೊಡಿರಿ! ” ಎಂದು ಮುಪ್ಪಿನ ಮನುಷ್ಯನು ಒದರಿಕೊಂಡರೂ ಅತ್ತ ಕಡೆಗೆ ಯಾರೂ ಲಕ್ಷಕೊಡುವದಿಲ್ಲ.



ತೋ ರೋಯಸೋಯಭರಿಓ ಸವ್ವೇಸಿಂ ಸವ್ವಾಹಿಯಾಉ ದಾಊಣ ॥
ದುಕ್ಖೇಣ ಮರಇ ಪಚ್ಛಾ ಧಿಗತ್ಥು ಮಣುಯತ್ತಣಮಸಾರಂ ॥ ೧೮೮ ॥

ತದಾ ರೋಗಶೋಕಭರಿತಃ ಸರ್ವೇಷಾಂ ಸರ್ವಮಾಯುರ್ದತ್ವಾ ॥
ದುಃಖೇನ ಮ್ರಿಯತೇ ಪಶ್ಚಾದ್ಧಿಗಸ್ತು ಮನುಜತ್ವಮಸಾರಮ್ ॥

ಅರ್ಥ:—ಆಗ್ಗೆ ಬೇನೆಯಿಂದಲೂ ದುಃಖದಿಂದಲೂ ಪೀಡಿತನಾದ ಆ ವೃದ್ಧನು ತನ್ನ ಆಯುಷ್ಯವನ್ನು ಪರಜನರಿಗೆ ದುಃಖಕೊಡುವದರಲ್ಲಿಯೇ ಕಳೆದು, ತಾನೂ ಶೋಕದಿಂದ ಮರಣ ಹೊಂದುತ್ತಾನೆ. ಈ ಅಸಾರವಾದ ಮನುಷ್ಯಜನ್ಮಕ್ಕೆ ಧಿಕ್ಕಾರವಿರಲಿ!!





ಅಣ್ಣಾಣಿ ಏವಮಾಈಣಿ ಜಾಣಿ ದುಕ್ಖಾಣಿ ಮಣುಯಲೋಯಮ್ಮಿ ॥
ದೀಸಂತಿ ತಾಣಿ ಪಾವಇ ವಿಸಣಸ್ಸ ಫಲೇಣಿಮೋ ಜೀವೋ ॥ ೧೮೯ ॥

ಅನ್ಯಾನ್ಯೇವಮಾದೀನಿ ಯಾನಿ ದುಃಖಾನಿ ಮನುಷ್ಯಲೋಕೇ ॥
ದೃಶ್ಯಂತೇ ತಾನಿ ಪ್ರಾಪ್ನೋತಿ ವ್ಯಸನಸ್ಯ ಫಲೇನಾಯಂ ಜೀವಃ ॥

ಅರ್ಥಃ—ಈ ಮನುಷ್ಯ ಲೋಕದಲ್ಲಿ ಮತ್ತೂ ಕಂಡು ಬರುವ ಯಾವತ್ತು ದು:ಖಗಳು ಈ ಜೀವಕ್ಕೆ ವ್ಯಸನದಿಂದ ಪ್ರಾಪ್ತವಾಗುತ್ತವೆ.

## ದೇವಗತಿಯಲ್ಲಿಯ ದು:ಖವು.

ಕಿಂಚುವಸಮೇಣ ಪಾವಸ್ಸ ಕಹವಿ ದೇವದತ್ತಣಂ ವಿ ಸಂಪತ್ತೋ ॥
ತತ್ಥ ವಿ ಪಾವಇ ದುಕ್ಖಂ ವಿಸಣಜ್ಜಿಯಕಮ್ಮಪಾಗೇಣ ॥ ೧೯೦ ॥

ಕಿಂಚಿದುಪಶಮೇನ ಪಾಪಸ್ಯ ಕಥಮಪಿ ದೇವತ್ವಮಪಿ ಸಂಪ್ರಾಪ್ತಃ ॥
ತತ್ರಾಪಿ ಪ್ರಾಪ್ನೋತಿ ದುಃಖಂ ವ್ಯಸನಾರ್ಜಿತಕರ್ಮಪಾಕೇನ ॥

ಅರ್ಥ:—ಪಾಪವು ಸ್ವಲ್ಪ ಕಡಿಮೆಯಾಗಿ ಪ್ರಯಾಸದಿಂದ ಜೀವವು ದೇವ ಗತಿಯನ್ನು ಹೊಂದಿದರೂ ಸಪ್ತವ್ಯಸನಗಳಿಂದುಂಟಾಗುವ ಪಾಪದ ಫಲವನ್ನು ಅನುಭವಿಸಬೇಕಾಗುತ್ತದೆ.

ದಟ್ಠೂಣ ಮಹದ್ಧೀಣಂ ದೇವಾಣಂ ಠಿಯಜ್ಜರಿದ್ಧಿಮಾಹಪ್ಪಂ ॥
ಅಪ್ಪಟ್ಠಿಓ ವಿಸೂರಇ ಮಾಣಸದುಕ್ಖೇಣ ಡಜ್ಝಂತೋ ॥ ೧೯೧ ॥

ದೃಷ್ಟ್ವಾ ಮಹರ್ದ್ಧೀನಾಂ ದೇವಾನಾಂ ಸ್ಥಿತಿಜಾತ್ಯರ್ದ್ಧಿಮಾಹಾತ್ಮ್ಯಮ್ ॥
ಅಲ್ಪಸ್ಥಿತಿತೋ ವಿಸೂರಯತಿ ಮಾನಸದು:ಖೇನ ದಗ್ಧ: ಸನ್ ॥

ಅರ್ಥಃ—ಬಹು ಸಿದ್ಧಿಯುಳ್ಳ ದೇವತೆಗಳ ಸ್ಥಿತಿ, ಜಾತಿ, ಋದ್ಧಿಗಳ ಮಹಾ ತ್ಮ್ಯವನ್ನು ನೋಡಿ, ಈ ಅಲ್ಪಸ್ಥಿತಿಯ ದೇವನು ಮಾನಸಿಕ ದು:ಖದಿಂದ ಕುದಿ ಯುತ್ತಿರುತ್ತಾನೆ.

ಹಾ ಮಣುಯಭವೇ ಉಪ್ಪಜ್ಜಿಊಣ ತವಸಂಜಮಂ ವಿ ಲದ್ಧೂಣ ॥
ಮಾಯಾಏಜವಿಕಪ್ಪಂ ದೇವದುಗ್ಗಇ ತೇಣ ಸಂಪತ್ತಾ ॥ ೧೯೨ ॥

ಹಾ ಮನುಷ್ಯಭವೇ ಉತ್ಪದ್ಯ ತಪ:ಸಂಯಮಮಪಿ ಲಬ್ಧ್ವಾ ॥
ಮಾಯಾಜನಿತವಿಕಲ್ಪಂ ದೇವದುರ್ಗತಿಸ್ತೇನ ಸಂಪ್ರಾಪ್ತಾ ॥

ಅರ್ಥ:—ಅಕಟಕಟ! ನಾನು ಮನುಷ್ಯ ಜನ್ಮದಲ್ಲಿ ತಪಸ್ಸು ಮತ್ತು ಇಂದ್ರಿಯ ನಿಗ್ರಹವನ್ನು ಪಾಲಿಸಿದರೂ ಕೇವಲ ಮೋಹದಿಂದ ಉತ್ಪನ್ನವಾಗುವ ವಿಕಲ್ಪಗಳನ್ನು ವಹಿಸಿದ್ದರಿಂದ ನನಗೆ ಈ ದೇವದುರ್ಗತಿಯು ಪ್ರಾಪ್ತವಾಗಿರುತ್ತದೆ.

ಕಂಡಪ್ಪಕಿಲ್ಬಿಸಾಸುರವಾಹಣಸಮೂಹದೇವಜಾಈಸು ॥
ಜಾವಜ್ಜೀವಂ ಣಿವಸಇ ವಿಸಹಂತೋ ಮಾಣಸಂ ದುಕ್ಖಂ ॥ ೧೯೩ ॥

ಕಂದರ್ಪಕಿಲ್ಬಿಷಾಸುರವಾಹನಸಮೂಹದೇವಜಾತಿಷು ॥
ಯಾವಜ್ಜೀವಂ ನಿವಸತಿ ವಿಸಹಮಾನೋ ಮಾನಸಂ ದುಃಖಮ್ ॥

ಅರ್ಥ:—ಕಂದರ್ಪ (ವಾದ್ಯಗಳನ್ನು ಬಾರಿಸುವ) ಕಿಲ್ಬಿಷಿಕ (ಚಾಂಡಾಲ ಸಮ) ಅಸುರವಾಹನ (ಅಶ್ವ ಇತ್ಯಾದಿ) ಮುಂತಾದ ದೇವ ದುರ್ಗತಿ ಜಾತಿಯಲ್ಲಿ ಹುಟ್ಟಿದ ಕನಿಷ್ಠ ಜೀವವು ಆಯುಷ್ಯದ ಸಮಾಪ್ತಿಯ ವರೆಗೂ ಮಾನಸಿಕ ದುಃಖವನ್ನು ಹೊಂದುತ್ತದೆ.

ಛಮ್ಮಾಸಾಊಸೇಸೇ ವತ್ಥಾಭರಣಾಇ ಹುಂತಿ ಮಲಿಣಾಈ ॥
ಣಾಊಣ ಚವಣಕಾಳಂ ಅಹಿಯಯರಂ ರುಯಇ ಸೋಗೇಣ ॥೧೯೪

ಷಣ್ಮಾಸಾಯುಃಶೇಷೇ ವಸ್ತ್ರಾಭರಣಾನಿ ಭವಂತಿ ಮಲಿನಾನಿ ॥
ಜ್ಞಾತ್ವಾ ಚವನಕಾಲಮಧಿಕತರಂ ರೋದಿತಿ ಶೋಕೇನ ॥

ಅರ್ಥ:—ಆಯುಷ್ಯವು ಆರುತಿಂಗಳ ಉಳಿದ ಮೇಲೆ ದೇವತೆಗಳ ಬಟ್ಟೆ ಮತ್ತು ಆಭರಣಗಳು ಮಲಿನವಾಗುತ್ತವೆ. ಹೀಗಾಗಲು ಜೀವವು ಇನ್ನು ಮೇಲೆ ಈ ಲೋಕವನ್ನು ಬಿಡುವ ಸಮಯವು ಸಮೀಪಿಸಿರುತ್ತದೆಂದು ತಿಳಿದು ಅಧಿಕವಾಗಿ ಶೋಕಮಾಡುತ್ತದೆ.

ಹಾ ಹಾ ಕಹಂ ಣಿಳೋಏ ಕಿಮಿಕುಲಭರಿಯಮ್ಮಿ ಅಇದುಗಂಧಮ್ಮಿ ॥
ಣವಮಾಸಂ ಪುಇರುಹಿರಾಉಲ್ಲಮ್ಮಿ ಗಬ್ಭಮ್ಮಿ ವಸಿಯವ್ವಂ ॥ ೧೯೫ ॥

ಹಾ ಹಾ ಕಥಂ ನೃಲೋಕೇ ಕೃಮಿಕುಲಭರಿತೇತಿದುರ್ಗಂಧೇ ॥
ನವಮಾಸಂ ಪೂಯರುಧಿರಾಕುಲೇ ಗರ್ಭೇ ವಸಿತವ್ಯಮ್ ॥

ಅರ್ಥ:—ಅಕಟಕಟಾ! ಮನುಷ್ಯಲೋಕದಲ್ಲಿ ಸಾವಿರಾರು ಹುಳುಗಳಿಂದ ತುಂಬಿದ ಅತಿದುರ್ಗಂಧ (ಮಲ, ಮೂತ್ರಾದಿ) ಯುಕ್ತವಾದ ಕೀವು ರಕ್ತಗಳುಳ್ಳ ತಾಯಿಯ ಗರ್ಭದಲ್ಲಿ ಒಂಭತ್ತು ತಿಂಗಳ ತನಕ ವಾಸಮಾಡುವ ಬಗೆ ಹ್ಯಾಗೆ? ಕಷ್ಟ ಕಷ್ಟ!!

ಕಿಂ ಕರಾಮಿ ಕಸ್ಸ ವಚ್ಚಾಮಿ ಕಸ್ಸ ಸಾಹೇಮಿ ಜಾಮಿ ಕಂ ಸರಣಂ ॥
ಣ ವಿ ಅತ್ಥಿ ಅತ್ಥ ವಂಧೂ ಜೋ ಮೇ ಧಾರೇಇ ಣಿವಡಂತಂ ॥ ೧೯೬

ಕಿಂ ಕರೋಮಿ ಕಸ್ಯ ವಚ್ಮಿ ಕಸ್ಯ ಸಾಧನಂ ಕರೋಮಿ ಯಾಮಿ ಕಂ ಶರಣಮ್ ॥
ನಾಪ್ಯಸ್ತ್ಯತ್ರ ಬಂಧುರ್ಯೋ ಮಾಂ ಧಾರಯತಿ ನಿಪತಂತಮ್ ॥

ಅರ್ಥ:—ಈಗ ಏನುಮಾಡಲಿ? ಯಾರಿಗೆ ಹೇಳಲಿ? ಯಾರನ್ನು ಸಹಾಯಕ್ಕೆ ಕರೆಯಲಿ? ಯಾರಿಗೆ ಶರಣಹೋಗಲಿ? ಈ ಸ್ವರ್ಗಲೋಕದಿಂದ ಕೆಳಗೆ ಬೀಳುವ ನನ್ನನ್ನು ಎತ್ತಿ ಹಿಡಿಯುವ ಬಾಂಧವರು ಯಾರೂ ಇಲ್ಲ. (ಹೀಗೆ ಶೋಕ ಮಾಡುತ್ತದೆ.)

ವಜ್ಜಾಉಹೋ ಮಹಪ್ಪಾ ಐರಾವಣವಾಹಣೋ ಸುರಿಂದೋ ವಿ ||
ಜಾವಂಜೀವಂ ಸೋ ಸೇವಿಓ ವಿ ಣ ಉದ್ಧರೇ ಮಂ ತಹವಿ || ೧೯೭ ||

ವಜ್ರಾಯುಧೋ ಮಹಾತ್ಮಾ ಐರಾವಣವಾಹನ: ಸುರೇಂದ್ರೋಽಪಿ ||
ಯಾವಜ್ಜೀವಂ ಸ ಸೇವಿತೋಽಪಿ ನೋದ್ಧರತಿ ಮಾಂ ತಥಾಪಿ ||

ಅರ್ಥ:—ವಜ್ರವೆಂಬ ಆಯುಧವುಳ್ಳ ಐರಾವತವೆಂಬ ವಾಹನವುಳ್ಳ ದೇವೇಂದ್ರನ ಸೇವೆಯನ್ನು ನಾನು ಜನ್ಮವಿರುವ ವರೆಗೂ ಮಾಡಿದಾಗ್ಯೂ ಆತನು ನನ್ನನ್ನು ಉದ್ಧರಿಸಲಿಕ್ಕೆ ಅಸಮರ್ಥನು.

ಜಇ ಮೇ ಹೋಈ ಮರಣಂ ತಾ ಹೋಜ್ಜಉ ಕಿಂ ತು ಮೇ ಸಮುಪ್ಪತ್ತೀ ||
ಏಗಿಂದಿಏಸು ಜಾಯಜ ಣೋ ಮಣುಸೇಸು ಕಇಯಾ ವಿ || ೧೯೮ ||

ಯದಿ ಮೇ ಭವತಿ ಮರಣಂ ತರ್ಹಿ ಭವತು ಕಿಂತು ಮೇ ಸಮುತ್ಪತ್ತಿ: ||
ಏಕೇಂದ್ರಿಯೇಷು ಜಾಯತಾಂ ನೋ ಮನುಷ್ಯೇಷು ಕದಾಪಿ ||

ಅರ್ಥ:—ಕದಾಚಿತ ನನಗೆ ಮರಣವು ಬಂದಾಗ್ಯೂ ಏಕೇಂದ್ರಿಯ ಯೋನಿಯಲ್ಲಿ ಜನ್ಮಬೇಡ. ಮನುಷ್ಯ ಜನ್ಮವೇ ನನಗೆ ಪ್ರಾಪ್ತವಾಗಲಿ.

ಅಹ ವಾ ಕಿಂ ಕುಣಇ ಪುರಾಜಿಯಮ್ಮಿ ಉದಯಾಗಯಮ್ಮಿ ಕಮ್ಮಮ್ಮಿ ||
ಸಕ್ಕೋ ವಿ ಜದೋ ಣ ತರಇ ಅಪ್ಪಾಣಂ ರಖ್ಖಿಉಂ ಕಾಳೇ || ೧೯೯ ||

ಅಥವಾ ಕಿಂ ಕರೋತಿ ಪುರಾರ್ಜಿತೇ ಉದಯಾಗತೇ ಕರ್ಮಣಿ ||
ಶಕ್ರೋಽಪಿ ಯತೋ ನ ತರತ್ಯಾತ್ಮಾನಂ ರಕ್ಷಿತುಂ ಕಾಲೇ ||

ಅರ್ಥ:—ಯಾರು ಬಂದು ಏನು ಮಾಡುವರು? ಪೂರ್ವಜನ್ಮದ ಕರ್ಮವು ಒದಗಿದ ಮೇಲೆ ದೇವೇಂದ್ರನು ಸಹ ರಕ್ಷಣ ಮಾಡಲಿಕ್ಕೆ ಅಸಮರ್ಥನಾಗುತ್ತಾನೆ.

ಏವಂ ವಹುಪ್ಪಯಾರಂ ಸರಣವಿರಹಿಓ ಖರಂ ವಿಳವಮಾಣೋ ||
ಏಇಂದಿಏಸು ಜಾಯಇ ಮರಿಊಣ ತಓ ವಿವಾಗೇಣ || ೨೦೦ ||

ಏವಂ ಬಹುಪ್ರಕಾರಂ ಶರಣವಿರಹಿತಃ ಖರಂ ವಿಲಪಮಾನ: ||
ಏಕೇಂದ್ರಿಯೇಷು ಜಾಯತೇ ಮೃತ್ವಾ ತತೋ ವಿಪಾಕೇನ ||

ಅರ್ಥ:—ಈ ಪ್ರಕಾರ ರಕ್ಷಕನಿಲ್ಲದ ಜೀವವು ಬಹು ವಿಲಾಪ ಮಾಡಿ ಮರಣ ಹೊಂದುತ್ತದೆ. ಪಾಪಕರ್ಮದ ಉದಯದಿಂದ ಅದು ವಿಕಲೇಂದ್ರಿಯ ಮುಂತಾದ ಯೋನಿಯಲ್ಲಿ ಜನಿಸುತ್ತದೆ.

ತತ್ಥ ವಿ ಅಣಾಂತಕಾಲಂ ಕಿಳಿಸ್ಸವಮಾಣೋ ಸಹಇ ವಹುದುಖ್ಖಂ ॥
ಮಿಚ್ಛತ್ತಸಂಸಯಮಇ ಜೀವೋ ಕಿಂ ಕಿಂ ದುಕ್ಖಂ ಣ ಪಾವಿಜಇ ॥ ೨೦೧ ॥

ತತ್ರಾಪ್ಯನಂತಕಾಲಂ ಕ್ಲಿಶ್ಯಮಾನಃ ಸಹತೇ ಬಹುದುಃಖಮ್ ॥
ಮಿಥ್ಯಾತ್ವಸಂಶಯಮತಿರ್ಜೀವಃ ಕಿಂ ಕಿಂ ದುಃಖಂ ನ ಪ್ರಾಪ್ನುಯಾತ್ ॥

ಅರ್ಥಃ—ವಿಕಲೇಂದ್ರಿಯ ಯೋನಿಯಲ್ಲಿ ಅನಂತಕಾಲದ ವರೆಗೆ ಬಹಳ ದು:ಖವನ್ನು ಭೋಗಿಸುತ್ತದೆ. ಮಿಥ್ಯಾತ್ವದಿಂದ ಯಾವ ಜೀವದ ಬುದ್ಧಿಯು ಸಂಶಯ ಗ್ರಸ್ತವಾಗಿರುತ್ತದೋ, ಆ ಜೀವವು ಯಾವ ಪ್ರಕಾರದ ದುಃಖಗಳನ್ನು ಭೋಗಿಸಲಿಕ್ಕಿಲ್ಲ? ಅಂದರೆ ಎಲ್ಲ ದು:ಖಗಳನ್ನು ಭೋಗಿಸುತ್ತದೆ.

ಪಿಚ್ಛಹ ದಿವ್ವೇ ಭೋಏ ಜೀವೋ ಭೋತ್ತೂಣ ದೇವಳೋಯಮ್ಮಿ ॥
ಏಇಂದಿಏಸು ಜಾಯಇ ಧಿಗತ್ಥು ಸಂಸಾರವಾಸಸ್ಸ ॥ ೨೦೨ ॥

ಪ್ರೇಕ್ಷಥ ದಿವ್ಯಾನ್‌ಭೋಗಾನ್ ಜೀವೋ ಭುಕ್ತ್ವಾ ದೇವಲೋಕೇ ॥
ಏಕೇಂದ್ರಿಯೇಷು ಜಾಯತೇ ಧಿಗಸ್ತು ಸಂಸಾರವಾಸಸ್ಯ ॥

ಅರ್ಥ:—ನೋಡಿರಿ, ಈ ಜೀವವು ದೇವಲೋಕದಲ್ಲಿ ದಿವ್ಯಭೋಗಗಳನ್ನು ಭೋಗಿಸಿ ಪುನ: ವಿಕಲೇಂದ್ರಿಯಲ್ಲಿ ಹುಟ್ಟುತ್ತದೆ. ಆದಕಾರಣ ಈ ಸಂಸಾರದಲ್ಲಿ ಜೀಎಸುವದಕ್ಕೆ ಧಿಕ್ಕಾರವಿರಲಿ!!

ಏವಂ ಬಹುಪ್ಪಯಾರಂ ದುಖ್ಖಂ ಸಂಸಾರಸಾಯರೇ ಘೋರೇ ॥
ಜೀವೋ ಸರಣವಿರಹಿಓ ವಿಸಣಸ್ಸ ಫಳೇಣ ಪಾಉಣಈ ॥ ೨೦೩ ॥

ಏವಂ ಬಹುಪ್ರಕಾರಂ ದುಃಖಂ ಸಂಸಾರಸಾಗರೇ ಘೋರೇ ॥
ಜೀವಃ ಶರಣವಿರಹಿತೋ ವ್ಯಸನಸ್ಯ ಫಲೇನ ಪ್ರಾಪ್ನೋತಿ ॥

ಅರ್ಥ:—ಈ ಜೀವವು ಯಾರೂ ಸಹಾಯರಿಲ್ಲದ ಸಂಸಾರದಲ್ಲಿ ಸಪ್ತವ್ಯಸನ ದಿಂದ ಅನೇಕ ತರದ ದು:ಖಗಳನ್ನು ಭೋಗಿಸುತ್ತದೆ. ಆದಕಾರಣ ಸಪ್ತವ್ಯಸನದ ನೆರಳಿಗೆ ಸಹ ಹೋಗದಿರುವದು ವಿವೇಕಿ ಮನುಷ್ಯನ ಕರ್ತವ್ಯವದೆ.

## ದರ್ಶನಪ್ರತಿಮೆ.

ಪಂಚುಂಬರಸಹಿಯಾಇಂ ಪರಿಹರಈ ಸತ್ತವಿಸಾಣಾಇಂ ॥
ಸಮ್ಮತ್ತವಿಸುದ್ಧಮಈ ಸೋ ದಂಸಣಸಾವಯೋ ಭಣಿಓ ॥ ೨೦೪ ॥

ಪಂಚೋದುಂಬರಸಹಿತಾನಿ ಪರಿಹರತಿ ಸಪ್ತವ್ಯಸನಾನಿ ॥
ಸಮ್ಯಕ್ತ್ವವಿಶುದ್ಧಮತಿಃ ಸ ದರ್ಶನಶ್ರಾವಕೋ ಭಣಿತಃ ॥

ಅರ್ಥ:—ಯಾವ ಪುರುಷನು ಅತ್ತಿ, ಆಲ, ಅರಳಿ, ಬಸರಿ, ಗೋಳಿ ಈ ಪಂಚ ಫಲಗಳನ್ನು ತಿನ್ನುವದಿಲ್ಲವೋ, ಮತ್ತು ಸಪ್ತವ್ಯಸನಗಳನ್ನು ಬಿಟ್ಟಿರುತ್ತಾನೋ, ಸಮ್ಯಕ್ತ್ವದಿಂದ ಬುದ್ಧಿಯು ಶುದ್ಧವಾಗಿರುತ್ತದೋ, ಅವನು ದರ್ಶನ ಪ್ರತಿಮಾಧಾರೀ ಶ್ರಾವಕನು. ಬೇರೆ ಗ್ರಂಥದಲ್ಲಿ ದರ್ಶನ ಪ್ರತಿಮಾಧಾರೀ ಬಗ್ಗೆ:—ಪಂಚೌದುಂಬರ, ಮಧು, ಮದ್ಯ, ಮಾಂಸ ಇವುಗಳನ್ನು ಬಿಡೋಣವು ಶ್ರಾವಕನ ಎಂಟು ಮೂಲ ಗುಣಗಳಿರುತ್ತವೆ. ಇವು ದರ್ಶನ ಪ್ರತಿಮಾಧಾರೀ ಗುಣಗಳು. ಮದ್ಯ, ಮಾಂಸ, ಮಧು ಇವುಗಳನ್ನು ಬಿಡೋಣವು ಸಪ್ತವ್ಯಸನತ್ಯಾಗದಿಂದಾಗುತ್ತದೆ. ಯಾವ ಹಣ್ಣಿನ ಗುರ್ತಿಲ್ಲವೋ, ಅದನ್ನು ತಿನ್ನುವದು ಪಂಚೌದುಂಬರತ್ಯಾಗದ ಅತಿಚಾರವು. ಸೋಸದಿದ್ದ ನೀರು ಕುಡಿಯುವದು, ಕೆಟ್ಟ ಮೊಸರು, ಮಜ್ಜಿಗೆ ತಿನ್ನುವದು ಮದ್ಯತ್ಯಾಗದ ಅತಿಚಾರವು, ಕೆಟ್ಟ ಅನ್ನ ತಿನ್ನುವದು, ಹೂವಿನಿಂದ ಕೂಡಿದ ಪಲ್ಲೆಯನ್ನು ತಿನ್ನುವದು, ಬಹು ದಿವಸ ಕೂಡಿಟ್ಟ ಬೆಣ್ಣೆಯನ್ನು ತಿನ್ನುವದು, ಕಂದಮೂಲ ತಿನ್ನುವದು, ಚರ್ಮದೊಳಗೆ ಹಾಕಿದ ನೀರು, ಎಣ್ಣಿ, ಇಂಗು, ತುಪ್ಪ ಮುಂತಾದ ಪದಾರ್ಥಗಳನ್ನು ತಿನ್ನುವದು ಮಾಂಸತ್ಯಾಗದ ಅತಿಚಾರವು. ರಸಭರಿತಹೂಗಳನ್ನು ನೆಕ್ಕುವದು ಮಧುತ್ಯಾಗದ ಅತಿಚಾರವು ಇರುತ್ತದೆ.

ಏವಂ ದಂಸಣಸಾವಯಠಾಣಂ ಪಢಮಂ ಸಮಾಸಓ ಭಣಿಯಂ ॥
ವಯಸಾವಯಗುಣಠಾಣಂ ಏದೋ ಬಿದಿಯಂ ಪವಖ್ಖಾಮಿ ॥ ೨೦೫ ॥

ಏವಂ ದರ್ಶನಶ್ರಾವಕಸ್ಥಾನಂ ಪ್ರಥಮಂ ಸಮಾಸತೋ ಭಣಿತಮ್ ॥
ವ್ರತಶ್ರಾವಕಗುಣಸ್ಥಾನಮಿತೋ ದ್ವಿತೀಯಂ ಪ್ರವಕ್ಷ್ಯಾಮಿ ॥

ಅರ್ಥ:—ಈ ಮೇರೆಗೆ ಸಂಕ್ಷೇಪದಿಂದ ಶ್ರಾವಕನ ದರ್ಶನ ಪ್ರತಿಮೆಯನ್ನು ಹೇಳಿದೆನು. ಮುಂದೆ ವ್ರತಿಕನ ಪ್ರತಿಮೆಯನ್ನು ಹೇಳುತ್ತೇನೆ.

## ವ್ರತಪ್ರತಿಮೆ.

ಪಂಚೇವ ಅಣುವ್ವಯಾಇ ಗುಣವ್ವಯಾಇಂ ಹೋಂತಿ ಪುಣ ತಿಣ್ಣಿ ॥
ಸಿಖ್ಖಾವಯಾಣಿ ಚತ್ತಾರಿ ಜಾಇಏ ಬಿದಿಯಮ್ಮಿ ಠಾಣಮ್ಮಿ ॥ ೨೦೬ ॥

ಪಂಚೈವಾಣುವ್ರತಾನಿ ಗುಣವ್ರತಾನಿ ಭವಂತಿ ಪುನಸ್ತ್ರೀಣಿ ॥
ಶಿಕ್ಷಾವ್ರತಾನಿ ಚತ್ವಾರಿ ಜಾಯಂತೇ ದ್ವಿತೀಯೇ ಸ್ಥಾನೇ ॥

ಅರ್ಥ:—ಐದು ಅಣುವ್ರತಗಳು, ಮೂರು ಗುಣವ್ರತಗಳು, ನಾಲ್ಕು ಶಿಕ್ಷಾವ್ರತಗಳು ಹೀಗೆ ಹನ್ನೆರಡು ವ್ರತಗಳನ್ನು ಅತಿಚಾರ ರಹಿತವಾಗಿ ಪಾಲಿಸುವವನು ಎರಡನೆಯ ಪ್ರತಿಮೆಯ ಶ್ರಾವಕನು.

## ಪಂಚ ಅಣುವ್ರತಗಳು.

ಪಾಣಾಇಪಾಯವಿರಈ ಸಚ್ಚಮದತ್ತಸ್ಸ ವಜ್ಜಣಂ ಚೇವ ||
ಥೂಳಯಡ ವಂಭಚೇರಂ ಇಚ್ಛಾಪಿ ಗಂಥಪರಿವಾಣಂ || ೨೦೭ ||

ಪ್ರಾಣಾತಿಪಾತವಿರತಿಃ ಸತ್ಯಮದತ್ತಸ್ಯ ವರ್ಜನಂ ಚೈವ ||
ಸ್ಥೂಲತಸ್ತು ಬ್ರಹ್ಮಚರ್ಯಮಿಚ್ಛಯಾ ಗ್ರಂಥಪರಿಮಾಣಮ್ ||

ಅರ್ಥಃ—ಸ್ಥೂಲ ಹಿಂಸೆಯನ್ನು ಮಾಡದಿರುವದು, ಸತ್ಯವಚನವನ್ನಾಡುವದು, ಕಳವು ಮಾಡದಿರುವದು, ಬ್ರಹ್ಮಚರ್ಯಪಾಲಿಸುವದು, ಮತ್ತು ತನ್ನ ಇಚ್ಛೆಯಂತೆ ಪರಿಗ್ರಹದ ಎಣಿಕೆಯನ್ನು ಮಾಡುವದು; ಇವು ಐದು ಅಣುವ್ರತಗಳು.

## ಸ್ಥೂಲ ಅಹಿಂಸಾವ್ರತವು.

ಜೇ ತಸಕಾಯಾ ಜೀವಾ ಪುವ್ವುದ್ದಿಠ್ಠಾ ಣ ಹಿಂಸಿಯವ್ವಾ ತೇ ||
ಏಇಂದಿಯಾ ವಿ ಣಿಕ್ಕಾರಣೇಣ ಪಢಮಂ ವಯಂ ಥೂಳಂ || ೨೦೮ ||

ಯೇ ತ್ರಸಕಾಯಾ ಜೀವಾಃ ಪೂರ್ವೋದ್ದಿಷ್ಟಾ ನ ಹಿಂಸಿತವ್ಯಾಸ್ತೇ ||
ಏಕೇಂದ್ರಿಯಾಣ್ಯಪಿ ನಿಷ್ಕಾರಣೇನ ಪ್ರಥಮಂ ವ್ರತಂ ಸ್ಥೂಲಮ್ ||

ಅರ್ಥಃ—ಮೊದಲು ಹೇಳಿರುವ ತ್ರಸಕಾಯ (ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಪಂಚೇಂದ್ರಿಯ) ಜೀವಗಳ ಹಿಂಸೆಯನ್ನೂ, ಕಾರಣವಿಲ್ಲದೆ ಏಕೇಂದ್ರಿಯ ಜೀವಗಳ ಹಿಂಸೆಯನ್ನೂ ಮಾಡದಿರುವದು ಸ್ಥೂಲ ಅಹಿಂಸೆ ಎಂಬ ಮೊದಲನೆಯ ಅಣುವ್ರತವು.

## ಸ್ಥೂಲ ಸತ್ಯವ್ರತವು.

ಅಳಿಯಂ ಣ ಜಂಪಣೀಯಂ ಪಾಣಿವಹಕರಂ ತು ಸಚ್ಚವಯಣಂ ಪಿ ||
ರಾಯೇಣ ಯ ದೋಸೇಣ ಯ ಣೇಯಂ ಬಿದಿಯಂ ವಯಂ ಥೂಳಂ || ೨೦೯

ಅಲೀಕಂ ನ ಜಲ್ಪನೀಯಂ ಪ್ರಾಣಿವಧಕರಂ ತು ಸತ್ಯವಚನಮಪಿ ||
ರಾಗೇಣ ಚ ದ್ವೇಷೇಣ ಚ ಜ್ಞೇಯಂ ದ್ವಿತೀಯಂ ವ್ರತಂ ಸ್ಥೂಲಮ್ ||

ಅರ್ಥ:—ಲೋಭದಿಂದಾಗಲಿ, ದ್ವೇಷದಿಂದಾಗಲಿ ಅಸತ್ಯನುಡಿಗನ್ನಾಡದಿರುವದು ಮತ್ತು ಯಾವ ನುಡಿಗಳಿಂದ ಅನ್ಯ ಜೀವಿಗಳ ಕೊಲೆ ಹಾಗು ಅನ್ಯಜೀವಿಗಳಿಗೆ ಪೀಡೆಯಾಗುವದೋ, ಅಂಥ ಸತ್ಯ ಭಾಷಣವನ್ನಾದರೂ ಆಡದಿರುವದು ೨ನೆಯ ಸ್ಥೂಲಸತ್ಯ ಅಣುವ್ರತವು.

## ಸ್ಥೂಲ ಅಚೌರ್ಯವ್ರತವು.

ಪುರಗಾಮಪಟ್ಟಣಾಇಸು ಪಡಿಯಂ ಣಠ್ಠಂ ಚ ಣಿಹಿಯವೀಸರಿಯಂ ||
ಪರದವ್ವಮಘಿಣ್ಹಂತಸ್ಸ ಹೋಯ ಥೂಳವಯಂ ತಿದಿಯಂ || ೨೧೦ ||

ಪುರಗ್ರಾಮಪತ್ತನಾದಿಷು ಪತಿತಂ ನಷ್ಟಂ ಚ ನಿಹಿತಂ ವಿಸ್ಮೃತಮ್ ||
ಪರದ್ರವ್ಯಮಗೃಹ್ಣತೋ ಭವತಿ ಸ್ಥೂಲವ್ರತಂ ತೃತೀಯಮ್ ||

ಅರ್ಥ:—ನಗರು, ಊರು, ಪಟ್ಟಣ, ತೋಟ, ಅರಣ್ಯ ಮುಂತಾದ ಸ್ಥಳಗಳಲ್ಲಿ ಬಿದ್ದಂಥ, ಹೋದಂಥ, ಮರೆತಂಥ ಅಥವಾ ಹುಗಿದಂಥ ಪರರ ದವ್ಯಗಳನ್ನು ಕೈಯತ್ತಿ ಕೊಟ್ಟ ಹೊರ್ತು ತಕ್ಕೊಳ್ಳದಿರುವದು ೩ನೆಯ ಸ್ಥೂಲ ಅಚೌರ್ಯವ್ರತವು.

## ಸ್ಥೂಲ ಬ್ರಮ್ಹಚರ್ಯವ್ರತವು.

ಪವ್ವೇಸು ಇತ್ಥಿಸೇವಾ ಅಣಂಗಕೀಡಾ ಸಯಾ ವಿವಜ್ಜಂತೋ ||
ಥೂಳಯಡ ವಂಭಯಾರೀ ಜಿಣೇಹಿ ಭಣಿಓ ಪವಯಣಮ್ಮಿ || ೨೧೧ ||

ಪರ್ವಸು ಸ್ತ್ರೀಸೇವಾಮನಂಗಕ್ರೀಡಾಂ ಸದಾ ವಿವರ್ಜಯನ್ ||
ಸ್ಥೂಲತಯಾ ಬ್ರಮ್ಹಚಾರೀ ಜಿನೈರ್ಭಣಿತಃ ಪ್ರವಚನೇ ||

ಅರ್ಥ:—ಅಷ್ಟಮಿ ಚತುರ್ದಶೀ ಮುಂತಾದ ಪರ್ವಕಾಲದಲ್ಲಿ ಸ್ವಸ್ತ್ರೀ ಸಂಗವನ್ನು ವರ್ಜಿಸುವದೂ, ಪರಸ್ತ್ರೀ ಮತ್ತು ಅನಂಗಕ್ರೀಡೆ (ಕಾಮಸೇವನೆಯ ಸ್ಥಳದ ಹೊರ್ತು ಬೇರೆ ಸ್ಥಳದಲ್ಲಿ ಕಾಮಸೇವೆ) ಮಾಡದಿರುವದು ಸ್ಥೂಲಬ್ರಮ್ಹಚರ್ಯವೆಂದು ಶ್ರೀ ಜಿನೇಶ್ವರರು ತಮ್ಮ ಉಪದೇಶದಲ್ಲಿ ಹೇಳಿರುತ್ತಾರೆ. ಇದೇ ೪ನೆಯ ಅಣುವ್ರತವು.

## ಸ್ಥೂಲ ಪರಿಗ್ರಹಪ್ರಮಾಣವು.

ಜಂ ಪರಿಮಾಣಂ ಕೀರಇ ಧಣಧಾಣ್ಣಹಿರಣ್ಣಕಂಚಣಾಈಣಂ ||
ತಂ ಜಾಣ ಪಂಚಮವಯಂ ಣಿದ್ದಿಠ್ಠಮುವಾಸಯಜ್ಝಯಣೇ || ೨೧೨

ಯತ್ಪರಿಮಾಣಂ ಕ್ರಿಯತೇ ಧನಧಾನ್ಯಹಿರಣ್ಯಕಾಂಚನಾದೀನಾಮ್ ||
ತಜ್ಜಾನೀಹಿ ಪಂಚಮವ್ರತಂ ನಿರ್ದಿಷ್ಟಮುಪಾಸಕಾಧ್ಯಯನೇ ||

ಅರ್ಥ:—ಧನ, ಧಾನ್ಯ, ರತ್ನ, ಬಂಗಾರ, ಹೊಲ, ಮನೆ, ದಾಸ, ದಾಸಿ, ವಾಹನ, ವಸ್ತ್ರ, ಭಾಂಡ ಮುಂತಾದ ಪರಿಗ್ರಹಗಳನ್ನು ಇಂತಿಷ್ಟೆಂದು ಪ್ರಮಾಣಿಸಿಕೊಳ್ಳುವದು ೫ನೆಯ ಅಣುವ್ರತವೆಂದು ಉಪಾಸಕಾಧ್ಯಾಯನದಲ್ಲಿ ಶ್ರೀ ಜಿನೇಶ್ವರರು ಹೇಳಿರುತ್ತಾರೆ.

# ಮೂರು ಗುಣವ್ರತಗಳು.

ಪುವ್ವುತ್ತರದಕ್ಖಿಣಪಚ್ಛಿಮಾಸು ಕಾಊಣ ಜೋಯಣಪಮಾಣಂ ||
ಪರದೋ ಗಮಣಣಿಯತ್ತೀ ದಿಸಿಗುಣವಯಂ ಪಢಮಂ || ೨೧೩ ||

ಪೂರ್ವೋತ್ತರದಕ್ಷಿಣಪಶ್ಚಿಮಾಸು ಕೃತ್ವಾ ಯೋಜನಪ್ರಮಾಣಮ್ ||
ಪರತೋ ಗಮನನಿವೃತ್ತಿರ್ದಿಗ್ಗುಣವ್ರತಂ ಪ್ರಥಮಮ್ ||

ಅರ್ಥ:—ಪೂರ್ವ, ಉತ್ತರ, ದಕ್ಷಿಣ, ಪಶ್ಚಿಮ ಈ ನಾಲು ದಿಕ್ಕುಗಳಲ್ಲಿ ಮತ್ತು ಈಶಾನ್ಯ, ಆಗ್ನೇಯ, ನೈಋತ್ಯ, ವಾಯುವ್ಯ ಈ ನಾಲ್ಕು ಉಪದಿಕ್ಕುಗಳಲ್ಲಿ ಇಷ್ಟು ಯೋಜನ (ಹರದಾರಿ) ದಾಟಿ ಮುಂದೆ ಹೋಗುವದಿಲ್ಲವೆಂದು ಮಾಡಿದ ಪ್ರತಿಜ್ಞೆಯು ೧ನೆಯ ದಿಗ್ವ್ರತವೆಂಬ ಗುಣವ್ರತವು.

ವಯಭಂಗಕಾರಣಂ ಹೋಇ ಜಮ್ಮಿ ದೇಸಮ್ಮಿ ತತ್ಥ ಣಿಯಮೇಣ ||
ಕೀರಇ ಗಮಣಣಿಯತ್ತೀ ತಂ ಜಾಣ ಗುಣವ್ವಯಂ ಬಿದಿಯಂ || ೨೧೪

ವ್ರತಭಂಗಕಾರಣಂ ಭವತಿ ಯಸ್ಮಿನ್ದೇಶೇ ತತ್ರ ನಿಯಮೇನ ||
ಕ್ರಿಯತೇ ಗಮನನಿವೃತ್ತಿಸ್ತಜ್ಜಾನೀಹಿ ಗುಣವ್ರತಂ ದ್ವಿತೀಯಮ್ ||

ಅರ್ಥ:—ಯಾವ ದೇಶದಲ್ಲಿ ಪ್ರವಾಸ ಮಾಡಿದರೆ ವ್ರತಭಂಗವಾಗುವ ಕಾರಣಗಳು ಉತ್ಪನ್ನವಾಗುವವೋ, ಆ ದೇಶದಲ್ಲಿ ಹೋಗುವದಿಲ್ಲೆಂದು ಮಾಡಿದ ಪ್ರತಿಜ್ಞೆಯು ೨ನೆಯ ದೇಶವ್ರತವೆಂಬ ಗುಣವ್ರತವು. (ಜೈನಧರ್ಮದ ಜನರು ಇಲ್ಲದಂಥ ಸ್ಥಳದಲ್ಲಿಯಾಗಲಿ, ತನ್ನ ಯಾವ ವ್ರತವಾದರೂ ಭಂಗವಾಗುವ ಸಂಭವವಿದ್ದ ಸ್ಥಳದಲ್ಲಿಯಾಗಲಿ ಹೋಗದಿರುವದೇ ದೇಶವ್ರತವು.)

ಅಯದಂಡಪಾಸವಿಕ್ಕಯು ಕೂಡತುಳಾಮಾಣಕೂರಸತ್ತಾಣಂ ||
ಜಂ ಸಂಗಹೋ ಣ ಕೀರಇ ತಂ ಜಾಣ ಗುಣವ್ವಯಂ ತಿದಿಯಂ || ೨೧೫ ||

ಅಯೋದಂಡಪಾಶವಿಕ್ರಯಃ ಕೂಟತುಲಾಮಾನಕ್ರೂರಸತ್ತ್ವಾನಾಮ್ ||
ಯಃ ಸಂಗ್ರಹೋ ನ ಕ್ರಿಯತೇ ತಂ ಜಾನೀಹಿ ಗುಣವ್ರತಂ ತೃತೀಯಮ್ ||

ಅರ್ಥ:—ಕಬ್ಬಿಣ, ಕೋಲು, ಹಗ್ಗ ಮುಂತಾದ ಕೊಲೆಸಾಧನವಾದ ಪದಾರ್ಥಗಳನ್ನು ಮಾರಾಟ ಮಾಡದಿರುವದು, ಖೊಟ್ಟಿತಕ್ಕಡಿ, ಖೊಟ್ಟಿಮಾನ, ಖೊಟ್ಟಿಮಾಪುಗಳನ್ನು ಉಪಯೋಗ ಮಾಡದಿರುವದು, ಕ್ರೂರ ಪಶುಗಳನ್ನು ಸಾಕದಿರುವದು ಅನರ್ಥದಂಡತ್ಯಾಗವೆಂಬ ೩ನೆಯ ಗುಣವ್ರತವು. ಈ ಅನರ್ಥದಂಡದಲ್ಲಿ ಐದು ಪ್ರಕಾರವುಂಟು:— ಅಪಧ್ಯಾನ, ಹಿಂಸಾದಾನ, ಪ್ರಮಾದಚರ್ಯೆ, ಪಾಪೋಪದೇಶ ಮತ್ತು ದುಃಶ್ರುತಿ ಈ ಐದು ಅನರ್ಥದಂಡದ ಭೇದಗಳು. ದ್ವೇಷದಿಂದ

ಎರೆಡನೆಯುವರಿಗೆ ಕೇಡಾಗಲೆಂದು ಬಯಿಸುವದೂ, ಲೋಭದಿಂದ ಪರಸ್ತ್ರೀ ಅಥವಾ ಸಂಪತ್ತು ದೊರೆಯಬೇಕೆಂದು ಇಚ್ಛಿಸುವದೂ ಅಪಧ್ಯಾನವೆನಿಸುತ್ತದೆ; ಕತ್ತಿ, ಕೊಡ್ಲಿ ಮುಂತಾದ ಶಸ್ತ್ರಗಳನ್ನು ಎರಡನೆಯುವರಿಗೆ ಕೊಡುವದು ಹಿಂಸಾದಾನವೆನಿಸುವದು; ಕಾರಣವಿಲ್ಲದೆ ಗಿಡ ಅಥವಾ ಗಿಡದ ಎಲೆ, ಟೊಂಕೆಗಳನ್ನು ಕಡಿಯುವದೂ, ಭೂಮಿಯನ್ನು ಅಗಿಯುವದೂ, ಬೆಂಗೆಯನ್ನು ಹೊತ್ತಿಸುವದೂ, ವಿಚಾರಮಾಡದೆ ಪದಾರ್ಥಗಳನ್ನು ಎತ್ತಾಡುವದೂ ಮುಂತಾದ ಕೃತ್ಯಗಳಿಗೆ ಪ್ರಮಾದಚರ್ಯವೆನ್ನುವರು; ಪಾಪಕೃತ್ಯಗಳನ್ನು ಮಾಡಲಿಕ್ಕೆ ಉಪದೇಶ ಮಾಡುವದು ಅಂದರೆ ಬೆಂಕಿ ಹಚ್ಚುವದು, ಕಾಳು ಬೀಸುವದು, ವನಸ್ಪತಿಗಳನ್ನು ಕಡಿಯುವದು, ಕೊಲೆ, ಹುಸಿ, ಕಳವು, ಬೇಟೆ ಮುಂತಾದ ಪಾಪಕೃತ್ಯಗಳನ್ನು ಕಲಿಸುವದಕ್ಕೆ ಪಾಪೋಪದೇಶವೆನ್ನುವರು; ಬೀಭತ್ಸ, ಶೃಂಗಾರ, ಯುದ್ಧ ಮುಂತಾದವುಗಳ ಸಂಬಂಧದ ಮಾತುಗಳನ್ನೂ ಪಾಪವನ್ನುಂಟುಮಾಡುವಂಥ ಮಾತುಗಳನ್ನೂ ಆಡುವದಕ್ಕೆ ದು:ಶ್ರುತಿಯನ್ನುವರು. ಈ ಐದುಪ್ರಕಾರದ ಅನರ್ಥದಂಡಗಳನ್ನು ಬಿಡುವದು ೩ನೆಯ ಗುಣವ್ರತವು.

## ನಾಲ್ಕು ಶಿಕ್ಷಾವ್ರತಗಳು.

ಜಂ ಪರಿಮಾಣಂ ಕೀರಇ ಮಂಡಣತಂಬೋಳಗಂಧಪುಪ್ಫಾಣಂ ॥
ತಂ ಭೋಯವಿರಇ ಭಣಿಯಂ ಪಢಮಂ ಸಿಕ್ಖಾವಯಂ ಸುತ್ತೇ ॥ ೨೧೬

ಯತ್ಪರಿಮಾಣಂ ಕ್ರಿಯತೇ ಮಂಡನತಾಂಬೂಲಗಂಧಪುಷ್ಪಾಣಾಮ್ ॥
ತದ್ಭೋಗವಿರತಿರ್ಭಣಿತಂ ಪ್ರಥಮಂ ಶಿಕ್ಷಾವ್ರತಂ ಸೂತ್ರೇ ॥

ಅರ್ಥ:— ದೇಹವನ್ನು ಅಲಂಕರಿಸುವ ಪದಾರ್ಥಗಳನ್ನೂ, ತಾಂಬೂಲ, ಸುಗಂಧ, ಪುಷ್ಪ ಮುಂತಾದ ಭೋಗ್ಯ ( ಒಂದಾವರ್ತಿ ಉಪಯೋಗಿಸಿ ಬಿಡುವಂಥ ) ಪದಾರ್ಥಗಳನ್ನೂ ಕಾಲಮರ್ಯಾದೆಯಿಂದ ಬಿಟ್ಟುಬಿಡುವದು ಭೋಗವಿರತಿ ಎಂಬ ೧ ನೆಯ ಶಿಕ್ಷಾವ್ರತವು. ಹೀಗೆ ಸೂತ್ರದಲ್ಲಿ ಹೇಳಿರುತ್ತದೆ.

ಸಗಸತ್ತೀಏ ಮಹಿಲಾವತ್ಥಾಹರಣಾಣ ಜಂ ತು ಪರಿಮಾಣಂ ॥
ತಂ ಪರಿಭೋಯಣಿವುತ್ತೀ ಬಿದಿಯಂ ಸಿಕ್ಖಾವಯಂ ಜಾಣೇ ॥ ೨೧೭ ॥

ಸ್ವಶಕ್ತ್ಯಾ ಮಹಿಲಾವಸ್ತ್ರಾಭರಣಾನಾಂ ಯತ್ತು ಪರಿಮಾಣಮ್ ॥
ತತ್ಪರಿಭೋಗನಿವೃತ್ತಿರ್ದ್ವಿತೀಯಂ ಶಿಕ್ಷಾವ್ರತಂ ಜಾನೀಹಿ ॥

ಅರ್ಥಃ—ಸ್ತ್ರೀ, ವಸ್ತ್ರ, ಅಲಂಕಾರ ಮುಂತಾದ ಉಪಭೋಗ್ಯ ( ಅನೇಕಾವರ್ತಿ ಉಪಯೋಗಿಸುವ ) ಪದಾರ್ಥಗಳನ್ನು ಕಾಲಾವಧಿಯಿಂದ ತ್ಯಜಿಸುವದು ೨ ನೆಯ ಶಿಕ್ಷಾವ್ರತವೆಂದು ತಿಳಿಯಬೇಕು.

ಅತಿಹಿಸ್ಸ ಸಂವಿಭಾಗೋ ತಿದಿಯಂ ಸಿಕ್ಖಾವಯಂ ಮುಣೇಯವ್ವಂ ||
ತತ್ಥ ವಿ ಪಂಚಾಹಿಯಾರಾ ಣೇಯಾ ಸುತ್ತಾಣುಮಗ್ಗೇಣ || ೧೨೮ ||

ಅತಿಥೇಃ ಸಂವಿಭಾಗಸ್ತೃತೀಯಂ ಶಿಕ್ಷಾವ್ರತಂ ಜ್ಞಾತವ್ಯಮ್ ||
ತತ್ರಾಪಿ ಪಂಚಾಧಿಕಾರಾ ಜ್ಞೇಯಾಃ ಸೂತ್ರಾನುಮಾರ್ಗೇಣ ||

ಅರ್ಥ:—ಅತಿಥಿ ಅಂದರೆ ಎಲ್ಲರಲ್ಲಿಯೂ ಸಮತಾಭಾವವುಳ್ಳವನು, ಅರ್ಥದಲ್ಲಿ ದಿಗಂಬರ ಮುನಿಯು. ಈ ಅತಿಥಿಗೆ ನಿತ್ಯದಲ್ಲಿ ಆಹಾರದಾನ ಕೊಟ್ಟು ಬಳಿಕ ತಾನು ಭೋಜನಮಾಡುವದು; ಇದಕ್ಕೆ ೩ ನೆಯ ಅತಿಥಿಸಂವಿಭಾಗಶಿಕ್ಷಾವ್ರತವೆಂಬ ಹೆಸರು. ಈ ಅತಿಥಿಸಂವಿಭಾಗದಲ್ಲಿ ಐದು ಭೇದಗಳುಂಟು. ಅವು ಉಪಾಸಕಾಧ್ಯಾಯನದ ಸೂತ್ರಕ್ಕೆ ಸರಿಯಾಗಿರುತ್ತವೆಂದು ತಿಳಿಯಬೇಕು.

ಪತ್ತಂತರ ದಾದಾರೋ ದಾಣವಿಹಾಣಂ ತಹೇವ ದಾಯವ್ವಂ ||
ದಾಣಸ್ಸ ಫಳಂ ಣೇಯಾ ಪಂಚಹಿಯಾರಾ ಕಮೇಣೇದೇ || ೨೧೯ ||

ಪಾತ್ರಾಂತರಂ ದಾತಾರೋ ದಾನವಿಧಾನಂ ತಥೈವ ದಾತವ್ಯಮ್ ||
ದಾನಸ್ಯ ಫಲಂ ಜ್ಞೇಯಾಃ ಪಂಚಾಧಿಕಾರಾಃ ಕ್ರಮೇಣೈತೇ ||

ಅರ್ಥ:—ಪಾತ್ರಗಳ ಮರ್ಯಾದೆ ( ಉತ್ತಮ, ಮಧ್ಯಮ, ಜಘನ್ಯ ) ದಾತಾ, ದಾನವಿದಿ, ದಾತವ್ಯ ( ಕೊಡಲಿಕ್ಕೆ ಯೋಗ್ಯವಾದ ಪದಾರ್ಥ ) ಮತ್ತು ದಾನಫಲವು ಈ ೫ ಅಧಿಕಾರಗಳು ( ಅತಿಥಿಸಂವಿಭಾಗದವೆಂದು ) ಕ್ರಮದಿಂದ ತಿಳಿಯಬೇಕು.

## ಪಾತ್ರಾಂತರವು.

ತಿವಿಹಂ ಮುಣೇಹ ಪತ್ತಂ ಉತ್ತಮಮಜ್ಝಮಜಹಣ್ಣಭೇಏಣ ||
ವಯಣಿಯಮಸಂಜಮಧರೋ ಉತ್ತಮಪತ್ತಂ ಹವೇ ಸಾಹೂ || ೨೨೦

ತ್ರಿವಿಧಂ ಮನ್ಯಧ್ವಂ ಪಾತ್ರಮುತ್ತಮಮಧ್ಯಮಜಘನ್ಯಭೇದೇನ ||
ವ್ರತನಿಯಮಸಂಯಮಧರ ಉತ್ತಮಪಾತ್ರಂ ಭವೇತ್ಸಾಧುಃ ||

ಅರ್ಥಃ—ಉತ್ತಮ, ಮಧ್ಯಮ ಮತ್ತು ಜಘನ್ಯ ಹೀಗೆ ಪಾತ್ರದಲ್ಲಿ ಮೂರು ಭೇದಗಳುಂಟು. ಇದರಲ್ಲಿ ಹಿಂಸೆ ಮುಂತಾದ ಐದು ಮಹಾವ್ರತಗಳನ್ನು ಪಾಲಿಸುವವನೂ, ಆಹಾರದ ನಿಯಮನ್ನು ಮಾಡಿದವನೂ ಸಂಯಮವನ್ನು ಪಾಲಿಸುವವನೂ ಆದ ದಿಗಂಬರ ಮುನಿಯು ಉತ್ತಮ ಪಾತ್ರ ( ಶ್ರೇಷ್ಠ )ನು.

ಏಯಾರಸಠಾಣಠಿಯಾ ಮಜ್ಝಿಮಪತ್ತಂ ಸುಸಾವಯಾ ಭಣಿಯಾ ||
ಅವಿರಯಸಮ್ಮಾಇಟ್ಠೀ ಜಹಣ್ಣಪತ್ತಂ ಮುಣೇಯವ್ವಂ || ೨೨೧ ||

ಏಕಾದಶಸ್ಥಾನಸ್ಥಿತಾ ಮಧ್ಯಮಪಾತ್ರಂ ಸುಶ್ರಾವಕಾ ಭಣಿತಾಃ ||
ಅವಿರತಸಮ್ಯಗ್ದೃಷ್ಟಿರ್ಜಘನ್ಯಪಾತ್ರಂ ಮಂತವ್ಯಮ್ ||

ಅರ್ಥ:—ಹನ್ನೊಂದು ಪ್ರತಿಮೆಗಳನ್ನು ಪಾಲಿಸುವ ಶ್ರಾವಕರು ಮಧ್ಯಮ ಪಾತ್ರರೆಂದು ಹೇಳಿರುತ್ತದೆ. ಮತ್ತು ವ್ರತಹೀನರಾದ ಸಮ್ಯಗ್ದೃಷ್ಟಿಗಳು ಕನಿಷ್ಠ ಪಾತ್ರರೆಂದು ತಿಳಿಯಬೇಕು.

ವಯತವಸೀಳಸಮುಗ್ಗೋ ಸಮ್ಮತ್ತವಿವಜ್ಜಿಓ ಕುಪತ್ತಂ ತು ||
ಸಮ್ಮತ್ತಸೀಳವಯವಜ್ಜಿಓ ಅಪತ್ತಂ ಜೋ ಹವೇ ಣಿಯಮಾ || ೨೨೨

ವ್ರತತಪಃಶೀಲಸಮಗ್ರಃ ಸಮ್ಯಕ್ತ್ವವಿವರ್ಜಿತಃ ಕುಪಾತ್ರಂ ತು ||
ಸಮ್ಯಕ್ತ್ವಶೀಲವ್ರತವರ್ಜಿತೋಽಪಾತ್ರಂ ಯದ್ಭವೇನ್ನಿಯಮಾತ್ ||

ಅರ್ಥ:—ವ್ರತ, ತಪಸ್ಸು, ಶೀಲ ಇವುಗಳಿಂದ ಯುಕ್ತನಿದ್ದರೂ ಸಮ್ಯಕ್ತ್ವವು ಇಲ್ಲದೆ ಹೋದರೆ, ಅವನು ಕುಪಾತ್ರನೆಂದು ತಿಳಿಯಬೇಕು. ಸಮ್ಯಕ್ತ್ವ, ಶೀಲ ಮತ್ತು ವ್ರತ ಇವು ಇಲ್ಲದವನು ನಿಜವಾಗಿ ದಾನಕ್ಕೆ ಪಾತ್ರನಲ್ಲ.

## ದಾತಾ ( ದಾನ ಕೊಡುವದಕ್ಕೆ ಯೋಗ್ಯನು. )

ಸದ್ಧಾ ಭಗತೀ ತುಟ್ಠೀ ವಿಣ್ಣಾಣಮಲುದ್ಧಯಾ ಖಮಾ ಸತ್ತೀ ||
ಜತ್ಥೇದೇ ಸತ್ತಗುಣಾ ತಂ ದಾಯಾರಂ ಪಸಂಸಂತಿ || ೨೨೩ ||

ಶ್ರದ್ಧಾ ಭಕ್ತಿಸ್ತುಷ್ಟಿರ್ವಿಜ್ಞಾನಮಲುಬ್ಧತಾ ಕ್ಷಮಾ ಶಕ್ತಿಃ ||
ಯತ್ರೈತೇ ಸಪ್ತಗುಣಾಸ್ತಂ ದಾತಾರಂ ಪ್ರಶಂಸಂತಿ ||

ಅರ್ಥ:—ಶ್ರದ್ಧೆ, ಭಕ್ತಿ, ಸಂತೋಷ, ವಿಜ್ಞಾನ, ನಿರ್ಲೋಭತೆ, ಕ್ಷಮೆ ಮತ್ತು ಶಕ್ತಿ ಈ ಏಳು ಗುಣಗಳು ಯಾವನಲ್ಲಿ ಇರುತ್ತವೋ, ಅವನೇ ಉತ್ತಮನಾದ ದಾನವಂತನು. ಈ ಪಾತ್ರಕ್ಕೆ ದಾನ ಮಾಡಿದರೆ ಧರ್ಮವೃದ್ಧಿಯಾಗುವದೆಂದು ಮಾಡಿದ ಮನಸ್ಸಿನ ದೃಢನಿಶ್ಚಯವು ಶ್ರದ್ಧೆ ಎನಿಸುತ್ತದೆ; ಈ ಪಾತ್ರವು ಪೂಜ್ಯವಾದದ್ದೆಂದು ಭಾವಿಸುವದು ಭಕ್ತಿಯು; ಪಾತ್ರವನ್ನು ಕಂಡು ಆನಂದಭರಿತವಾಗುವದು ಸಂತೋಷವು; ಯಾವ ಪಾತ್ರಕ್ಕೆ ಯಾವ ಸಮಯದಲ್ಲಿ ಯಾವ ರೀತಿಯಿಂದ ಆಹಾರವನ್ನು ಕೊಡಬೇಕೆಂಬ ಜ್ಞಾನವು ವಿಜ್ಞಾನವು; ಪಾತ್ರಕ್ಕೆ ದಾನಕೊಟ್ಟು, ಧರ್ಮವೃದ್ಧಿಯ ಹೊರ್ತು ಎರಡನೇ ಲಾಭದ ಇಚ್ಛೆಯನ್ನು ಮಾಡದಿರುವದು ನಿರ್ಲೋಭತೆಯು; ದಾನ ಕೊಡುವಾಗ್ಗೆ ಎರಡನೇ ಅಪರಾಧಗಳನ್ನು ತಡಿಯುವದು ಕ್ಷಮೆ; ಶಕ್ತಿಯನ್ನು ಅಡಿಗಿಸದೆ ದಾನಕೊಡುವದು ಶಕ್ತಿಯು.

ಪಡಿಗಹಣಮುಚ್ಚಟ್ಠಾಣಂ ಪಾದೋದಯಮಚ್ಚಣಂ ಚ ಪಣಮಂ ಚ ||
ಮಣವಯಣಕಾಯಸುದ್ಧೀ ಏಸಣಸುದ್ಧೀ ಯ ಣವವಿಹಂ ಪುಣ್ಣಂ || ೨೨೪

ಪ್ರತಿಗ್ರಹಣಮುಚ್ಚಸ್ಥಾನಂ ಪಾದೋದಕಮರ್ಚನಂ ಚ ಪ್ರಣಾಮಶ್ಚ ||
ಮನೋವಚನಕಾಯಶುದ್ಧಿರೇಷಣಶುದ್ಧಿಶ್ಚ ನವವಿಧಂ ಪುಣ್ಯಮ್ ||

ಅರ್ಥ:—ಮುನಿಗಳು ತನ್ನ ಮನೆಗೆ ಬರಲು ವಿನಯದಿಂದ ಅವರ ಸನ್ಮುಖ ಹೋಗಿ ಅವರ ಉಪಚಾರ ಮಾಡುವದು, ಉಚ್ಚವಾದ ಆಸನವನ್ನು ಕೊಡುವದು, ಪಾದಪ್ರಕ್ಷಾಲನೆಯನ್ನು ಮಾಡುವದು, ವಂದನೆಯನ್ನು ಮಾಡುವದು, ತ್ರಿಕರಣ ಶುದ್ಧವಾಗಿಡುವದು, ಮತ್ತು ಶುದ್ಧವಾದ ಆಹಾರ ಕೊಡುವದು ಈ ಒಂಭತ್ತು ಪ್ರಕಾರದ ಭಕ್ತಿಯು ಪುಣ್ಯವನ್ನು ಕೊಡುತ್ತದೆ.

ಪತ್ತಂ ಣಿಯಘರದಾರೇ ದಟ್ಠೂಣಣ್ಣಿಚ್ಛ ವಾ ವಿಮಗ್ಗಿತ್ತಾ ||
ಪಡಿಗಹಣಂ ಕಾಯವ್ವಂ ಣಮೋತ್ಥು ಠಾಹುತ್ತಿ ಭಣಿಊಣ || ೨೨೫ ||

ಪಾತ್ರಂ ನಿಜಗೃಹದ್ವಾರೇ ದೃಷ್ಟ್ವಾನ್ಯತ್ರಾಪಿ ಮಾರ್ಗಯಿತ್ವಾ ||
ಪ್ರತಿಗ್ರಹಣಂ ಕರ್ತವ್ಯಂ ನಮೋಸ್ತು ತಿಷ್ಠ ತಿಷ್ಠೇತಿ ಭಣಿತ್ವಾ ||

ಣೇತ್ತೂಣ ಣಿಯಯಗೇಹಂ ಣಿಖಜ್ಜಾಣು ತಹ ಉಚ್ಚಟ್ಠಾಣಮ್ಮಿ ||
ಠವಿಊಣ ತಹಾ ಚಲಣಾಣ ಧೋವಣಂ ಹೋಯ ಕಾಯವ್ವಂ || ೨೨೬ ||

ನೀತ್ವಾ ನಿಜಗೃಹಂ ನಿಷದ್ಯ ತತ್ರೋಚ್ಚಸ್ಥಾನೇ ||
ಸ್ಥಾಪಯಿತ್ವಾ ತಥಾ ಚರಣಯೋರ್ಧಾವನಂ ಭವತಿ ಕರ್ತವ್ಯಂ ||

ಪಾಓದಯಂ ಪವಿತ್ತಂ ಸಿರಮ್ಮಿ ಕಾಊಣ ಅಚ್ಚಣಂ ಕುಜ್ಜಾ ||
ಗಂಧಕ್ಖಯಕುಸುಮಣೇವಜ್ಜದೀವಧೂವೇಹಿ ಫಳೇಹಿಂ || ೨೨೭ ||

ಪಾದೋದಕಂ ಪವಿತ್ರಂ ಶಿರಸಿ ಕೃತ್ವಾರ್ಚನಂ ಕುರ್ಯಾತ್ ||
ಗಂಧಾಕ್ಷತಕುಸುಮನೈವೇದ್ಯದೀಪಧೂಪೈಃ ಫಲೈಃ ||

ಪುಪ್ಫಂಜಲಿಂ ಖಿವಿತ್ತಾ ಪಯಪುರಓ ವಂದಣಂ ತಓ ಕುಜ್ಜಾ ||
ಚಇಊಣ ಅಟ್ಟರುದ್ದೇ ಮಣಸುದ್ಧೀ ಹೋಯ ಕಾಯವ್ವಾ || ೨೨೮ ||

ಪುಷ್ಪಾಂಜಲಿಂ ಕ್ಷಿಪ್ತ್ವಾ ಪದಪುರತೋ ವಂದನಾಂ ತತಃ ಕುರ್ಯಾತ್ ||
ತ್ಯಕ್ತ್ವಾರ್ತರೌದ್ರೇ ಮನಃಶುದ್ಧಿರ್ಭವತಿ ಕರ್ತವ್ಯಾ ||

ಣಿಟ್ಠುರಕಕ್ಕಸವಯಣಾಇವಜ್ಜಣಂ ತಂ ವಿಯಾಣ ವಚಸುದ್ಧಿಂ ||
ಸವ್ವತ್ಥ ಸಂಪುಡಂಗಸ್ಸ ಹೋಇ ತಹ ಕಾಯಸುದ್ಧೀವಿ || ೨೨೯ ||

ನಿಷ್ಠುರಕರ್ಕಶವಚನಾದಿವರ್ಜನಂ ತಾಂ ವಿಜಾನೀಹಿ ವಚಃಶುದ್ಧಿಮ್ ||
ಸರ್ವತ್ರ ಸಂಕುಚಿತಾಂಗಸ್ಯ ಭವತಿ ತಥಾ ಕಾಯಶುದ್ಧಿಃ ||

ಣಹಜಂತುರೋಮಅಟ್ಥೀ ಕಣಕುಡಯಮಂಸರುಹಿರಚವ್ಮಾಇ ॥
ಕಂದಫಲಮೂಲಬಿಯಾಅಸುದ್ಧಾ ಮಲಾ ಚಉದ್ದಸಾ ಹೋಂತಿ ॥ ೨೩೦ ॥
ಚಉದಸಮಲಪರಿಸುದ್ಧಂ ಜಂ ದಾಣಂ ಸೋಹಿಊಣ ಜಇಣಾಇ ॥
ಸಂಜಮಿಜಣಸ್ಸ ದಿಜ್ಜಇ ಸಾ ಣೇಯಾ ಏಸಣಾಸುದ್ಧಿ ॥ ೨೩೧ ॥

ನಖಜಂತುರೋಮಾಸ್ಥಿಮಲಮೂತ್ರಮಾಂಸರುಧಿರಚರ್ಮಾದೀನಿ ॥
ಕಂದಫಲಮೂಲಬೀಜಾಶುದ್ಧಾಶನಾನಿ ಮಲಾನಿ ಚತುರ್ದಶ ಭವಂತಿ ॥
ಚತುರ್ದಶಮಲಪರಿಶುದ್ಧಂ ಯದ್ದಾನಂ ಶೋಧಯಿತ್ವಾ ಯತ್ನೇನ ॥
ಸಂಯಮಿಜನಸ್ಯ ದೀಯತೇ ಸಾ ಜ್ಞೇಯೈಷಣಾಶುದ್ಧಿ: ॥

ದಾಣಸಮಯಮ್ಮಿ ಏವಂ ಸುತ್ತಣುಸಾರೇಣ ಣವವಿಹಾಣಾಣಿ ॥
ಭಣಿಯಾಣಿ ಮಯಾ ಏಹಿಂ ದಾಯವ್ವಂ ವಣ್ಣಇಸ್ಸಾಮಿ ॥ ೨೩೨ ॥

ದಾನಸಮಯೇ ಏವಂ ಸೂತ್ರಾನುಸಾರೇಣ ನವವಿಧಾನಾನಿ ॥
ಭಣಿತಾನಿ ಮಯೇದಾನೀಂ ದಾತವ್ಯಂ ವರ್ಣಯಿಷ್ಯಾಮಿ ॥

ಅರ್ಥ:—ಮುನಿಗಳು (ಸತ್ಪಾತ್ರಕ್ಕೆ ಯೋಗ್ಯರಾದಂಥವರು) ತನ್ನ ಮನೆಯ ಭಾಗಿಲಿನಲ್ಲಿ ಬಂದರೆ ಅಥವಾ ಬೇರೆ ಕಡೆಗೆ ಹೋಗುತ್ತಿದ್ದರೆ ಅವರನ್ನು ತನ್ನ ಮನೆಗೆ ಕರಕೊಂಡು ಬಂದು "ನಮೋಸ್ತು ನಮೋಸ್ತು" ಎಂದು ನಮಸ್ಕಾರ ಮಾಡಿ, "ತಿಷ್ಠ ತಿಷ್ಠ" ಅಂದರೆ ನಿಲ್ಲರಿ, ನಿಲ್ಲರಿ ಎಂದು ಅನ್ನಬೇಕು. ಇದಕ್ಕೆ ಪ್ರತಿಗ್ರಹಣವೆನ್ನುವರು. ಅನಂತರ ಅವರನ್ನು ತನ್ನ ಮನೆಯೊಳಗೆ ಕರಕೊಂಡು ಹೋಗಿ, ಉನ್ನತವಾದ ಆಸನದ ಮೇಲೆ ಕೂಡ್ರಿಸಿ, ಶುದ್ಧ ಪ್ರಾಸುಕ ಜಲದಿಂದ ಪಾದಪ್ರಕ್ಷಾಲನೆಯನ್ನು ಮಾಡಬೇಕು. ಆ ಪಾದೋದಕವನ್ನು ತನ್ನ ಮಸ್ತಕದಲ್ಲಿ ಹಾಕಿಕೊಂಡು, ಚರಣಗಳನ್ನು ಅಷ್ಟವಿಧಿಯಿಂದ (ಗಂಧ, ಅಕ್ಷತೆ, ಪುಷ್ಪ, ನೈವೇದ್ಯ, ದೀಪ, ಧೂಪ, ಫಲ ಪುಷ್ಪಾಂಜಲಿಗಳಿಂದ) ಪೂಜಿಸಬೇಕು. ಆ ಮೇಲೆ ಆ ಪಾದಗಳಿಗೆ ವಂದನೆಯನ್ನು ಮಾಡಬೇಕು. ಆ ಸಮಯದಲ್ಲಿ ಆರ್ತ ಮತ್ತು ರೌದ್ರಧ್ಯಾನ ಮೊದಲಾದವುಗಳನ್ನು ಬಿಟ್ಟು, ತನ್ನ ಮನಸ್ಸನ್ನು ಶಾಂತವಾಗಿಡಬೇಕು. ಇದಕ್ಕೆ ಮನಶ್ಶುದ್ಧಿಯೆನ್ನುವರು. ನಿಷ್ಠುರ, ಕಠೋರ, ಅಸತ್ಯ ಮುಂತಾದ ನುಡಿಗಳನ್ನು ಆಡದಿರುವದು ವಚನಶುದ್ಧಿಯೆನಿಸುವದು. ದಾನದ ಹೊರ್ತು ಬೇರೆ ಕೆಲಸಕ್ಕೆ ತನ್ನ ಮನಸ್ಸನ್ನು ಹಚ್ಚದಿರುವದು ಕಾಯಶುದ್ಧಿಯೆನಿಸುದದು. ಭೋಜನದಲ್ಲಿ ಉಗುರು, ಜೀವಜಂತು, ಕೂದಲು, ಎಲವು, ಮಲ, ಮೂತ್ರ, ಮಾಂಸ, ರಕ್ತ, ಚರ್ಮ, ಕಂದಫಲ ಮೂಲ, (ಭಕ್ಷಣ ಮಾಡದಂಥ,) ಬೀಜ ಮತ್ತು ಅಪಕ್ವ ಮುಂತಾದ ಅಶುದ್ಧಾಹಾರದ ಹದಿನಾಲ್ಕು ದೋಷಗಳನ್ನು ಚನ್ನಾಗಿ ಪರಿಶೋಧಿಸಿ, ಸಂಯಮಿ ಮುನಿಗಳಿಗೆ ಆಹಾರದಾನ ಕೊಡುವದಕ್ಕೆ ಏಷಣಾಶುದ್ಧಿಯೆನ್ನುವರು. ಈ ಪ್ರಕಾರ

ದಾನದ ಒಂಭತ್ತು ವಿಧಿಗಳನ್ನು ಉಪಾಸಕಾಧ್ಯಾಯನಕ್ಕೆ ಅನುಸರಿಸಿ ಹೇಳಿದೆನು. ಇನ್ನು ಮುಂದೆ ದಾತವ್ಯವೆಂದರೇನೆಂಬದನ್ನು ಹೇಳುತ್ತೇನೆ.

ಆಹಾರೋಸಹಸತ್ಥಾಭಯಭೇಓ ಜಂ ಚಉವ್ವಿಹಂ ದಾಣಂ ॥
ತಂ ಉಚ್ಚಇ ದಾಯವ್ವಂ ಣಾಯವ್ವಮುವಾಸಯಾಜ್ಝಯಣೇ ॥ ೨೩೩

ಆಹಾರೌಷಧಶಾಸ್ತ್ರಭಯಭೇದಂ ಯಚ್ಚತುರ್ವಿಧಂ ದಾನಂ ॥
ತದುಚ್ಯತೇ ದಾತವ್ಯಂ ಜ್ಞಾತವ್ಯಮುಪಾಸಕಾಧ್ಯಯನೇ ॥

ಅರ್ಥ:—ಆಹಾರ, ಔಷಧ, ಶಾಸ್ತ್ರ ಮತ್ತು ಅಭಯ ಈ ನಾಲ್ಕು ಪ್ರಕಾರದ ದಾನಗಳು ಕೊಡಲಿಕ್ಕೆ ಯೋಗ್ಯವಾಗಿರುತ್ತವೆ. ಇವುಗಳನ್ನು ಉಪಾಸಕಾಧ್ಯಯನ ಶಾಸ್ತ್ರದಿಂದ ತಿಳಿಯತಕ್ಕದ್ದು.

ಅಸಣಂ ಪಾಣಂ ಖಾಇಯಂ ಸಾಇಯಮಿದಿ ಚಉವಿಹೋ ವರಾಹಾರೋ ॥
ಪುವ್ವುತ್ತಣವವಿಹಾಣೇಹಿ ತಿವಿಹಪತ್ತಸ್ಸ ದಾಯವ್ವಂ ॥ ೨೩೪ ॥

ಅಶನಂ ಪಾನಂ ಖಾದ್ಯಂ ಸ್ವಾದ್ಯಮಿತಿ ಚತುರ್ವಿಧೋ ವರಾಹಾರಃ ॥
ಪೂರ್ವೋಕ್ತನವವಿಧಾನೈಸ್ತ್ರಿವಿಧಪಾತ್ರಸ್ಯ ದಾತವ್ಯಃ ॥

ಅರ್ಥ:—ಅನ್ನ, ಪಾನ, ಖಾದ್ಯ, ಸ್ವಾದ್ಯ ಈ ನಾಲ್ಕು ವಿಧವಾದ ಆಹಾರಗಳು ಶುದ್ಧವೆಂದು ಎಣಿಸಲ್ಪಡುತ್ತವೆ. ಈ ಆಹಾರಗಳನ್ನು ಮೊದಲು ಹೇಳಿದ ಒಂಭತ್ತು ಪ್ರಕಾರದ ಭಕ್ತಿಗಳಿಂದ ತ್ರಿವಿಧ ಪಾತ್ರಗಳಿಗೆ ಕೊಡಬೇಕು.

## ದಯಾದಾನವು.

ಅಇವುಢ್ಢವಾಲಮೂಯಂಧವಹಿರದೇಸಂತರೀಯರೋಇತ್ಥಂ ॥
ಜಹಜೋಗ್ಗಂ ದಾಯವ್ವಂ ಕರುಣಾದಾಣೇತಿ ಭಣಿಊಣ ॥ ೨೩೫ ॥

ಅತಿವೃದ್ಧಬಾಲಮೂಕಾಂಧಬಧಿರದೇಶಾಂತರೀಯರೋಗಿಷ್ಟಮ್ ॥
ಯಥಾಯೋಗ್ಯಂ ದಾತವ್ಯಂ ಕರುಣಾದಾನಮಿತಿ ಭಣಿತ್ವಾ ॥

ಅರ್ಥ:— ಅತಿವೃದ್ಧ, ಬಾಲಕ, ಮೂಕ, ಕುರುಡ, ಕಿವಡ, ಪರದೇಶಿ (ಆಶ್ರಯರಹಿತ) ರೋಗಿಷ್ಠ ಮುಂತಾದ ಜೀವಿಗಳಿಗೆ ಅನ್ನ-ವಸ್ತ್ರ ಮೊದಲಾದವುಗಳನ್ನು ಕೊಡುವದು ದಯಾದಾನವೆಂದು ಹೇಳಲ್ಪಡುತ್ತದೆ.

ಉವವಾಸವಾಹಿಪರಿಸಮಕಿಳೇಸಪರಿಪೀಡಿಯಂ ಮುಣೇಊಣ ॥
ಪಚ್ಛಂ ಸರೀರಜೋಗ್ಗಂ ಭೇಸಹದಾಣಂ ಪಿ ದಾಯವ್ವಂ ॥ ೨೩೬ ॥

ಉಪವಾಸವ್ಯಾಧಿಪರಿಶ್ರಮಕ್ಲೇಶಪರಿಪೀಡಿತಂ ಜ್ಞಾತ್ವಾ ॥
ಪಥ್ಯಂ ಶರೀರಯೋಗ್ಯಂ ಭೈಷಜ್ಯದಾನಮಪಿ ದಾತವ್ಯಮ್ ॥

ಅರ್ಥಃ—ಉಪವಾಸ, ಬೇನೆ, ಪರಿಶ್ರಮ, ಕ್ಲೇಶ ಮೊದಲಾದ ಕಾರಣಗಳಿಂದ ಪೀಡಿಸಲ್ಪಟ್ಟ ಜೀವಿಯ ಶರೀರಕ್ಕೆ ಹಿತವಾದ ಪಥ್ಯ ಮತ್ತು ಔಷಧ ಕೊಡುವದು ಭೈಷಜ್ಯದಾನವೆಂದು ತಿಳಿಯತಕ್ಕದ್ದು.

ಆವಸ್ಸಸಚ್ಛಾಇ ಲಿಹಾವಿಊಣ ದೀಜ್ಜಂತಿ ಜಂ ಜಹಾಜೋಗ್ಗಂ ||
ತಂ ಜಾಣ ಸತ್ಥದಾಣಂ ಜಿಣವಯಣಜ್ಝಾವಣಂ ಚ ತಹಾ || ೨೩೭ ||

ಆವಶ್ಯಕಶಾಸ್ತ್ರಾಣಿ ಲಿಖಾಪ್ಯ ದೀಯಂತೇ ಯಥಾಯೋಗ್ಯಂ ||
ತಜ್ಜಾನೀಹಿ ಶಾಸ್ತ್ರದಾನಂ ಜಿನವಚನಾಧ್ಯಾಪನಂ ಚ ತಥಾ ||

ಅರ್ಥ:—ನಿತ್ಯದಲ್ಲಿ ಬೇಕಾಗುವ ಕರ್ಮಗಳ ವರ್ಣನೆಯು ಯಾವ ಗ್ರಂಥದಲ್ಲಿ ಹೇಳಿರುವದೋ, ಅಂಥ ಶಾಸ್ತ್ರಗ್ರಂಥಗಳನ್ನು ಲೇಖನ ಮಾಡಿಸಿ ದಾನಕೊಡುವದು ಮತ್ತು ಜೈನ ಶಾಸ್ತ್ರವನ್ನು ಪರರಿಗೆ ಕಲಿಸುವದೂ, ಉಪದೇಶ ಮಾಡುವದೂ ಶಾಸ್ತ್ರದಾನವೆನಿಸುವದು.

ಜಂ ಕೀರಇ ಪರರಕ್ಖಾ ಣಿಚ್ಚಂ ಮರಣಭಯಭೀರುಜೀವಾಣಂ ||
ತಂ ದಾಣಂ ಸಿಂಹಾಸಣಸಂಠಿಯಂ ಸವ್ವದಾಣಾಣಂ || ೨೩೮ ||

ಯತ್ಕ್ರಿಯತೇ ಪರರಕ್ಷಾ ನಿತ್ಯಂ ಮರಣಭಯಭೀರುಜೀವಾನಾಮ್ ||
ತದ್ದಾನಂ ಸಿಂಹಾಸನಸಂಸ್ಥಿತಂ ಸರ್ವದಾನಾನಾಮ್ ||

ಅರ್ಥಃ—ನಿತ್ಯದಲ್ಲಿ ಅನ್ಯ ಜೀವಿಗಳನ್ನು ರಕ್ಷಿಸುವದು, ಮರಣಕ್ಕೆ ಅಂಜಿದವರ ಅಂಜಿಕೆಯನ್ನು ದೂರ ಮಾಡುವದು ಅಭಯದಾನವು. ಈ ದಾನವು ಸಿಂಹಾಸನದ ಮೇಲೆ ಕುಳಿತ ಅರಸನಂತೆ ಯಾವತ್ತೂ ದಾನಗಳಲ್ಲಿ ಶ್ರೇಷ್ಠವಿರುತ್ತದೆ.

## ದಾನದ ಫಲವು.

ಅಣ್ಣಾಣಿಣೋ ವಿ ಜಮ್ಹಾ ಕಜ್ಜಂ ಣ ಕುಣಂತಿ ಣಿಪ್ಫಳಾರಂಭಂ ||
ತಮ್ಹಾ ದಾಣಸ್ಸ ಫಳಂ ಸಮಾಸದೋ ವಣ್ಣಇಸ್ಸಾಮಿ || ೨೩೯ ||

ಅಜ್ಞಾನಿನೋಪಿ ಯಸ್ಮಾತ್ಕಾರ್ಯಂ ನ ಕುರ್ವಂತಿ ನಿಷ್ಫಲಾರಂಭಮ್ ||
ತಸ್ಮಾದ್ದಾನಸ್ಯ ಫಲಂ ಸಮಾಸತೋ ವರ್ಣಯಿಷ್ಯಾಮಿ ||

ಅರ್ಥ:—ಲಾಭವಿಲ್ಲದ ಕಾರ್ಯವನ್ನು ಅಜ್ಞಾನಿಯಾದರೂ ಮಾಡುವದಿಲ್ಲ. ಅಂದಮೇಲೆ ಜ್ಞಾನವಂತನು ಹ್ಯಾಗೆ ಮಾಡುವನು? ಅದಕ್ಕೋಸ್ಕರ ದಾನ ಮಾಡುವದರಿಂದ ಏನು ಫಲವಾಗುತ್ತದೆಂಬದನ್ನು ಸಂಕ್ಷೇಪದಿಂದ ಹೇಳುತ್ತೇನೆ.

ಜಹ ಉತ್ತಮ್ಮಿ ಖಿತ್ತೇ ಪಇಣಮಣ್ಣಂ ಸುಬಹುಫಲಂ ಹೋದಿ ||
ತಹ ದಾಣಫಲಂ ಣೇಯಂ ದಿಣ್ಣಂ ತಿವಿಹಸ್ಸ ಪತ್ತಸ್ಸ || ೨೪೦ ||

ಯಥೋತ್ತಮಕ್ಷೇತ್ರೇ ಪ್ರಕೀರ್ಣಂ ಸುಬಹುಫಲಂ ಭವತಿ ॥
ತಥಾ ದಾನಫಲಂ ಜ್ಞೇಯಂ ದತ್ತಂ ತ್ರಿವಿಧಸ್ಯ ಪಾತ್ರಸ್ಯ ॥

ಅರ್ಥ:—ಉತ್ತಮವಾದ ಹೊಲದಲ್ಲಿ ಬಿತ್ತಿದ ಬೀಜವು ಬಹಳ ಹಾಗು ಉತ್ತಮವಾದ ಫಲವನ್ನು ಹ್ಯಾಗೆ ಕೊಡುತ್ತದೆಯೋ, ಹಾಗೆ ಉತ್ತಮ, ಮಧ್ಯಮ, ಕನಿಷ್ಠ ಪಾತ್ರದಲ್ಲಿ ಕೊಟ್ಟ ದಾನವು ಉತ್ತಮ ಮುಂತಾದ ಫಲವನ್ನು ಕೊಡುತ್ತದೆ.

ಜಹ ಮಜ್ಝಮಮ್ಮಿ ಖಿತ್ತೇ ಅಪ್ಪಫಲಂ ಹೋಇ ವಾವಿಯಂ ವೀಯಂ ॥
ಮಜ್ಝಮಫಲಂ ವಿಜಾಣಹ ಕುಪತ್ತದಿಣ್ಣಂ ತಹಾ ದಾಣಂ ॥ ೨೪೧ ॥

ಯಥಾ ಮಧ್ಯಮೇ ಕ್ಷೇತ್ರೇ ಅಲ್ಪಫಲಂ ಭವತಿ ಉಪ್ತಂ ಬೀಜವ್ ॥
ಮಧ್ಯಮಫಲಂ ವಿಜಾನೀಹಿ ಕುಪಾತ್ರದತ್ತಂ ತಥಾ ದಾನವ್ ॥

ಅರ್ಥ:—ಸಾಧಾರಣ ಭೂಮಿಯಲ್ಲಿ ಬಿತ್ತಿದ ಬೀಜವು ಮಧ್ಯಮ ಫಲವನ್ನು ಕೊಡುವಂತೆ ಕುಪಾತ್ರದಲ್ಲಿ ಕೊಟ್ಟ ದಾನವು ಮಧ್ಯಮ ಫಲವನ್ನು ಕೊಡುತ್ತದೆ.

ಜಹ ಊಸರಮ್ಮಿ ಖಿತ್ತೇ ಪಇಣ್ಣಂ ವೀಯಂ ಣ ಕಿಂ ಪಿ ರುಹೇಇ ॥
ಫಳವಜ್ಜಿಯಂ ವಿಯಾಣಹ ಅಪತ್ತದಿಣ್ಣಂ ತಹಾ ದಾಣಂ ॥ ೨೪೨ ॥

ಯಥೋಷರಕ್ಷೇತ್ರೇ ಪತಿತಂ ಬೀಜಂ ನ ಕಿಮಪಿ ರೋಹತಿ ॥
ಫಲವರ್ಜಿತಂ ವಿಜಾನಥ ಅಪಾತ್ರದತ್ತಂ ತಥಾ ದಾನಂ ॥

ಅರ್ಥ:—ಸವಳು ಭೂಮಿಯಲ್ಲಿ ಬಿತ್ತಿದ ಬೀಜವು ಹ್ಯಾಗೆ ನಾಟುವದಿಲ್ಲವೋ, ಅದರಂತೆ ಅಪಾತ್ರದಲ್ಲಿ ಮಾಡಿದ ದಾನವು ನಿಷ್ಫಲವಾಗುತ್ತದೆ. ಅಥವಾ—

ಕಮ್ಹಿ ಅಪತ್ತವಿಸೇಸೇ ದಿಣ್ಣಂ ದಾಣಂ ದುಹಾವಹಂ ಹೋಇ ॥
ಜಹ ವಿಸಹರಸ್ಸ ದಿಣ್ಣಂ ತಿವ್ವವಿಸಂ ಜಾಯಏ ಖೀರಂ ॥ ೨೪೩ ॥

ಕಸ್ಮಿನ್ನಪಾತ್ರವಿಶೇಷೇ ದತ್ತಂ ದಾನಂ ದುಃಖಾವಹಂ ಭವತಿ ॥
ಯಥಾ ವಿಷಧರಸ್ಯ ದತ್ತಂ ತೀವ್ರವಿಷಂ ಜಾಯತೇ ಕ್ಷೀರವ್ ॥

ಅರ್ಥಃ—ಹಾವಿಗೆ ಹಾಲು ಕುಡಿಸಿದರೆ ಅದು ಭಯಂಕರವಾದ ವಿಷವಾಗುತ್ತದೆ. ಅದರಂತೆ ಅಪಾತ್ರದಲ್ಲಿ ಕೊಟ್ಟ ದಾನವು ಪರಿಣಾಮದಲ್ಲಿ ದಾನ ಕೊಡುವವನಿಗೆ ದುಃಖದಾಯಕವಾಗುತ್ತದೆ.

ಮೇಹಾವಿಊಣ ಸೇಸಾ ಸಾಮಣ್ಣಪರೂವಣಾ ಮಏ ಉತ್ತಾ ॥
ಇಣ್ಹೀಂಯ ಭಣಾಮಿ ಫಲಂ ಸಮಾಸಓ ಮಂದಬುದ್ಧೀಣಂ ॥ ೨೪೪ ॥

ಮೇಧಾವಿನಾಂ ಸೈಷಾ ಸಾಮಾನ್ಯಪ್ರರೂಪಣಾ ಮಯೋಕ್ತಾ ॥
ಇದಾನೀಂ ಭಣಾಮಿ ಫಲಂ ಸಮಾಸತೋ ಮಂದಬುದ್ಧೀನಾಮ್ ॥

ಅರ್ಥ:—ಸತ್ಪಾತ್ರ ಮೊದಲಾದ ದಾನದ ಫಲವನ್ನು ಬುದ್ಧಿವಂತರಿಗೆ ತಿಳಿಯುವಂತೆ ಸಾಧಾರಣವಾಗಿ ಹೇಳಿದೆನು. ಇನ್ನುಮೇಲೆ ಮಂದಬುದ್ಧಿಗಳಿಗೆ ತಿಳಿಯುವ ಹಾಗೆ ದಾನದ ಫಲವನ್ನು ಸಂಕ್ಷೇಪದಿಂದ ಹೇಳುತ್ತೇನೆ.

ಮಿಚ್ಛಾದಿಟ್ಠೀ ಭದ್ದೋ ದಾಣಂ ಜೋ ದೇಇ ಉತ್ತಮೇ ಪತ್ತೇ ||
ತಸ್ಸ ಫಳೇಣುವವಜ್ಜಇ ಸೋ ಉತ್ತಮಭೋಯಭೂಮೀಸು || ೨೪೫ ||

ಮಿಥ್ಯಾದೃಷ್ಟಿರ್ಭದ್ರೋ ದಾನಂ ಯೋ ದದಾತ್ಯುತ್ತಮೇ ಪಾತ್ರೇ ||
ತಸ್ಯ ಫಲೇನಾನುಪ್ರಜತಿ ಸ ಉತ್ತಮಭೋಗಭೂಮಿಷು ||

ಅರ್ಥ:—ಮಿಥ್ಯಾದೃಷ್ಟಿಯಾಗಿದ್ದರೂ ಶುಭ ಅಂತ:ಕರಣವುಳ್ಳ ಪುರುಷನು ಉತ್ತಮ ಪಾತ್ರದಲ್ಲಿ ದಾನ ಮಾಡಿದರೆ, ಆ ಫಲದಿಂದ ಅವನು ಉತ್ತಮವಾದ ಭೋಗಭೂಮಿಯಲ್ಲಿ ಜನಿಸುತ್ತಾನೆ. ಹೀಗಿದ್ದಮೇಲೆ ಸಮ್ಯಗ್‌ದೃಷ್ಟಿಯಾದ ದಾತೃ ಅಧಿಕವಾದ ಫಲವನ್ನು ಹೊಂದುವನೆಂದು ಹೇಳುವ ಆವಶ್ಯಕತೆಯಿಲ್ಲ.

ಜೋ ಮಜ್ಝಮಮ್ಮಿ ಪತ್ತಮ್ಮಿ ದೇಇ ದಾಣಂ ಖು ವಾಮದಿಟ್ಠೀ ವಿ ||
ಸೋ ಮಜ್ಝಮಾಸು ಜೀವೋ ಉಪ್ಪಜ್ಜಇ ಭೋಯಭೂಮೀಸು || ೨೪೬ ||

ಯೋ ಮಧ್ಯಮೇ ಪಾತ್ರೇ ದದಾತಿ ದಾನಂ ಖಲು ಮಿಥ್ಯಾದೃಷ್ಟಿರಪಿ ||
ಸ ಮಧ್ಯಮಾಸು ಜೀವ ಉತ್ಪದ್ಯತೇ ಭೋಗಭೂಮಿಷು ||

ಅರ್ಥ:—ಯಾವ ಮಿಥ್ಯಾದೃಷ್ಟಿಯು ಮಧ್ಯಮಪಾತ್ರದಲ್ಲಿ ದಾನವನ್ನು ಮಾಡುತ್ತಾನೋ, ಅವನು ಮಧ್ಯಮ ಭೋಗಭೂಮಿಯಲ್ಲಿ ಹುಟ್ಟುತ್ತಾನೆ.

ಜೋ ಪುಣ ಜಹಣ್ಣಪತ್ತಮ್ಮಿ ದೇಇ ದಾಣಂ ತಹಾವಿಹೋ ಣರೋ ||
ಜಾಇವಿ ಫಳೇಣ ಜಹಣ್ಣಾಸು ಭೋಯಭೂಮೀಸು ಸೋ ಜೀವೋ || ೨೪೭ ||

ಯಃ ಪುನರ್ಜಘನ್ಯಪಾತ್ರೇ ದದಾತಿ ದಾನಂ ತಥಾವಿಧೋ ನರಃ ||
ಜಾಯತೇ ಫಲೇನ ಜಘನ್ಯಾಸು ಭೋಗಭೂಮಿಷು ಸ ಜೀವಃ ||

ಅರ್ಥ:—ಯಾವ ಮಿಥ್ಯಾದೃಷ್ಟಿಯು ಜಘನ್ಯಪಾತ್ರದಲ್ಲಿ ದಾನವನ್ನು ಕೊಡುತ್ತಾನೋ, ಅವನು ಕನಿಷ್ಠಭೂಮಿಯಲ್ಲಿ ಹುಟ್ಟುತ್ತಾನೆ.

ಜಾಇವಿ ಕುಪತ್ತದಾಣೇಣ ವಾಮದಿಟ್ಠೀ ಕುಭೋಯಭೂಮೀಸು ||
ಅಣುಮೋಯಣೇಣ ತಿರಿಯಾ ವಿ ಉತ್ತಮಠಾಣಂ ಜಹಾಜೋಗ್ಗಂ ||೨೪೮||

ಜಾಯತೇ ಕುಪಾತ್ರದಾನೇನ ಮಿಥ್ಯಾದೃಷ್ಟಿಃ ಕುಭೋಗಭೂಮಿಷು ||
ಅನುಮೋದನೇನ ತಿರ್ಯಂಚೋಪ್ಯುತ್ತಮಸ್ಥಾನಂ ಯಥಾಯೋಗ್ಯಮ್ ||

ಅರ್ಥಃ—ಕುಪಾತ್ರದಾನದಿಂದ ಮಿಥ್ಯಾದೃಷ್ಟಿಯು ಕುಭೋಗಭೂಮಿ

ಯಲ್ಲಿ ಹುಟ್ಟುತ್ತಾನೆ. ಆದರೆ ಪಂಚೇಂದ್ರಿಯ ಮುಂತಾದ ತಿರ್ಯಂಚ ಜೀವಗಳು ಉತ್ತಮ, ಮಧ್ಯಮ, ಜಘನ್ಯವಾದ ಪಾತ್ರಕ್ಕೆ ಕೊಟ್ಟ ದಾನದ ಅನುಮೋದನ ದಿಂದ ಅಂಥ ಭೂಮಿಯಲ್ಲಿಯೇ ಹುಟ್ಟುತ್ತವೆ.

ಬದ್ಧಾಉಗಾ ಸುದಿಟ್ಠೀ ಮಣುಯಾ ಅಣುಮೋಯಣೇಣ ತಿರಿಯಾ ವಿ ॥
ಣಿಯಮೇಣುವವಜ್ಜಂತಿ ಯ ತೇ ಉತ್ತಮಭೋಗಭೂಮೀಸು ॥ ೨೪೯ ॥

ಬದ್ಧಾಯುಷ್ಕಾಃ ಸುದೃಷ್ಟಯೋ ಮನುಜಾ ಅನುಮೋದನೇನ ತಿರ್ಯಂಚೋಽಪಿ॥
ನಿಯಮೇನಾನುವ್ರಜಂತಿ ಚ ತೇ ಉತ್ತಮಭೋಗಭೂಮಿಷು ॥

ಅರ್ಥ:—ಸತ್ಪಾತ್ರದಾನದ ಅನುಮೋದನದಿಂದ ಸಮ್ಯಗ್‌ದೃಷ್ಟಿ ಮನುಷ್ಯನೂ ತಿರ್ಯಂಚ ಜೀವಗಳೂ ಉತ್ತಮವಾದ ಭೋಗಭೂಮಿಯಲ್ಲಿ ಹುಟ್ಟುವದಕ್ಕೆ ಕಾರಣವಾಗಿ, ನಿಯಮದಿಂದ ಭೋಗಭೂಮಿಯಲ್ಲಿ ಹುಟ್ಟುತ್ತವೆ.

## ಭೋಗಭೂಮಿಯ ಸುಖವು.

ತತ್ಥ ವಿ ದಹಪ್ಪಯಾರಾ ಕಪ್ಪದುಮಾ ದಿಂತಿ ಉತ್ತಮೇ ಭೋಏ ॥
ಖೇತ್ತಸಹಾವೇಣ ಸಯಾ ಪುವ್ವಜ್ಜಿಯಪುಣ್ಣಸಹಿಯಾಣಂ ॥ ೨೫೦ ॥

ತತ್ರಾಪಿ ದಶಪ್ರಕಾರಾಃ ಕಲ್ಪದ್ರುಮಾ ದದತಿ ಉತ್ತಮಾನ್ಭೋಗಾನ್ ॥
ಕ್ಷೇತ್ರಸ್ವಭಾವೇನ ಸದಾ ಪೂರ್ವಾರ್ಜಿತಪುಣ್ಯಸಹಿತಾನಾಮ್ ॥

ಅರ್ಥಃ—ಪೂರ್ವಜನ್ಮದಲ್ಲಿ ಪುಣ್ಯವನ್ನು ಸಂಪಾದಿಸಿದಂಥ, ಜೀವಗಳಿಗೆ ಉತ್ತಮವಾದ ಭೋಗಭೂಮಿಯಲ್ಲಿ ದಶವಿಧವಾದ ಕಲ್ಪವೃಕ್ಷಗಳು ನಿತ್ಯದಲ್ಲಿ ಉತ್ತಮವಾದ ಭೋಗಗಳನ್ನು ಕೊಡುತ್ತವೆ. ಹೀಗಾಗುವದು ಆ ಕ್ಷೇತ್ರದ (ಭೋಗಭೂಮಿಯ) ಸ್ವಭಾವವು.

## ಕಲ್ಪವೃಕ್ಷಗಳ ಹೆಸರು.

ಮಜ್ಜಂಗತೂರಭೂಸಣಜೋಇಸಗಿಹಭಾಯಣಂಗಮಾಲಂಗಾ ॥
ಭೋಯಣವತ್ಥಪದೀವಂಗಾ ಏದೇ ಸುರತರೂ ದಸಹಾ ॥ ೨೫೧ ॥

ಮದ್ಯಾಂಗತೂರ್ಯಭೂಷಣಜ್ಯೋತಿರ್ಗೃಹಭಾಜನಾಂಗಮಾಲಾಂಗಾಃ ॥
ಭೋಜನವಸ್ತ್ರಪ್ರದೀಪಾಂಗಾ ಏತೇ ಸುರತರವೋ ದಶಧಾ ॥

ಅರ್ಥಃ—ಮದ್ಯಾಂಗ, ತೂರ್ಯಾಂಗ, ಭೂಷಣಾಂಗ, ಜ್ಯೋತಿರಂಗ, ಗೃಹಾಂಗ, ಭಾಜನಾಂಗ, ಮಾಲಾಂಗ, ಭೋಜನಾಂಗ, ವಸ್ತ್ರಾಂಗ, ಪ್ರದೀಪಾಂಗ ಹೀಗೆ ಹತ್ತುಪ್ರಕಾರದ ಕಲ್ಪವೃಕ್ಷಗಳಿರುತ್ತವೆ.

## ಮದ್ಯಾಂಗ ಕಲ್ಪವೃಕ್ಷವು.

ಅಇಸರಸಮಇಸುಗಂಧಂ ದಿಠ್ಠಂ ಚಿಯ ಜಂ ಜಣೇಹಿ ಅಹಿಳಾಸಂ ||
ಇಂದಿಯವಳಪುಠ್ಠಿಯರಂ ಮಜ್ಜಂಗಾ ಪಾಣಯಂ ದಿಂತಿ || ೨೫೨ ||

ಅತಿಸರಸಮತಿಸುಗಂಧಂ ದೃಷ್ಟಂ ಚೇದ್ಯಜ್ಜನಯತ್ಯಭಿಲಾಷಮ್ ||
ಇಂದ್ರಿಯಬಲಪುಷ್ಟಿಕರಂ ಮದ್ಯಾಂಗಾಃ ಪಾನಕಂ ದದತಿ ||

ಅರ್ಥ:—ಯಾವದನ್ನು ಪಾನ ಮಾಡೋಣದರಿಂದ ಇಂದ್ರಿಯಗಳು ಬಲವಾಗಿಯೂ ಪುಷ್ಟವಾಗಿಯೂ ಆಗುತ್ತವೆಯೋ, ಮತ್ತು ನೋಡಿದ ಕೂಡಲೆ ಅದನ್ನು ಪಾನ ಮಾಡಬೇಕೆಂಬ ಇಚ್ಛೆಯುಂಟಾಗುವದೋ, ಅಂಥ ರುಚಿಕರವಾದ ಪಾನಕವನ್ನು ಕೊಡುವ ವೃಕ್ಷಕ್ಕೆ ಮದ್ಯಾಂಗವೆಂಬ ಹೆಸರು.

## ತೂರ್ಯಾಂಗ ಮತ್ತು ಭೂಷಣಾಂಗ ಕಲ್ಪವೃಕ್ಷ.

ತಯವಿತಯಘಣಸುಖಿರಂ ವಾಇತರಂ ಪಾಯವಾ ದಿಂತಿ ||
ವರಮಕುಟಮಾಳಾಇಯ ಆಭರಣಾ ಭೂಸಣದುಮಾ ವಿ || ೨೫೩ ||

ತತವಿತತಘನಸುಷಿರಂ ವಾದಿತ್ರಂ ಪಾದಪಾ ದದತಿ ||
ವರಮುಕುಟಮಾಲಾದೀನಾಭರಣಾನ್ಭೂಷಣದ್ರುಮಾ ಅಪಿ ||

ಅರ್ಥಃ-—ವೀಣೆ, ತಂಬೂರಿ, ಸಾರಂಗಿ ಮುಂತಾದ ತಂತು ವಾದ್ಯಗಳೂ ಜಾಂಗಟೆ, ತಾಳ ಮುಂತಾದ ಘನವಾದ್ಯಗಳೂ ಶಂಖ, ಸನಾಯಿ, ಪುಂಗಿ ಮುಂತಾ ಸುಸ್ವರವಾದ್ಯಗಳೂ ಯಾವ ವೃಕ್ಷಗಳಿಂದ ಹುಟ್ಟುತ್ತವೆಯೋ, ಆ ವೃಕ್ಷಗಳಿಗೆ ತೂರ್ಯಾಂಗವೆಂಬ ಹೆಸರು. ಮತ್ತು ಉತ್ತಮವಾದ ರತ್ನಖಚಿತವಾದ ಕಿರೀಟಗಳೂ, ಕರ್ಣಕುಂಡಲಗಳೂ, ಮಾಲೆಗಳೂ ಯಾವ ವೃಕ್ಷಗಳಿಂದ ದೊರೆಯುತ್ತವೆಯೋ, ಆ ವೃಕ್ಷಗಳಿಗೆ ಭೂಷಣಾಂಗವೆಂಬಹೆಸರು.

## ಜ್ಯೋತಿರಂಗ ಮತ್ತು ಗೃಹಾಂಗ ಕಲ್ಪವೃಕ್ಷ.

ಸಸಿಸೂರಪಯಾಸಾಓ ಅಹಿಯಪಯಾಸಂ ಕುಣಂತಿ ಜೋಈಯ ||
ದುವ್ಮಾ ಣಾಣವಿಹಪ್ಪಾಸಾಪ ದಿಂತಿ ಸಯಾ ಗಿಹದುಮಾ ದಿವ್ವಾ || ೨೫೪ ||

ಶಶಿಸೂರ್ಯಪ್ರಕಾಶಾದಧಿಕಪ್ರಕಾಶಂ ಕುರ್ವಂತಿ ಜ್ಯೋತಿಷ್ಕಾಃ ||
ದ್ರುಮಾ ನಾನಾವಿಧಪ್ರಾಸಾದಾನ್ದದತಿ ಸದಾ ಗೃಹದ್ರುಮಾ ದಿವ್ಯಾಃ ||

ಅರ್ಥ:—ಜ್ಯೋತಿರಂಗವೆಂಬ ಕಲ್ಪವೃಕ್ಷಗಳು ನಿತ್ಯದಲ್ಲಿ ಚಂದ್ರ ಸೂರ್ಯರಿಗಿಂತ ಅಧಿಕವಾದ ಪ್ರಕಾಶವನ್ನು ಕೊಡುತ್ತವೆ. ಮತ್ತು ಗೃಹಾಂಗವೆಂಬ ಕಲ್ಪವೃಕ್ಷಗಳು ತಮಗೆ ಬೇಕಾದಂಥ ನಾನಾವಿಧವಾದ ಪ್ರಾಸಾದ (ಅರಮನೆ) ಗಳನ್ನು ಕೊಡುತ್ತವೆ.

## ಭಾಜನಾಂಗ ಮತ್ತು ದೀಪಾಂಗ ಕಲ್ಪವೃಕ್ಷ.

ಕಚ್ಚೋಲಕಳಸಥಾಳಾಇಯಾಇ ಭಾಯದುವಾ ಪಯಚ್ಛಂತಿ ॥
ಉಜ್ಜೋಯಂ ದೀವದುವಾ ಕುಣಂತಿ ಗೇಹಸ್ಸ ಮಜ್ಝಮ್ಮಿ ॥ ೨೫೫ ॥

ಕಚೋಲಕಲಶಸ್ಥಾಲ್ಯಾದೀನ್ಭಾಜನದ್ರುಮಾಃ ಪ್ರಯಚ್ಛಂತಿ ॥
ಉದ್ಯೋತಂ ದೀಪದ್ರುಮಾಃ ಕುರ್ವಂತಿ ಗೃಹಸ್ಯ ಮಧ್ಯೇ ॥

ಅರ್ಥ:—ಬಟ್ಟಲ, ಕೊಡ, ತಾಟ ಮೊದಲಾದ ಭೋಜನದ ಪಾತ್ರೆಗಳನ್ನು ಕೊಡುವ ವೃಕ್ಷಗಳು ಭಾಜನಾಂಗವೆಂಬ ಸಂಜ್ಞೆಯನ್ನು ಹೊಂದುತ್ತವೆ. ದೀಪಾಂಗವೆಂಬ ಕಲ್ಪವೃಕ್ಷಗಳು ಮನೆಯಲ್ಲಿ ದೀಪಗಳನ್ನು ಕೊಟ್ಟು ಪ್ರಕಾಶವನ್ನುಂಟು ಮಾಡುತ್ತವೆ.

## ವಸ್ತ್ರಾಂಗ ಮತ್ತು ಭೋಜನಾಂಗ ಕಲ್ಪವೃಕ್ಷ.

ವರವಟ್ಟಚೀಣಖೋಮಾಇಯಾಇ ವತ್ಥಾಇ ದಿಂತಿ ವತ್ಥದುವಾ ॥
ವರಚಉವಿಹಮಾಹಾರಂ ಭೋಯಣರುಕ್ಖಾ ಪಯಚ್ಛಂತಿ ॥ ೨೫೬ ॥

ವರಪಟ್ಟಚೀನಕ್ಷೌಮಾದಿಕಾನಿ ವಸ್ತ್ರಾಣಿ ದದತಿ ವಸ್ತ್ರದ್ರುಮಾಃ ॥
ವರಚತುರ್ವಿಧಮಾಹಾರಂ ಭೋಜನವೃಕ್ಷಾಃ ಪ್ರಯಚ್ಛಂತಿ ॥

ಅರ್ಥ:—ಉತ್ತಮವಾದ ಮತ್ತು ಸುಂದರವಾದ ರೇಶಿಮೆ ವಸ್ತ್ರಗಳನ್ನು ಕೊಡುವಂಥ ವೃಕ್ಷಗಳಿಗೆ ವಸ್ತ್ರಾಂಗವೆಂಬ ಹೆಸರು. ಭೋಜನಾಂಗ ವೃಕ್ಷಗಳು ಚತುರ್ವಿಧವಾದ (ಅನ್ನ, ಪಾನ, ಖಾದ್ಯ, ಸ್ವಾದ್ಯ) ಆಹಾರವನ್ನು ಕೊಡುತ್ತವೆ.

## ಮಾಲಾಂಗ ಕಲ್ಪವೃಕ್ಷವು.

ವರವಹುಲಪರಿಮಲಾಮೋಯಮೋಇಯಾಸಾಮುಹಾಉ ಮಾಲಾಉ ॥
ಮಾಲಾದುವಾ ಪಯಚ್ಛಂತಿ ವಿವಿಹಕುಸುಮೇಹಿಂ ರಇಯಾಉ ॥ ೨೫೭ ॥

ವರಬಹುಲಪರಿಮಲಾಮೋದಿತಾಶಾಮುಖಾಸ್ತು ಮಾಲಾಃ ॥
ಮಾಲಾದ್ರುಮಾಃ ಪ್ರಯಚ್ಛಂತಿ ವಿವಿಧಕುಸುಮೈ ರಚಿತಾಃ ॥

ಅರ್ಥ:—ಉತ್ತಮವಾದ ಮತ್ತು ಬಹಳ ಪರಿಮಳವಾದ ಗಂಧದಿಂದ ಹತ್ತು ದಿಕ್ಕುಗಳನ್ನು ಸುವಾಸಿತ ಮಾಡುವಂಥ ಅನೇಕ ಪ್ರಕಾರದ ಪುಷ್ಪಗಳಿಂದ ರಚಿತವಾದ ಮಾಲೆಗಳನ್ನು ಮಾಲಾಂಗ ವೃಕ್ಷಗಳು ಕೊಡುತ್ತವೆ.

ಉಕ್ಕಿಟ್ಠಭೋಯಭೂಮೀಸು ಜೇ ಣರಾ ಉದಯಸುಜ್ಜಸಮತೇಯಾ ॥
ಛಧಣುಸಹಸ್ಸುತ್ತುಂಗಾ ಹುಂತಿ ತಿಪಲ್ಲಾಉಗಾ ಸವ್ವೇ ॥ ೨೫೮ ॥

ಉತ್ಕೃಷ್ಟಭೋಗಭೂಮಿಷು ಯೇ ನರಾ ಉದಯಸೂರ್ಯಸಮತೇಜಸ: ||
ಷಡ್ಧನು:ಸಹಸ್ರೋತ್ತುಂಗಾ ಭವಂತಿ ತ್ರಿಪಲ್ಯಾಯುಷ: ಸರ್ವೇ ||

ಅರ್ಥ— ಉತ್ತಮವಾದ ಭೋಗಭೂಮಿಯಲ್ಲಿ ಉತ್ಪನ್ನರಾದ ಪುರುಷರು ಬಾಲಸೂರ್ಯನಂತೆ ತೇಜವುಳ್ಳವರಾಗಿಯೂ, ಆರುಸಾವಿರ ಬಿಲ್ಲಿನಷ್ಟು ಉನ್ನತರಾಗಿಯೂ, ಮೂರು ಪಲ್ಯ ಆಯುಷ್ಯವಂತರಾಗಿಯೂ ಇರುತ್ತಾರೆ.

ದೇಹಸ್ಸುಚ್ಚತ್ತಮಜ್ಝಮಾಸು ಚತ್ತಾರಿ ಧಣುಸಹಸ್ಸಾಇಂ ||
ಪಲ್ಲಾಣಿ ದೋಣಿಯಾಊ ಪುಣ್ಣೇಂದುಸಮಪ್ಪಹಾ ಪುರಿಸಾ || ೨೫೯ ||

ದೇಹಸ್ಯೋಚ್ಚತ್ವಂ ಮಧ್ಯಮಾಸು ಚತ್ವಾರಿ ಧನುಃಸಹಸ್ರಾಣಿ ||
ಪಲ್ಯೇ ದ್ವೇ ಆಯುಃ ಪೂರ್ಣೇಂದುಸಮಪ್ರಭಾಃ ಪುರುಷಾ: ||

ಅರ್ಥ— ಮಧ್ಯಮ ಭೋಗಭೂಮಿಯಲ್ಲಿರುವ ಪುರುಷರು ನಾಲ್ಕುಸಾವಿರ ಧನುಷ್ಯ ಎತ್ತರರಾಗಿಯೂ ಎರಡು ಪಲ್ಯ ಆಯುಷ್ಯವಂತರಾಗಿಯೂ ಪೌರ್ಣಿಮೆಯ ಚಂದ್ರನಂತೆ ಪ್ರಕಾಶವುಳ್ಳವರಾಗಿಯೂ ಇರುತ್ತಾರೆ.

ದೋಧಣುಸಹಸ್ಸುತ್ತುಂಗಾ ಮಣುಯಾ ಪಲ್ಲಾಉಗಾ ಜಹಣ್ಣಾಸು ||
ಉತ್ತಮಕಂಚಣವಣ್ಣಾ ಹವಂತಿ ಪುಣ್ಣಾಣುಭಾವೇಣ || ೨೬೦ ||

ದ್ವಿಧನು:ಸಹಸ್ರೋತ್ತುಂಗಾ ಮನುಷ್ಯಾ: ಪಲ್ಯಾಯುಷ್ಕಾ ಜಘನ್ಯಾಸು ||
ಉತ್ತಮಕಾಂಚನವರ್ಣಾ ಭವಂತಿ ಪುಣ್ಯಾನುಭಾವೇನ ||

ಅರ್ಥಃ—ಜಘನ್ಯ ಭೋಗಭೂಮಿಯಲ್ಲಿರುವ ಮನುಷ್ಯರ ಉನ್ನತಿಯು ಎರಡುಸಾವಿರ ಧನುಷ್ಯ ಪರಿಮಿತವಾಗಿಯೂ ಆಯುಷ್ಯವು ಒಂದು ಪಲ್ಯ ಪ್ರಮಾಣವಾಗಿಯೂ ಶರೀರಕಾಂತಿಯು ಸುವರ್ಣಕ್ಕೆ ಸರಿಯಾಗಿಯೂ ಇರುತ್ತದೆ.

ಜೋ ಪುಣ ಕುಭೋಯಭೂಮೀಸು ಸಕ್ಕರಾಸಮಮಿಟ್ಟಯಾಹಾರಾ ||
ಫಲಪುಪ್ಫಹರಾ ಕೇಈ ತತ್ಥ ಪಲ್ಲಾಉಗಾ ಸವ್ವೇ || ೨೬೧ ||

ಯೇ ಪುನ: ಕುಭೋಗಭೂಮಿಷು ಶರ್ಕರಾಸಮಮಿಷ್ಟಾಹಾರಾಃ ||
ಫಲಪುಷ್ಪಾಹಾರಾ: ಕೇಚಿತ್ತತ್ರ ಪಲ್ಯಾಯುಷಃ ಸರ್ವೇ ||

ಅರ್ಥ:—ಯಾವ ಪುರುಷರು ಕುಭೋಗಭೂಮಿಯಲ್ಲಿ ಹುಟ್ಟುತ್ತಾರೋ, ಅವರು ಸಕ್ಕರೆಯಂತಿರುವ ಸವಿಯಾದ ಆಹಾರವನ್ನೂ ಫಲಪುಷ್ಪಗಳನ್ನೂ ತಿನ್ನುತ್ತಾರೆ. ಮತ್ತು ಅವರು ಒಂದು ಪಲ್ಯ ಬಾಳುತ್ತಾರೆ.

ಜಾಯಂತಿ ಜುಯಳಜುಯಳಾ ಊಣವಣ್ಣದಿಣೇಸಿ ಜೋವಣಂ ತೇಸಿ ||
ಸಮಚಉರಸಸಂಠಾಣಾ ವರವಜ್ಜಸರೀರಸಂಹಣಣಾ || ೨೬೨ ||

ಬಾಹತ್ತರಿಕಲಸಹಿಯಾ ಚಕವುಸಟ್ಠಿ ಗುಣಣ್ಣಿಯಾ ತಣುಕಸಾಯಾ ‖
ಬತ್ತೀಸಲಕ್ಖಣಹರಾ ಉಜ್ಜಮಸೀಲಾ ವಿಣೇಯಯಾ ಯ ‖ ೨೬೩ ‖
ಣವಮಾಸಾಉಗಿ ಸೇಸೇ ಗಬ್ಭಂ ಧರಿಊಣ ಸೂಇಸಮಯಮ್ಮಿ ‖
ಸುಹಮಿಚ್ಚುಣಾ ಮರಿತ್ತಾ ಣಿಯಮಾ ದೇವತ್ತ ಪಾವಂತಿ ‖ ೨೬೪ ‖

ಜಾಯಂತೇ ಯುಗಲಯುಗಲಾ ಏಕೋನಪಂಚಾಶದ್ದಿನೈರ್ಯೌವನಂ ತೇಭ್ಯಃ ‖
ಸಮಚತುರಸಂಸ್ಥಾನಾ ವರವಜ್ರಶರೀರಸಂಹನನಾಃ ‖
ದ್ವಾಸಪ್ತತಿಕಲಾಸಹಿತಾಶ್ಚತುಃಷಷ್ಠಿಗುಣಾನ್ವಿತಾಸ್ತನುಕಷಾಯಾ: ‖
ದ್ವಾತ್ರಿಂಶಲ್ಲಕ್ಷಣಧರಾ ಉದ್ಯಮಶೀಲಾ ವಿನೇಯಾಶ್ಚ ‖
ನವಮಾಸಾಯುಷಿ ಶೇಷೇ ಗರ್ಭಂ ಧೃತ್ವಾ ಸೂತಿಸಮಯೇ ‖
ಶುಭಮೃತ್ಯುನಾ ಮೃತ್ವಾ ನಿಯಮಾದ್ದೇವತ್ವಂ ಪ್ರಾಪ್ನುವಂತಿ ‖

ಅರ್ಥಃ—ಯಾವತ್ತೂ ಭೋಗಭೂಮಿಯಲ್ಲಿ ಹುಟ್ಟುವ ಜೀವಗಳು ಸ್ತ್ರೀಪುರುಷರ ಜತೆಯಿಂದ ಒಂದೇ ಸಮಯದಲ್ಲಿ ತಾಯಿಯ ಉದರದಲ್ಲಿ ಹುಟ್ಟುತ್ತವೆ. ೪೯ ದಿವಸಗಳಲ್ಲಿ ಆ ಸ್ತ್ರೀಪುರುಷರ ಯುಗ್ಮವು ತಾರುಣ್ಯವನ್ನು ಹೊಂದುತ್ತದೆ. ಆ ಜೀವಗಳ ದೇಹವು ಸಮಚತುರಸಂಸ್ಥಾನವುಳ್ಳದ್ದಾಗಿ, ವಜ್ರದಂತೆ ಕಠಿಣವಾಗಿರುತ್ತದೆ. ಆ ಜೀವಗಳು ೭೨ ಕಲೆಗಳಿಂದಲೂ ೬೪ ಗುಣಗಳಿಂದಲೂ ೩೨ ಲಕ್ಷಣಗಳಿಂದಲೂ ಯುಕ್ತವಾಗಿ, ಭೋಗವನ್ನು ಭೋಗಿಸುವದರಲ್ಲಿ ಉದ್ಯುಕ್ತವಾಗಿ ವಿನಯಶಾಲಿಗಳಾಗಿರುತ್ತವೆ. ಅವುಗಳ ಕಷಾಯವು ಕಡಿಮೆಯಾಗಿರುತ್ತದೆ. ಅವುಗಳ ಅಲ್ಲಿಯ ಆಯುಷ್ಯವು ತೀರಿ ಒಂಭತ್ತು ತಿಂಗಳು ಉಳಿಯಿತೆಂದರೆ, ಸ್ತ್ರೀ ಜೀವವು ಗರ್ಭಧಾರಣಮಾಡಿ, ಪ್ರಸೂತ ಸಮಯದಲ್ಲಿ ಜೊತೆಯಿಂದ ಶುಭಮರಣದಿಂದ ಸಾಯುತ್ತವೆ. ಅನಂತರ ದೇವಲೋಕಕ್ಕೆ ಹೋಗುತ್ತವೆ. ಭೋಗಭೂಮಿಯಲ್ಲಿರುವ ಜೀವಗಳಿಗೆ ದೇವಗತಿಯು ಹೊರ್ತು ಬೇರೆ ಗತಿಯು ಪ್ರಾಪ್ತವಾಗುವದಿಲ್ಲ. (ಈ ವಿಷಯವು ಮಿಥ್ಯಾದೃಷ್ಟಿಗಳಿಗೋಸ್ಕರ ಹೇಳಲ್ಪಟ್ಟಿತು. ಇನ್ನು ಮುಂದೆ ಸಮ್ಯಗ್ದೃಷ್ಟಿಗಳ ವಿಷಯದಲ್ಲಿ ಹೇಳುತ್ತಾರೆ.)

ತೇ ಪುಣ ಸಮ್ಮಾಇಟ್ಠೀ ವಿರಯಾವಿರಯಾ ವಿ ತಿವಿಹಪತ್ತಸ್ಸ ‖
ಜಾಯಂತಿ ದಾಣಫಲಓ ಕಪ್ಪೇಸು ಮಹದ್ಧಿಯಾ ದೇವಾ ‖ ೨೬೫ ‖
ಅಪ್ಪಚ್ಛರಸಯಮಜ್ಝಗಯಾ ತತ್ಥಾಣುಭೋಗಇ ವಿಬಿಹಸುರಸೋಕ್ಖಂ ‖
ತತ್ತೋ ಚುಯಾ ಸಮ್ಮಾಣಮಂಡಳೀಯಾಸು ಜಾಯಂತೇ ‖ ೨೬೬ ‖
ತತ್ಥ ವಿ ವಹುಪ್ಪಯಾರಂ ಮಣುಯಸುಹಂ ಭುಂಜಿಊಣ ಣಿವ್ವಿಗ್ಘಂ ‖
ವಿಗಯಭಯಾವ್ವೆರಗ್ಗಕಾರಣಂ ಕಿಂಚಿ ದಹ್ಣೂಣ ‖ ೨೬೭ ‖

ಪಡಿವುದ್ಧಿಊಣ ಚಇಊಣ ಣಿವಸಿರಿಂ ಸಂಜಮಂ ಚ ಘಿತ್ತೂಣ ॥
ಉಪ್ಪಾಇಊಣ ಣಾಣಂ ಕೇಈ ಗಚ್ಛಂತಿ ಣಿವ್ವಾಣಂ ॥ ೭೬೮ ॥
ಅಣ್ಣೇ ಸುದೇವತ್ತಸುವಾಣುಸತ್ತಂ ಪುಣೋ ಪುಣೋ ಲಹಿಊಣ ॥
ಸತ್ತಟ್ಠಭವೇ ಹಿ ತಓ ಕರಂತಿ ಕಮ್ಮಕ್ಖಯಂ ಣಿಯಮಾ ॥ ೭೬೯ ॥

ತೇ ಪುನಃ ಸಮ್ಯಗ್ದೃಷ್ಟಯೋ ವಿರತಾ ಅಪಿ ತ್ರಿವಿಧಪಾತ್ರಸ್ಯ ॥
ಜಾಯಂತೇ ದಾನಫಲತಃ ಕಲ್ಪೇಷು ಮಹರ್ಧಿಕಾ ದೇವಾಃ
ಅಪ್ಸರಃಶತಮಧ್ಯಗತಾಸ್ತತ್ರಾನುಭವಂತಿ ವಿವಿಧಸುರಸೌಖ್ಯಮ್ ॥
ತತಶ್ಚ್ಯುತಾಃ ಸಮ್ಮಾನ್ಯಮಣ್ಡಲೇಶ್ವರಾದಿಷು ಜಾಯಂತೇ ॥
ತತ್ರಾಪಿ ಬಹುಪ್ರಕಾರಂ ಮನುಜಸುಖಂ ಭುಕ್ತ್ವಾ ನಿರ್ವಿಘ್ನಮ್ ॥
ವಿಗತಭಯಾ ವೈರಾಗ್ಯಕಾರಣಂ ಕಿಂಚಿತ್ ದೃಷ್ಟ್ವಾ ॥
ಪ್ರತಿಬುದ್ಧ್ಯ ತ್ಯಕ್ತ್ವಾ ನೃಪಶ್ರಿಯಂ ಸಂಯಮಂ ಚ ಗೃಹೀತ್ವಾ ॥
ಉತ್ಪಾದ್ಯ ಜ್ಞಾನಂ ಕೇಚಿದ್ಗಚ್ಛಂತಿ ನಿರ್ವಾಣಮ್ ॥
ಅನ್ಯೇ ಸುದೇವತ್ವಸುಮಾನುಷ್ಯಂ ಪುನಃಪುನರ್ಲಬ್ಧ್ವಾ ॥
ಸಪ್ತಾಷ್ಟಭವೇ ಹಿ ತತಃ ಕುರ್ವಂತಿ ಕರ್ಮಕ್ಷಯಂ ನಿಯಮಾತ್ ॥

ಅರ್ಥಃ—ಪ್ರತಿ ಅಥವಾ ಅಪ್ರತಿಯಾದ ಸಮ್ಯಗ್‌ದೃಷ್ಟಿಗಳು ತ್ರಿವಿಧ ಪಾತ್ರಗಳಲ್ಲಿ ದಾನಮಾಡಿ, ಆ ದಾನಫಲದಿಂದ ಸ್ವರ್ಗದಲ್ಲಿ ಬಹು ಸಂಪತ್ತುಳ್ಳ ದೇವರಾಗಿ ಹುಟ್ಟುತ್ತಾರೆ; ಅಲ್ಲಿ ನೂರಾರು ಅಪ್ಸರ ಸ್ತ್ರೀಯರೊಡನೆ ಅನೇಕ ಪ್ರಕಾರದ ದಿವ್ಯಸುಖವನ್ನು ಭೋಗಿಸುತ್ತಾರೆ; ಸ್ವರ್ಗದಿಂದ ಚ್ಯುತರಾಗಿ, ಭೂಲೋಕದ ಮೇಲೆ ಶ್ರೇಷ್ಠರಾದ ಮಾಂಡಲೀಕ ಮುಂತಾದ ಅರಸರಾಗಿ ಹುಟ್ಟುತ್ತಾರೆ. ಅಲ್ಲಿಯಾದರೂ ಎಷ್ಟೋ ಪ್ರಕಾರದ ಉತ್ತಮ ಸುಖಗಳನ್ನನುಭವಿಸಿ, ನಿರ್ಭಯರಾಗಿರುತ್ತಾರೆ; ಕಡೆಗೆ ಯಾವದಾದರೊಂದು ವೈರಾಗ್ಯದ ಕಾರಣ ಉಂಟಾಗಲು ಅದನ್ನು ನೋಡಿ ಎಚ್ಚರಾಗುತ್ತಾರೆ; ಮತ್ತು ರಾಜಲಕ್ಷ್ಮಿಯನ್ನು ಬಿಟ್ಟು, ದೀಕ್ಷೆಯನ್ನು ಸ್ವೀಕರಿಸಿ, ತಪಸ್ಸು ಮಾಡುತ್ತಾರೆ. ಕೆಲವರು ತಪಸ್ಸನ್ನು ಆಚರಿಸಿ ಕೇವಲ ಜ್ಞಾನಿಗಳಾಗಿ, ಅದೇ ಜನ್ಮದಲ್ಲಿ ನಿರ್ವಾಣಪದವನ್ನು ಪಡೆಯುತ್ತಾರೆ. ಕೆಲವರು ಉತ್ತಮವಾದ ದೇವಪದವನ್ನೂ ಮತ್ತು ಮರಳಿ ಮರಳಿ ಶ್ರೇಷ್ಠವಾದ ಮನುಷ್ಯಜನ್ಮವನ್ನೂ ಭೋಗಿಸಿ, ಏಳೆಂಟು ಭವದಲ್ಲಾದರೂ ನಿಯಮದಿಂದ ಕರ್ಮಕ್ಷಯವನ್ನು ಮಾಡುತ್ತಾರೆ. ಅಂದರೆ ಮುಕ್ತಿಯನ್ನು ಹೊಂದುತ್ತಾರೆ.

ಏವಂ ಪತ್ತವಿಸೇಸಂ ದಾಣವಿಹಾಣಂ ಫಳಂ ಚ ಣಾಊಣ ॥
ಅತಿಹಿಸ್ಸ ಸಂವಿಭಾಗೋ ಕಾಯವ್ವೋ ದೇಸವಿರದೇಹಿಂ ॥ ೨೨೦ ॥

ಏವಂ ಪಾತ್ರವಿಶೇಷಂ ದಾನವಿಧಾನಂ ಫಲಂ ಚ ಜ್ಞಾತ್ವಾ ॥
ಅತಿಥೇಃ ಸಂವಿಭಾಗಃ ಕರ್ತವ್ಯೋ ದೇಶವಿರತೈಃ ॥

ಅರ್ಥ:—ಈ ಮೇರೆಗೆ ಪಾತ್ರವಿಶೇಷಗಳನ್ನೂ, ದಾನವಿಧಿಯನ್ನೂ, ಹಾಗು ದಾನದ ಫಲವನ್ನೂ ತಿಳಿದು, ದೇಶವಿರತರಾದ ಶ್ರಾವಕರು ನಿತ್ಯದಲ್ಲಿ ಅತಿಥಿ ಸಂವಿಭಾಗವನ್ನು ಮಾಡುತ್ತಿರಬೇಕು.

ಧರಿಊಣ ವತ್ಥಮತ್ತಂ ಪರಿಗ್ಗಹಂ ಛಂಡಿಊಣ ಅವಸೇಸಂ ॥
ಸಗಿಹೇ ಜಿಣಾಳಯೇ ವಾ ತಿವಿಹಾಹಾರಸ್ಸ ವೋಸರಣಂ ॥ ೨೭೧ ॥
ಜಂ ಕುಣಇ ಗುರುಪವಿಸಮ್ಮಿ ಸಮ್ಮವಾಲೋಇಊಣ ತಿವಿಹೇಣ ॥
ಸಲ್ಲೇಖಣಂ ಚಉತ್ಥಂ ಸುತ್ತೇ ಸಿಕ್ಖಾವಯಂ ಭಣಿಯಂ ॥ ೨೭೨ ॥

ಧೃತ್ವಾ ವಸ್ತ್ರಮಾತ್ರಂ ಪರಿಗ್ರಹಂ ತ್ಯಕ್ತ್ವಾವಶೇಷಮ್ ॥
ಸ್ವಗೃಹೇ ಜಿನಾಲಯೇ ವಾ ತ್ರಿವಿಧಾಹಾರಸ್ಯ ವ್ಯುತ್ಸರ್ಜನಮ್ ॥
ಯತ್ಕರೋತಿ ಗುರುಪ್ರದೇಶೇ ಸಮ್ಯಗಾಲೋಚ್ಯ ತ್ರಿವಿಧೇನ ॥
ಸಲ್ಲೇಖನಂ ಚತುರ್ಥಂ ಸೂತ್ರೇ ಶಿಕ್ಷಾವ್ರತಂ ಭಣಿತಮ್ ॥

ಅರ್ಥ:—ಅಂತರ್ಬಾಹ್ಯ ಪರಿಗ್ರಹಗಳನ್ನು ತ್ಯಜಿಸಿ, ವಸ್ತ್ರಮಾತ್ರ ಪರಿಗ್ರಹ ಇಟ್ಟು, ತನ್ನ ಮನೆಯಲ್ಲಿ ಅಥವಾ ಜಿನಮಂದಿರದಲ್ಲಿ ಗುರುಗಳ ಮುಂದೆ ತಾನು ಮಾಡಿದ ಅಪರಾಧವನ್ನು ಹೇಳಿ ಅನ್ನ, ಖಾದ್ಯ ಮತ್ತು ಲೇಹ್ಯ ಈ ತ್ರಿವಿಧ ಆಹಾರವನ್ನು ತ್ಯಾಗಮಾಡುವದು ಸಲ್ಲೇಖನವೆಂಬ ನಾಲ್ಕನೇ ಶಿಕ್ಷಾವ್ರತವು. ಹೀಗೆ ಶಾಸ್ತ್ರದಲ್ಲಿ ಹೇಳಿರುತ್ತದೆ.

ವಿಶೇಷಾರ್ಥವು:—ಮರಣ ಸಮಯದಲ್ಲಿ " ಇನ್ನು ನಾನು ನಿಜವಾಗಿ ಸಾಯುವವನೇ " ಹೀಗೆ ತನ್ನ ಮನಸ್ಸಿಗೆ ತಿಳಿದು ಬಂದರೆ, ಕ್ರೋಧ, ಮಾನ, ಮಾಯಾ, ಲೋಭವೆಂಬ ನಾಲ್ಕು ಕಷಾಯಗಳನ್ನೂ, ಆರ್ತ ರೌದ್ರಧ್ಯಾನವನ್ನೂ, ಸ್ಪರ್ಶ, ರಸ ಮುಂತಾದ ವಿಷಯಭೋಗಗಳನ್ನೂ, ರಾಗ, ದ್ವೇಷ, ಮೋಹ, ವಿಕಥೆ, ಹಿಂಸೆ ಈ ಪಂಚಮಹಾಪಾತಕಗಳನ್ನೂ, ವೈರಭಾವ, ಸ್ನೇಹಭಾವ, ಹಾಸ್ಯ, ರತಿ, ಅರತಿ, ಶೋಕ, ಭಯ, ಜುಗುಪ್ಸೆ ಮುಂತಾದ ಪಾಪಾಶ್ರವದ ಕಾರಣಗಳನ್ನೂ, ಬಿಟ್ಟು ಧರ್ಮಾತ್ಮನಾದ ಪುರುಷನು ಪರಿಮಿತವಸ್ತ್ರವನ್ನು ಧರಿಸಿ, ತ್ರಿವಿಧ ಆಹಾರವನ್ನು ಬಿಟ್ಟು, ಗುರುಗಳ ಮುಂದೆ ತನ್ನ ದೋಷವನ್ನು ದೊಡ್ಡಧ್ವನಿಯಿಂದ ಉಚ್ಚಾರ ಮಾಡಿ, ತ್ರಿಕರಣಪೂರ್ವಕವಾಗಿ ಸಲ್ಲೇಖನವನ್ನು ಮಾಡುವದಕ್ಕೆ ಶಿಕ್ಷಾವ್ರತವೆಂದು ಹೇಳುತ್ತಾರೆ. ಸಲ್ಲೇಖನವನ್ನು ಮಾಡುವ ಸಮಯದಲ್ಲಿ ದರ್ಶನ-ಜ್ಞಾನ- ಚಾರಿತ್ರ ಮತ್ತು ತಪಸ್ಸುಗಳ ಆರಾಧನೆಯನ್ನು ಮಾಡಬೇಕು. ದಶಲಾಕ್ಷಣಿಕಧರ್ಮ, ಷೋಡಶ ಭಾವನೆ, ಮತ್ತು ರತ್ನತ್ರಯ ಸ್ವರೂಪದ ಚಿಂತನೆಯನ್ನು ಮಾಡಬೇಕು. ಸ್ವದೇಹ, ಸಂಸಾರ ಮುಂತಾದವುಗಳ ಬಗ್ಗೆ ವಿರಕ್ತನಿರಬೇಕು. ಹೆಂಡರು, ಮಕ್ಕಳು ಅನ್ಯರೆಂದು ತಿಳಿದು, ಅವರಲ್ಲಿರುವ ಮೋಹವನ್ನು ಬಿಡಬೇಕು. ತನ್ನ ಮರಣದ ಬಗ್ಗೆ ದುಃಖವನ್ನು

ಮಾಡಬಾರದು. ವ್ಯವಹಾರನಯದಿಂದ ಪಂಚಪರಮೇಷ್ಠಿಗಳಿಗೆ ಶರಣ ಹೋಗಿ, ಜಿನಶಾಸ್ತ್ರ, ಜಿನಬಿಂಬ ಮುಂತಾದವುಗಳ ಸ್ಮರಣೆಯನ್ನು ಮಾಡಬೇಕು. ಅನ್ಯಪದಾರ್ಥಗಳ ಧ್ಯಾನವನ್ನು ಬಿಡಬೇಕು. ನಿಶ್ಚಯನಯದಿಂದ ಆತ್ಮಧ್ಯಾನವನ್ನು ಮಾಡಬೇಕು. ಅಸಾಧ್ಯರೋಗದಿಂದಾಗಲಿ ಅಥವಾ ಬೇರೆಕಾರಣದಿಂದಾಗಲಿ ಸ್ವಧರ್ಮವನ್ನು ರಕ್ಷಿಸುವ ಬಗ್ಗೆ ಧರ್ಮಧ್ಯಾನದಲ್ಲಿ ದೇಹ ಮುಂತಾದವುಗಳನ್ನು ತ್ಯಾಗ ಮಾಡುವದೇ ಸಲ್ಲೇಖನವೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ.

ಏವಂ ಬಾರಸಭೇಯಂ ವಯಠಾಣಂ ವಣ್ಣಿಯಂ ಮಏ ಬಿದಿಯಂ ||
ಸಾವಾಇಯಂ ತಿದೀಯಂ ಠಾಣಂ ಸಂಖೇವಓ ವೋಚ್ಛಂ || ೭೭೩ ||

ಏವಂ ದ್ವಾದಶಭೇದಂ ವ್ರತಸ್ಥಾನಂ ವರ್ಣಿತಂ ಮಯಾ ದ್ವಿತೀಯಮ್ ||
ಸಾಮಾಯಿಕಂ ತೃತೀಯಂ ಸ್ಥಾನಂ ಸಂಕ್ಷೇಪತೋ ವಕ್ಷ್ಯೇ ||

ಅರ್ಥ:—ಈ ಮೇರೆಗೆ ಹನ್ನೆರಡು ವ್ರತಗಳನ್ನು ಒಳಗೊಂಡ ವ್ರತಸ್ಥಾನವೆಂಬ ಎರಡನೆಯ ಪ್ರತಿಮೆಯ ವರ್ಣನೆಯನ್ನು ಸಂಕ್ಷೇಪದಿಂದ ಮಾಡಿದೆನು. ಮುಂದೆ ಸಾಮಾಯಿಕವೆಂಬ ಮೂರನೇ ಸ್ಥಾನವನ್ನು ಹೇಳುತ್ತೇನೆ.

## ಸಾಮಾಯಿಕ ಪ್ರತಿಮೆ.

ಹೋಊಣ ಸುಈ ಚೇಇಯ ಗಿಹಮ್ಮಿ ಸಗಿಹೇ ವ ಚೇಇಯಾಹಿಮುಹೋ ||
ಅಣ್ಣತ್ತ ಸುಇಪಏಸೇ ಪುವ್ವಮುಹೋ ಉತ್ತರಮುಹೋ ವಾ ೭೭೪ ||
ಜಿಣವಯಣಧಮ್ಮಚೇಇಯಪರಮೇಟ್ಠಿ ಜಿಣಾಲಯಾಣಿ ಣಿಚ್ಚಂ ಪಿ ||
ಜಂ ವಂದಣಂ ತಿಯಾಳಂ ಕೀರಇ ಸಾವಾಇಯಂ ತಂ ಖು || ೭೭೫ ||

ಭೂತ್ವಾ ಶುಚಿಶ್ಚೈತ್ಯಗೃಹೇ ಸ್ವಗೃಹೇ ವಾ ಚೈತ್ಯಾಭಿಮುಖಃ ||
ಅನ್ಯತ್ರ ಶುಚಿಪ್ರದೇಶೇ ಪೂರ್ವಮುಖ ಉತ್ತರಮುಖೋ ವಾ ||
ಜಿನವಚನಧರ್ಮಚೈತ್ಯಪರಮೇಷ್ಠಿ ಜಿನಾಲಯಾನಿತ್ಯಮಪಿ ||
ಯದ್ವಂದನಂ ತ್ರಿಕಾಲಂ ಕ್ರಿಯತೇ ಸಾಮಾಯಿಕಂ ತತ್ಖಲು ||

ಅರ್ಥಃ—ಸ್ನಾನಾದಿಗಳನ್ನು ಮಾಡಿಕೊಂಡು ಶುದ್ಧನಾಗಿ, ತನ್ನ ಮನೆಯಲ್ಲಿ ಅಥವಾ ಜಿನಾಲಯದಲ್ಲಿ ಜಿನಬಿಂಬದ ಸನ್ಮುಖವಾಗಿ ಅಥವಾ ಬೇರೆ ನಿರ್ಮಲವಾದ ಸ್ಥಳದಲ್ಲಿ ಪೂರ್ವ ಅಥವಾ ಉತ್ತರಾಭಿಮುಖನಾಗಿ ತ್ರಿಕಾಲದಲ್ಲಿ ಜಿನಶಾಸ್ತ್ರ, ಜಿನಧರ್ಮ, ಜಿನಬಿಂಬ ಜಿನಾಲಯ, ಮತ್ತು ಪಂಚಪರಮೇಷ್ಠಿಗಳಿಗೆ ವಂದನೆಯನ್ನು ಮಾಡುವದು ಸಾಮಾಯಿಕವೆಂದು ಹೇಳಲ್ಪಡುತ್ತದೆ.

ಕಾಉಸ್ಸಗ್ಗಮ್ಹಿ ಠಿಓ ಲಾಹಾಲಾಹಂ ಚ ಸತ್ತುಮಿತ್ತಂ ಚ ||
ಸಂಜೋಯವಿಪ್ಪಓಯಂ ತಿಣಕಂಚಣಚಂದಣಂ ವಾಸಿಂ || ೭೭೬ ||

ಜೋ ಪೆಸ್ಸಇ ಸಮಭಾವಂ ಮಣಮ್ಮಿ ಧರಿಊಣ ಪಂಚಣವ ಯಾರಂ ||
ವರಅಠ್ಠಪಾಡಿಹಾರೇಹಿ ಸಂಜುಯಂ ಜಿಣಸರೂವಂ ಚ || ೨೭೭ ||
ಸಿದ್ಧಸರೂವಂ ಝಾಯಇ ಅಹವಾ ಝಾಣುತ್ತಮಂ ಸಸಂವೇಯಂ ||
ಖಣಮೇಕಮವಿಚಳಂಗೋ ಉತ್ತಮಸಾವಾಇಯಂ ತಸ್ಸ || ೨೭೮ ||

ಕಾಯೋತ್ಸರ್ಗೇ ಸ್ಥಿತ್ವಾ ಲಾಭಾಲಾಭಂ ಚ ಶತ್ರುಮಿತ್ರಂ ಚ ||
ಸಂಯೋಗವಿಪ್ರಯೋಗಂ ತೃಣಕಾಂಚನಚಂದನವಾಸುಕಿಮ್ ||
ಯಃ ಪಶ್ಯತಿ ಸಮಭಾವಂ ಮನಸಿ ಧೃತ್ವಾ ಪಂಚನಮಸ್ಕಾರಮ್ ||
ವರಾಷ್ಟಪ್ರಾತಿಹಾರ್ಯೈಃ ಸಂಯುಕ್ತಂ ಜಿನಸ್ವರೂಪಂ ಚ ||
ಸಿದ್ಧಸ್ವರೂಪಂ ಧ್ಯಾಯತ್ಯಥವಾ ಧ್ಯಾನೋತ್ತಮಂ ಸ್ವಸಂವೇದನಮ್ ||
ಕ್ಷಣಮೇಕಮವಿಚಲಾಂಗ ಉತ್ತಮಸಾಮಾಯಿಕಂ ತಸ್ಯ ||

ಅರ್ಥ:—ಯಾವ ಪುರುಷನು ಕಾಯೋತ್ಸರ್ಗದಲ್ಲಿದ್ದು ಅಂದರೆ ಸರಳವಾಗಿ ಎದ್ದುನಿಂತು, ಲಾಭ-ಹಾನಿ, ಶತ್ರು-ಮಿತ್ರ, ಸಂಯೋಗ- ವಿಯೋಗ, ತೃಣ-ಕಾಂಚನ, ಚಂದನ-ಸರ್ಪ ಈ ಯಾವತ್ತು ವಸ್ತುಗಳನ್ನು ಸಮವಾಗಿ ತಿಳಿಯುತ್ತಾನೆ. ಪಂಚ ನಮಸ್ಕಾರ ಮಂತ್ರವನ್ನು ಮನಸ್ಸಿನಲ್ಲಿ ತಂದು, ಶ್ರೇಷ್ಠವಾದ ಎಂಟು ಪ್ರಾತಿಹಾರ್ಯಗಳಿಂದ ಯುಕ್ತವಾದ ಶ್ರೀಜಿನದೇವರ ಸ್ವರೂಪವನ್ನು ಮತ್ತು ಸಿದ್ಧಸ್ವರೂಪವನ್ನು ಧ್ಯಾನ ಮಾಡುತ್ತಾನೋ, ಅಥವಾ ಸರ್ವಧ್ಯಾನದಲ್ಲಿ ಶ್ರೇಷ್ಠವಾದ ಆತ್ಮಸ್ವರೂಪವನ್ನು ಒಂದು ಕ್ಷಣಮಾತ್ರವಾದರೂ ನಿಶ್ಚಲನಾಗಿ ನೋಡುತ್ತಾನೋ, ಅವನ ಸಾಮಾಯಿಕವು ಉತ್ತಮವಾದದ್ದು.

ಏವಂ ತಿದಿಯಂ ಠಾಣಂ ಭಣಿಯಂ ಸಾವಾಇಯಂ ಸಮಾಸೇಣ ||
ಪೋಸಹವಿಹಿಂ ಚಉತ್ಥಂ ಠಾಣಂ ಏದೋ ಪವಕ್ಖಾಮಿ || ೨೭೯ ||

ಏವಂ ತೃತೀಯಂ ಸ್ಥಾನಂ ಭಣಿತಂ ಸಾಮಾಯಿಕಂ ಸಮಾಸೇನ ||
ಪ್ರೋಷಧವಿಧಿಂ ಚತುರ್ಥಂ ಸ್ಥಾನಮಿತಃ ಪ್ರವಕ್ಷ್ಯಾಮಿ ||

ಅರ್ಥಃ—ಈ ಪ್ರಕಾರ ಸಾಮಾಯಿಕವೆಂಬ ಶ್ರಾವಕನ ಮೂರನೇ ಸ್ಥಾನವು ಸಂಕ್ಷೇಪದಿಂದ ಹೇಳಲ್ಪಟ್ಟಿತು. ಇನ್ನು ಮುಂದೆ ಪ್ರೋಷಧೋಪವಾಸವನು ಹೇಳುತ್ತೇನೆ.

## ಪ್ರೋಷಧೋಪವಾಸ ಪ್ರತಿಮಾ

ಉತ್ತಮಮಜ್ಝಜಹಣ್ಣಂ ತಿವಿಹಂ ಪೋಸಹವಿಹಾಣಮುದ್ದಿಠ್ಠಂ ||
ಸಗಸತ್ತಿ ಏಯಮಾಸಮ್ಮಿ ಚಉಸ್ಸು ಪವ್ವೇಸು ಕಾಯವ್ವಂ || ೨೮೦ ||

ಉತ್ತಮಮಧ್ಯಮಜಘನ್ಯಂ ತ್ರಿವಿಧಂ ಪ್ರೋಷಧವಿಧಾನಮುದ್ದಿಷ್ಟಮ್ ॥
ಸ್ವಶಕ್ತ್ಯೈಕಮಾಸೇ ಚತುರ್ಷು ಪರ್ವಸು ಕರ್ತವ್ಯಮ್ ॥

ಅರ್ಥ:—ಉತ್ತಮ, ಮಧ್ಯಮ, ಜಘನ್ಯವೆಂದು ಪ್ರೋಷಧೋಪವಾಸದ ಮೂರು ಭೇದಗಳಿರುತ್ತವೆ. ತನ್ನ ಶಕ್ತ್ಯನುಸಾರವಾಗಿ ಪ್ರತಿ ಒಂದು ಮಾಸದ ನಾಲ್ಕು ಪರ್ವಗಳಲ್ಲಿ ಪ್ರೋಷಧೋಪವಾಸವನ್ನು ಮಾಡಬೇಕು.

ಸತ್ತಮಿತೇರಸಿದಿವಸಮ್ಮಿ ಅತಿಹಿಜಣಭೋಯಣಾವಸಾಣಮ್ಮಿ ॥
ಭೋತ್ತೂಣ ಭುಂಜಣಿಜ್ಜಂ ತತ್ಥವಿ ಕಾಊಣ ಮುಹುಸುದ್ಧಿಂ॥೨೮೧॥

ಸಪ್ತಮೀತ್ರಯೋದಶೀದಿವಸೇತಿಥಿಜನಭೋಜನಾವಸಾನೇ ॥
ಭುಕ್ತ್ವಾ ಭೋಜನಂ ಯೋಗ್ಯಂ ತತ್ರಾಪಿ ಕೃತ್ವಾ ಮುಖಶುದ್ಧಿಮ್ ॥

ಅರ್ಥ:—ಪ್ರತಿಒಂದು ತಿಂಗಳದ ಶುಕ್ಲ ಮತ್ತು ಕೃಷ್ಣಪಕ್ಷದ ಸಪ್ತಮೀ ಮತ್ತು ತ್ರಯೋದಶೀ ತಿಥಿಯ ದಿವಸಗಳಲ್ಲಿ ಅತಿಥಿಗಳ ಭೋಜನವಾದ ಮೇಲೆ, ತಾನು ಪ್ರಾಸುಕಾಹಾರವನ್ನು ತೆಗೆದುಕೊಂಡು, ಆ ಮೇಲೆ ಮುಖಶುದ್ಧಿಯನ್ನು ಮಾಡಿ,

ಪಕ್ಖಾಲಿಊಣ ವಯಣಂ ಕರಚರಣೇ ಣಿಯಮಿಊಣ ತತ್ಥೇವ ॥
ಪಚ್ಛಾ ಜಿಣಿಂದಭವಣಂ ಗಂತೂಣ ಜಿಣಾ ಣಮಂಸಿತ್ತಾ ॥ ೨೮೨ ॥

ಪ್ರಕ್ಷಾಲ್ಯ ವದನಂ ಕರಚರಣೌ ನಿಯಮಿತ್ವಾ ತತ್ರೈವ ॥
ಪಶ್ಚಾಜ್ಜಿನೇಂದ್ರಭವನಂ ಗತ್ವಾ ಜಿನಾನ್ನಮಸ್ಕೃತ್ಯ ॥

ಅರ್ಥಃ–ಮುಖ ಕೈಕಾಲುಗಳನ್ನು ತೊಳೆದುಕೊಂಡು ಅದೇ ಸ್ಥಳದಲ್ಲಿ ಉಪವಾಸದ ನಿಯಮವನ್ನು ಮನಸ್ಸಿನಲ್ಲಿ ತಂದು, ಜಿನಮಂದಿರಕ್ಕೆ ಹೋಗಿ ಶ್ರೀಜಿನೇಶ್ವರನಿಗೆ ವಂದನೆಯನ್ನು ಮಾಡಿ,

ಗುರುಪುರಉ ಕಿರಿಯ ಕಮ್ಮಂ ವಂದಣಪುವ್ವಂ ಕಮೇಣ ಕಾಊಣ ॥
ಗುರುಸಕ್ಖಿಯಮುವವಾಸಂ ಗಹಿಊಣ ಚಉವಿಹಂ ವಿಹಿಣಾ ॥ ೨೮೩ ॥

ಗುರುಪುರತಃ ಕೃತ್ವಾ ಕರ್ಮ ವಂದನಪೂರ್ವಂ ಕ್ರಮೇಣ ಕೃತ್ವಾ ॥
ಗುರುಸಾಕ್ಷಿಕಮುಪವಾಸಂ ಗೃಹೀತ್ವಾ ಚತುರ್ವಿಧಂ ವಿಧಿನಾ ॥

ಅರ್ಥ:—ಗುರುಗಳಿಗೆ ಒಂದನೆಯನ್ನು ಮಾಡಿ, ಅವರ ಮುಂದೆ ಆಲೋಚನೆ ( ತಾನು ಮಾಡಿದ ಪಾಪಗಳನ್ನು ಹೇಳಿ ) ಮಾಡಿ, ಗುರುಗಳ ಸಾಕ್ಷಿಯಿಂದ ವಿಧಿಪೂರ್ವಕವಾಗಿ ಚತುರ್ವಿಧ ಆಹಾರವನ್ನು ಬಿಟ್ಟು, ಉಪವಾಸ ವ್ರತವನ್ನು ತೆಗೆದುಕೊಂಡು,

ವಾಯಣಕಹಾಣುಪೇಹಣಸಿಕ್ಖಾವಣಚಿಂತಣಾಇಉವಜೋಗೇಹಿಂ ॥
ಣೇಊಣ ದಿವಸಂ ಸೇಸಂ ಅವರಾಣ್ಹಿಯವಂದಣಂ ಕಿಚ್ಚಾ ॥ ೨೮೪ ॥

ವಾಚನಕಥಾನುಪ್ರೇಕ್ಷಣಶಿಕ್ಷಣಚಿಂತನಾದ್ಯುಪಯೋಗ್ಯೈಃ ॥
ನೀತ್ವಾ ದಿವಸಂ ಶೇಷಮುಪರಾಹ್ಣಿಕವಂದನಂ ಕೃತ್ವಾ ॥

ಅರ್ಥ:—ಶಾಸ್ತ್ರವನ್ನು ಓದುವದೂ, ಶಲಾಕಾಪುರುಷರ ಕಥೆಗಳನ್ನು ಹೇಳುವದೂ ಮತ್ತು ಕೇಳುವದೂ, ೧೨ ಅನುಪ್ರೇಕ್ಷೆಗಳ ಭಾವನೆಯನ್ನು ಮಾಡುವದೂ, ಎರಡನೆಯವರಿಗೆ ಶಾಸ್ತ್ರಕಲಿಸುವದೂ, ಪಂಚಪರಮೇಷ್ಠಿಗಳ ಭಾವನೆ ಮಾಡುವದೂ ಮುಂತಾದ ಕ್ರಿಯೆಗಳಿಂದ ಉಳಿದ ದಿವಸವನ್ನು ಕಳೆದು, ಸಾಯಂಕಾಲದಲ್ಲಿ ದೇವತಾವಂದನ ಮುಂತಾದ ಸಾಮಾಯಕ ಕ್ರಿಯೆಗಳನ್ನು ಮಾಡಿ,

ರಯಣಿಸಮಯಮ್ಹಿ ಠಿಚ್ಚಾ ಕಾಉಸ್ಸಗ್ಗೇಣ ಣಿಯಸತ್ತೀಏ ॥
ಪಡಿಲೇಹಿಊಣ ಭೂಮಿಂ ಅಪ್ಪಪಮಾಣೇಣ ಸಂಥಾರಂ ॥ ೨೮೫ ॥

ರಾತ್ರಿಸಮಯೇ ಸ್ಥಿತ್ವಾ ಕಾಯೋತ್ಸರ್ಗೇಣ ನಿಜಶಕ್ತ್ಯಾ ॥
ಪ್ರತಿಲೇಖ್ಯ ಭೂಮಿಮಾತ್ಮಪ್ರಮಾಣೇನ ಸಂಥಾರಮ್ ॥

ಅರ್ಥ:—ರಾತ್ರಿಕಾಲದಲ್ಲಿ ತನ್ನ ಶಕ್ತಿ ಇದ್ದಷ್ಟು ತನ್ನ ನಿಲುವಿನಷ್ಟು ಭೂಮಿಯ ಮೇಲೆ ರೇಖೆಯನ್ನು ಕೊರೆದು, ಅದರ ಹೊರಗೆ ಹೋಗಲಿಕ್ಕಿಲ್ಲೆಂದು ಪ್ರತಿಜ್ಞೆಯನ್ನು ಮಾಡಿ, ಕಾಯೋತ್ಸರ್ಗದಿಂದ ನಿಂತು,

ಣೇಊಣ ಕಿಂಚಿ ರತ್ತಿಂ ಸಇಊಣ ಜಿಣಾಳಏ ಣಿಯಘರೇ ವಾ ॥
ಅಹವಾ ಸಯಳಂ ರತ್ತಿಂ ಕಾಉಸ್ಸಗ್ಗೇಣ ಣೇಊಣ ॥ ೨೮೬ ॥

ನೀತ್ವಾ ಕಿಂಚಿದ್ರಾತ್ರಿಂ ಶಯಿತ್ವಾ ಜಿನಾಲಯೇ ನಿಜಗೃಹೇ ವಾ ॥
ಅಥವಾ ಸಕಲಾಂ ರಾತ್ರಿಂ ಕಾಯೋತ್ಸರ್ಗೇಣ ನೀತ್ವಾ ॥

ಅರ್ಥ:--ಅಶಕ್ತನಿದ್ದರೆ ಸ್ವಲ್ಪ ರಾತ್ರಿಯ ತನಕ ಕಾಯೋತ್ಸರ್ಗದಿಂದ ನಿಂತು, ಆ ಮೇಲೆ ಜಿನಮಂದಿರದಲ್ಲಿ ಅಥವಾ ತನ್ನ ಮನೆಯಲ್ಲಿ ಆಸನವನ್ನು ಮಾಡಿ, ಇಲ್ಲವೆ ಶಯನಮಾಡಿ, ಶಕ್ತಿಯಿದ್ದರೆ ಎಲ್ಲ ರಾತ್ರಿಯನ್ನು ಕಾಯೋತ್ಸರ್ಗದಿಂದ ಕಳೆದು,

ಪಚ್ಚೂಸ್ಸೇ ಉಟ್ಠಿತ್ತಾ ವಂದಣವಿಹಿಣಾ ಜಿಣಾ ಣಮಂಸಿತ್ತಾ ॥
ತಹ ದವ್ವಭಾವಪುಜ್ಜಂ ಜಿಣಸುಯಸಾಹೂಣ ಕಾಊಣ ॥ ೨೮೭ ॥

ಪ್ರತ್ಯೂಷ ಉತ್ಥಾಯ ವಂದನವಿಧಿನಾ ಜಿನಾನ್ನಮಸ್ಕೃತ್ಯ ॥
ತಥಾ ದ್ರವ್ಯಭಾವಪೂಜಾಂ ಜಿನಶ್ರುತಸಾಧೂನಾಂ ಕೃತ್ವಾ ॥

ಅರ್ಥ:—ಅಷ್ಟಮೀ ಮತ್ತು ಚತುರ್ದಶೀ ದಿವಸದಲ್ಲಿ ಪ್ರಾತಃಕಾಲದಲ್ಲೆದ್ದು, ವಿಧಿಪೂರ್ವಕ ನಮಸ್ಕಾರ ಮಾಡಿ, ಆ ಮೇಲೆ ಜಿನೇಶ್ವರ, ಜಿನಶಾಸ್ತ್ರ, ಜಿನಸಾಧು ಇವರ ದ್ರವ್ಯ ಮತ್ತು ಭಾವಪೂಜೆಯನ್ನು ಮಾಡಿ,

ಸುತ್ತವಿಹಾಣೇಣ ತಹಾ ದಿಣ್ಣಂ ರತ್ತಿಂ ಪುಣೋ ವಿ ಗಮಿಊಣ ||
ಪಾರಣದಿವಸಮ್ಮಿ ಪುಣೋ ಪೂಜಂ ಕಾಊಣ ಪುವ್ವಂ ವಾ || ೨೮೮ ||

ಸೂತ್ರವಿಧಾನೇನ ತಥಾ ದಿನಂ ರಾತ್ರಿಂ ಪುನರಪಿ ಗಮಯಿತ್ವಾ ||
ಪಾರಣದಿವಸೇ ಪುನಃ ಪೂಜಾಂ ಕೃತ್ವಾ ಪೂರ್ವವತ್ ||

ಅರ್ಥಃ—ಶಾಸ್ತ್ರೋಕ್ತವಿಧಿಯಿಂದ ಆ ದಿವಸವನ್ನು ಮತ್ತು ರಾತ್ರಿಯನ್ನು ಕಳೆಯಬೇಕು. ಪಾರಣೆಯ ದಿವಸದಲ್ಲಿ ಪುನಃ ಮೊದಲಿನಂತೆ ಯಾವತ್ತು ಕಾರ್ಯವನ್ನು ನೆರವೇರಿಸಿ,

ಗಂತೂಣ ಯ ಣಿಯಗೇಹಂ ಅತಿಹಿವಿಭಾಗಂ ಚ ತತ್ಥ ಕಾಊಣ ||
ಜೋ ಭುಂಜಇ ತಸ್ಸ ಫುಡಂ ಪೋಸಹವಿಹಿ ಉತ್ತಮಂ ಹೋಈ || ೨೮೯ ||

ಗತ್ವಾ ಚ ನಿಜಗೇಹಮತಿಥಿವಿಭಾಗಂ ಚ ತತ್ರ ಕೃತ್ವಾ ||
ಯೋ ಭುಂಜತಿ ತಸ್ಯ ಸ್ಫುಟಂ ಪ್ರೋಷಧವಿಧಿರುತ್ತಮೋ ಭವತಿ ||

ಅರ್ಥ:—ಅನಂತರ ತನ್ನ ಮನೆಗೆ ಬಂದು, ಸತ್ಪಾತ್ರದಲ್ಲಿ ದಾನವನ್ನು ಮಾಡಿ, ಆ ಮೇಲೆ ಭೋಜನವನ್ನು ಮಾಡುವವನ ಪ್ರೋಷಧವಿಧಿಯು ಉತ್ತಮವಾದದ್ದಿರುತ್ತದೆ.

ಜಹ ಉಕ್ಕಸ್ಸ ತಹಾ ಮಜ್ಝಮವಿ ಪೋಸಹವಿಹಾಣಮುದ್ದಿಠ್ಠಂ ||
ಣವರವಿಸೇಸೋ ಸಲಿಲಂ ಛಂಡಿತ್ತಾ ವಜ್ಜಏ ಸೇಸಂ || ೨೯೦ ||

ಯಥೋತ್ಕೃಷ್ಟಂ ತಥಾ ಮಧ್ಯಮಮಪಿ ಪ್ರೋಷಧವಿಧಾನಮುದ್ದಿಷ್ಟಮ್ ||
ನಾಪರವಿಶೇಷಃ ಸಲಿಲಂ ತ್ಯಕ್ತ್ವಾ ವರ್ಜಯೇಚ್ಛೇಷಮ್ ||

ಅರ್ಥಃ—ಉತ್ಕೃಷ್ಟ ಪ್ರೋಷಧೋಪವಾಸದ ನಿಯಮವೇ ಮಧ್ಯಮ ಪ್ರೋಷಧೋಪವಾಸಕ್ಕೂ ಇರುತ್ತದೆಂದು ತಿಳಿಯಬೇಕು. ಭೇದವೇನಂದರೆ, ಉಪವಾಸದ ದಿವಸದಲ್ಲಿ ಒಮ್ಮೆ ನೀರುಕುಡಿಯುವ ನಿಯಮವನ್ನು ಇಟ್ಟು, ಉಳಿದ ಯಾವತ್ತು ಪ್ರಕಾರದ ಆಹಾರವನ್ನು ಬಿಡಬೇಕು.

ಮುಣಿಊಣ ಗುರುವಕಜ್ಜಂ ಸಾವಜ್ಜ ವಿವಜ್ಜಿಊಣ ಣಿರಾರಂಭಂ ||
ಜಇ ಕುಣಇ ತಂ ಪಿ ಕುಜ್ಜಾ ಸೇಸಂ ಪುವ್ವಂವ ಣಾಯವ್ವಂ || ೨೯೧ ||

ಜ್ಞಾತ್ವಾ ಗರಿಷ್ಟಕಾರ್ಯಂ ಸಾವದ್ಯಂ ವರ್ಜಯಿತ್ವಾ ನಿರಾರಂಭಮ್ ||
ಯದಿ ಕರೋತಿ ತದಪಿ ಕುರ್ಯಾಚ್ಛೇಷಂ ಪೂರ್ವವತ್ಜ್ಞಾತವ್ಯಮ್ ||

ಅರ್ಥ:—ಪ್ರೋಷಧೋಪವಾಸವು ಬಹಳ ಮಹತ್ವವುಳ್ಳ ಕಾರ್ಯವೆಂದು ತಿಳಿದು, ಪಾಪ ಕೃತ್ಯಗಳನ್ನು ಬಿಟ್ಟು, ಆರಂಭ ( ಸಂಸಾರಸಂಬಂಧದ ಉದ್ಯೋಗ ) ವಿರತನಾಗಿ, ಮಧ್ಯಮಪ್ರೋಷಧೋಪವಾಸವನ್ನು ಮಾಡಿದರೆ, ಅದು ಉತ್ತಮ ಪ್ರೋಷಧೋಪವಾಸದಂತೆ ಆಗುತ್ತದೆ.

ಆಯಂವಿಲಂ ಯ ಣಿಯಡೀ ಏಯತ್ಥಾಣಂ ಚ ಏಯಭುತ್ತಂ ವಾ ॥
ಜಂ ಕೀರಇ ತಂ ಣೇಯಂ ಜಹಣ್ಣಯಂ ಪೋಸಹವಿಹಾಣಂ ॥ ೨೯೨ ॥

ಆಂಬಿಲಂ ಚ ನಯಡೀ (?) ಏಕಸ್ಥಾನಂ ಚೈಕಭುಕ್ತಂ ವಾ ॥
ಯತ್ಕ್ರಿಯತೇ ತಜ್ಜ್ಞೇಯಂ ಜಘನ್ಯಂ ಪ್ರೋಷಧವಿಧಾನಮ್ ॥

ಅರ್ಥಃ—ಮಧ್ಯಮ ಪ್ರೋಷಧೋಪವಾಸ ಮಾಡುವಷ್ಟು ಶಕ್ತಿಯಿಲ್ಲದವನು ಪೇಯವನ್ನಾಗಲಿ, ಉಪ್ಪುಹಾಕದ ಯಾವದಾದರೊಂದು ಪದಾರ್ಥವನ್ನಾಗಲಿ, ಒಂದು ಸ್ಥಳದಲ್ಲಿ ಒಂದು ಸಾರೆ ಊಟವನ್ನಾಗಲಿ ಅಥವಾ ಊಟದ ಪಾತ್ರೆಯಲ್ಲಿ ಮೊದಲಿಗೆ ಬಿದ್ದಂಥ ಪದಾರ್ಥವನ್ನಾಗಲಿ ತಿನ್ನಬೇಕು. ಉಳಿದ ವಿಧಿಯನ್ನು ಉತ್ತಮವಾದ ಪ್ರೋಷಧೋಪವಾಸದಂತೆ ಮಾಡಬೇಕು. ಇದಕ್ಕೆ ಜಘನ್ಯ ಪ್ರೋಷಧೋಪವಾಸವೆಂದು ಅನ್ನುತ್ತಾರೆ.

ಸಿರಣ್ಹಾಣುವಟ್ಟಣಗಂಧಮಳಕೇಸಾಇದೇಹಸಂಕಪ್ಪಂ ॥
ಅಣ್ಣಂ ಪಿ ರಾಗಹೇಊ ವಿವಜ್ಜಏ ಪೋಸಹದಿಣಮ್ಮಿ ॥ ೨೯೩ ॥

ಶಿರಃಸ್ನಾನೋದ್ವರ್ತನಗಂಧಮಾಲಾಕೇಶಾದಿದೇಹಸಂಸ್ಕಾರಮ್ ॥
ಅನ್ಯದಪಿ ರಾಗಹೇತುಂ ವಿವರ್ಜಯೇತ್ಪ್ರೋಷಧದಿನೇಷು ॥

ಅರ್ಥಃ— ಪ್ರೋಷಧೋಪವಾಸದ ದಿವಸದಲ್ಲಿ ಶಿರಃಸ್ನಾನ, ಶರೀರಕ್ಕೆ ಸುಗಂಧದ್ರವ್ಯಗಳನ್ನು ಹಚ್ಚುವದು, ಗಂಧ ಮತ್ತು ಪುಷ್ಪಮಾಲೆಯನ್ನು ಧರಿಸಿಕೊಳ್ಳುವದು, ಕೂದಲು ಮತ್ತು ದೇಹ ಇವುಗಳ ಸಂಸ್ಕಾರ ಅಂದರೆ ನಟಿಸುವದು ಮುಂತಾದ ಮತ್ತು ಇದೇ ಪ್ರಕಾರದ ರಾಗವ (ವಿಷಯವಾಸನೆಯ)ನ್ನುಂಟು ಮಾಡುವ ಸಂಗತಿಗಳನ್ನು ಮಾಡಬಾರದು.

ಏವಂ ಚಉತ್ಥಠಾಣಂ ವಿವಣ್ಣಿಯಂ ಪೋಸಹಂ ಸಮಾಸೇಣ ॥
ಏದೋ ಕಮೇಣ ಸೇಸಾಣಿ ಸುಣಹ ಸಂಖೇವಓ ವೋಚ್ಛಂ ॥ ೨೯೪ ॥

ಏವಂ ಚತುರ್ಥಸ್ಥಾನಂ ವಿವರ್ಣಿತಂ ಪ್ರೋಷಧಂ ಸಮಾಸೇನ ॥
ಇತಃ ಕ್ರಮೇಣ ಶೇಷಾಣಿ ಶೃಣುತ ಸಂಕ್ಷೇಪತೋ ವಕ್ಷ್ಯೇ ॥

ಅರ್ಥ:—ಈ ಪ್ರಕಾರ ಪ್ರೋಷಧೋಪವಾಸವೆಂಬ ನಾಲ್ಕನೆಯ ಸ್ಥಾನವನು ಸಂಕ್ಷೇಪವಾಗಿ ಹೇಳಿದೆನು. ಉಳಿದ ವಿಷಯಗಳನ್ನು ಕ್ರಮದಿಂದ ಸಂಕ್ಷೇಪದಿಂದ ಹೇಳುತ್ತೇನೆ. ಕೇಳಿರಿ—

## ಸಚಿತ್ತತ್ಯಾಗಪ್ರತಿಮೆ.

ಜಂ ವಜ್ಜಿಜ್ಜಂ ಹರಿಯಂ ತುಯಪತ್ತಪವಾಳಕಂದಫಳಬೀಯಂ ॥
ಅಪ್ಪಾಸುಗಂ ಚ ಸಳಿಳಂ ಸಚಿತ್ತವಿಣಿವಿತ್ತಿ ತಂ ಠಾಣಂ ॥ ೨೯೫ ॥

ಯದ್ವರ್ಜ್ಯತೇ ಹರಿತಂ ತ್ವಕ್ಪತ್ರಪ್ರವಾಲಕಂದಫಲಬೀಜಮ್ ||
ಅಪ್ರಾಸುಕಂ ಚ ಸಲಿಲಂ ಸಚಿತ್ತನಿನಿವೃತತ್ಸ್ತಸ್ಥಾನಮ್ ||

ಅರ್ಥ:--ಗಿಡದ ತೊಂಟೆ, ಎಲೆ, ಮೊಳಕೆ, ಕಂದ, ಫಲ, ಬೀಜ ಮೊದಲಾದ ಪದಾರ್ಥಗಳು ಹಸರಿರುವಾಗ ಅಂದರೆ ಪ್ರಾಸುಕವಿಲ್ಲದ ಪದಾರ್ಥಗಳನ್ನು ತಿನ್ನುವದು, ಅಪ್ರಾಸುಕ (ಕಾಸಿ ಶುದ್ಧಮಾಡದ) ನೀರು ಕುಡಿಯುವದು ಮುಂತಾದ ಕ್ರಿಯೆಗಳನ್ನು ಬಿಟ್ಟವನು ಸಚಿತ್ತತ್ಯಾಗಿಯೆನಿಸುವನು.

## ದಿವಾ ಬ್ರಹ್ಮಚರ್ಯಪ್ರತಿಮೆ.

ಮಣವಯಣಕಾಯಕಯಕಾರಿಯಾಣುಮೋಏಹಿಂ ಮೇಹುಣಂ ಣವಧಾ ||
ದಿವಸಮ್ಮಿ ಜೋ ವಿವಜ್ಜಇ ಗುಣಮ್ಮಿ ಸೋ ಸಾವಓ ಛಠ್ಠೋ || ೨೯೬ ||

ಮನೋವಚನಕಾಯಕೃತಕಾರಿತಾನುಮೋದೈರ್ಮೈಥುನಂ ನವಧಾ ||
ದಿವಸೇ ಯೋ ವಿವರ್ಜಯತಿ ಗುಣಿತೇ ಸ ಶ್ರಾವಕ: ಷಷ್ಠಃ ||

ಅರ್ಥ:—ಮನ-ವಚನ-ಕಾಯಗಳಿಗೆ ಕೃತ-ಕಾರಿತ-ಅನುಮೋದನಗಳಿಂದ ಗುಣಿಸುವದರಿಂದ ಅಂದರೆ ಒಂಭತ್ತು ಭೇದಗಳಿಂದ ದಿವಸದಲ್ಲಿ ಸ್ವಸ್ತ್ರೀಯನ್ನು ಸಹ ಬಯಸದಿರುವವನು ೬ನೆಯ ಪ್ರತಿಮೆಯ ಶ್ರಾವಕನು. ಈ ಪ್ರತಿಮೆಯಲ್ಲಿ ರಾತ್ರಿ ಭೋಜನವು ನಿಷಿದ್ಧವೆಂದು ಹೇಳಿದ್ದರಿಂದ ಇದಕ್ಕೆ ರಾತ್ರಿಭುಕ್ತಿತ್ಯಾಗವೆಂಬ ಹೆಸರು.

## ಬ್ರಹ್ಮಚರ್ಯಪ್ರತಿಮೆ.

ಪುವ್ವುತ್ತಣವವಿಹಾಣಂ ಪಿ ಮೇಹುಣಂ ಸವ್ವದಾ ವಿವಜ್ಜಂತೋ ||
ಇತ್ಥಿಕಹಾಇಣಿವಿತ್ತೋ ಸತ್ತಮಗುಣವಂಭಯಾರೀ ಸೋ || ೨೯೭ ||

ಪೂರ್ವೋಕ್ತನವವಿಧಾನಮಪಿ ಮೈಥುನಂ ಸರ್ವದಾ ವಿವರ್ಜಯನ್ ||
ಸ್ತ್ರೀಕಥಾದಿನಿವೃತ್ತಃ ಸಪ್ತಮಗುಣಬ್ರಹ್ಮಚಾರೀ ಸಃ ||

ಅರ್ಥಃ—ಮೊದಲು ಹೇಳಲ್ಪಟ್ಟ ಒಂಭತ್ತು ಪ್ರಕಾರಗಳಿಂದ ಯಾವಾಗಲೂ ಮೈಥುನವನ್ನು ಮಾಡದವನೂ ಸ್ತ್ರೀಯರ ಸಂಬಂಧದ ಮಾತುಗಳನ್ನೂ ಕಾಮೋತ್ತೇಜಕವಾದ ಪದಾರ್ಥಗಳನ್ನೂ ಬಿಡುವವನೂ ಬ್ರಹ್ಮಚಾರಿಯೆಂಬ ೭ನೇ ಶ್ರಾವಕನು.

## ಆರಂಭತ್ಯಾಗಪ್ರತಿಮೆ.

ಜಂ ಕಿಂಚಿ ಗಿಹಾರಂಭಂ ವಹು ಥೋಗಂ ವಾ ಸಯಾ ವಿವಜ್ಜೇಈ ||
ಆರಂಭಣಿಯಟ್ಟಮಈ ಸೋ ಅಠ್ಠಮು ಸಾವಓ ಭಣಿಓ || ೨೯೮ ||

ಯತ್ಕಿಂಚಿದ್ಗೃಹಾರಂಭಂ ಬಹು ಸ್ತೋಕಂ ವಾ ಸದಾ ವಿವರ್ಜಯತಿ ||
ಆರಂಭನಿವೃತ್ತಿಮತಿ: ಸೋಷ್ಟಮ: ಶ್ರಾವಕೋ ಭಣಿತಃ ||

ಅರ್ಥ: —ಗೃಹಸಂಬಂಧವಾಗಲಿ ಅಥವಾ ಯಾವದೊಂದು ಕಾರಣದಿಂದಾಗಲಿ ಇರುವಂಥ ಆರಂಭ (ಉದ್ಯೋಗ-ವ್ಯಾಪಾರ)ವನ್ನು ಬಿಡುವವನು ಆರಂಭ ವಿರತನೆಂಬ ೮ನೆಯ ಶ್ರಾವಕನು.

## ಪರಿಗ್ರಹತ್ಯಾಗಪ್ರತಿಮೆ.

ಮೋತ್ತೂಣ ವತ್ಥಮತ್ತಂ ಪರಿಗ್ಗಹಂ ಜೋ ವಿವಜ್ಜಏ ಸೇಸಂ ॥
ತತ್ಥ ವಿ ಮುಚ್ಛಂ ಣ ಕರೇಇ ಜಾಣಇ ಸೋ ಸಾವಓ ಣವಮೋ ॥ ೨೯೯ ॥

ಮುಕ್ತ್ವಾ ವಸ್ತ್ರಮಾತ್ರಂ ಪರಿಗ್ರಹಂ ಯೋ ವಿವರ್ಜಯತಿ ಶೇಷಮ್ ॥
ತತ್ರಾಪಿ ಮೂರ್ಚ್ಛಾಂ ನ ಕರೋತಿ ಜ್ಞಾಯತೇ ಸ ಶ್ರಾವಕೋ ನವಮಃ ॥

ಅರ್ಥಃ—ವಸ್ತ್ರದ ಹೊರ್ತು ಉಳಿದ ಎಲ್ಲ ಪರಿಗ್ರಹಗಳನ್ನು ಬಿಡುವವನೂ ಹಾಗು ವಸ್ತ್ರದ ಬಗ್ಗೆಯಾದರೂ ವಿರಕ್ತನಾಗಿರುವವನೂ ಪರಿಗ್ರಹವಿರತನೆಂಬ ೯ನೆಯ ಶ್ರಾವಕನು.

## ಅನುಮತಿತ್ಯಾಗಪ್ರತಿಮೆ.

ಪುಠ್ಠೋ ವಿ ಣಿಯಗೇಹಿಂ ಯ ಪರೇಹಿಂ ಲೋಗೇಹಿಂ ಸ ಗಿಹಕಜ್ಜಮ್ಮಿ ॥
ಅಣುಮಣಣಂ ಜೋ ಣ ಕುಣಇ ವಿಯಾಣ ಸೋ ಸಾವಓ ದಸಮೋ ೩೦೦

ಪೃಷ್ಟೋಪಿ ನಿಜಕೈಶ್ಚ ಪರೈರ್ಲೋಕೈಃ ಸ ಗೃಹಕಾರ್ಯೇ ॥
ಅನುಮನನಂ ಯೋ ನ ಕರೋತಿ ವಿಜಾನೀಹಿ ಸ ಶ್ರಾವಕೋ ದಶಮಃ ॥

ಅರ್ಥ:—ಮನೆಯೊಳಗಿನ ಯಾವದೊಂದು ಕೆಲಸದ ಬಗ್ಗೆ ಕುಟುಂಬದವರಾಗಲಿ ಅನ್ಯರಾಗಲಿ ತನ್ನನ್ನು ವಿಚಾರಿಸಿದರೆ (ಧರ್ಮದ ಹೊರ್ತು) ಏನೂ ಹೇಳದಿರುವವನು ಅನುಮತಿವಿರತನೆಂಬ ೧೦ನೆಯ ಶ್ರಾವಕನು.

## ಉದ್ದಿಷ್ಟತ್ಯಾಗಪ್ರತಿಮೆ.

ಏಯಾರಸಮ್ಮಿ ಠಾಣೇ ಉಕ್ಕಿಠ್ಠೋ ಸಾವಓ ಹವೇ ದುವಿಹೋ ॥
ವತ್ಥೇಕಧರೋ ಪಢಮೋ ಕೋವೀಣಪರಿಗ್ಗಹೋ ಬಿದಿಓ ॥ ೩೦೧ ॥

ಏಕಾದಶೇ ಸ್ಥಾನೇ ಉತ್ಕೃಷ್ಟಃ ಶ್ರಾವಕೋ ಭವತಿ ದ್ವಿವಿಧಃ ॥
ವಸ್ತ್ರೈಕಧರಃ ಪ್ರಥಮಃ ಕೌಪೀನಪರಿಗ್ರಹೋ ದ್ವಿತೀಯಃ ॥

ಅರ್ಥ: —ಹನ್ನೊಂದನೆಯ ಸ್ಥಾನದಲ್ಲಿರುವ ಉತ್ತಮವಾದ ಶ್ರಾವಕರಲ್ಲಿ ಎರಡು ಭೇದಗಳುಂಟು. ಒಂದೇ ವಸ್ತ್ರವನ್ನು ಧರಿಸುವ ಮೊದಲನೆಯ ಶ್ರಾವಕನಿಗೆ 'ಕ್ಷುಲ್ಲಕ' ನೆಂದು, ಕೌಪೀನ (ಲಂಗೋಟಿ)ದ ಹೊರ್ತು ಉಳಿದ ವಸ್ತ್ರಗಳನ್ನು ಬಿಟ್ಟಂಥ ಎರಡನೆಯ ಶ್ರಾವಕನಿಗೆ 'ಏಲಕ'ನೆಂದು ಅನ್ನುತ್ತಾರೆ.

ಧಮ್ಮಿಲ್ಲಾಣಂ ಚಯಣಂ ಕರೇಇ ಕತ್ತರಿ ಛುರೇಣ ವಾ ಪಢಮೋ ||
ಠಾಣಾಇಸು ಪಡಿಲೇಹಇ ಉವಯರಣೇಣ ಪಯಡಪ್ಪಾ || ೩೦೨ ||

ಧಮಿಲ್ಲಾನಾಂ ಚಯನಂ ಕರೋತಿ ಕರ್ತರ್ಯಾ ಕ್ಷುರೇಣ ವಾ ಪ್ರಥಮಃ ||
ಸ್ಥಾನಾದಿಷು ಪ್ರತಿಲಿಖತ್ಯುಪಕರಣೇನ ಪ್ರಯತ್ನಾತ್ಮಾ ||

ಅರ್ಥ:—ಕ್ಷುಲ್ಲಕನು ತನ್ನ ಗಡ್ಡ, ಮೀಶೆ, ತಲೆಗೂದಲ ಮುಂತಾದವುಗಳನ್ನು ಕತ್ತರಿಯಿಂದಾಗಲಿ ಶಸ್ತ್ರದಿಂದಾಗಲಿ ತೆಗೆದುಕೊಳ್ಳುತ್ತಾನೆ. ಆದರೆ ಏಲಕನು ತನ್ನ ಕೂದಲಗಳನ್ನು ಕಿತ್ತು ತೆಗೆಯಲಿಕ್ಕೆ ಬೇಕು. ಇವರಿಬ್ಬರೂ ಕೂಡ್ರುವಂಥ ಸ್ಥಳವನ್ನೂ ಮಲಗುವಂಥ ಸ್ಥಳವನ್ನೂ ಪಿಂಛಿಯಿಂದ ಯತ್ನಪೂರ್ವಕವಾಗಿ ಉಡಗಲಿಕ್ಕೆ ಬೇಕು.

ಭುಂಜೇಇ ಪಾಣಿಪತ್ತಮ್ಮಿ ಭಾಯಣೇ ವಾ ಸುಈ ಸಮುವಇಠ್ಠೋ ||
ಉವವಾಸಂ ಪುಣ ಣಿಯಮಾ ಚಉವ್ವಿಹಂ ಕುಣಇ ಪವ್ವೇಸು || ೩೦೩ ||

ಭುಂಜತಿ ಪಾಣಿಪಾತ್ರೇ ಭಾಜನೇ ವಾ ಶುಚಿಃ ಸಮುಪವಿಷ್ಟಃ ||
ಉಪವಾಸಂ ಪುನರ್ನಿಯಮಾಚ್ಚತುರ್ವಿಧಂ ಕರೋತಿ ಪರ್ವಸು ||

ಅರ್ಥ:—ಏಲಕಶ್ರಾವಕನು ಕೂತುಕೊಂಡು ಹಸ್ತಗಳೆಂಬ ಪಾತ್ರೆಯಲ್ಲಿ ಭೋಜನ ಮಾಡುತ್ತಾನೆ. ಕ್ಷುಲ್ಲಕನು ಕೂತುಕೊಂಡು ತಾಟ ಮುಂತಾದ ಪಾತ್ರೆಗಳಲ್ಲಿ ಭೋಜನ ಮಾಡುತ್ತಾನೆ. ಇವರಿಬ್ಬರೂ ಪ್ರತಿಯೊಂದು ತಿಂಗಳದ ನಾಲ್ಕು ಪರ್ವತಿಥಿಗಳಲ್ಲಿ ನಾಲ್ಕು ಪ್ರಕಾರದ ಆಹಾರವನ್ನು ಬಿಡಬೇಕು. ಅಂದರೆ ಆ ತಿಥಿಗಳಲ್ಲಿ ಉಪವಾಸ ಮಾಡಬೇಕು.

ಪಖ್ಖಾಳಿಊಣ ಪತ್ತಂ ಪವಿಸಇ ಚರಿಯಾಯ ಪಂಗಣೇ ಠಿಚ್ಚಾ ||
ಭಣಿಊಣ ಧಮ್ಮಲಾಹಂ ಜಾಯಇ ಭಿಖ್ಖಂ ಸಯಂ ಚೇವ || ೩೦೪ ||

ಪ್ರಕ್ಷಾಲ್ಯ ಪಾತ್ರಂ ಪ್ರವಿಶತಿ ಚರ್ಯಾಯೈ ಪ್ರಾಂಗಣೇ ಸ್ಥಿತ್ವಾ ||
ಭಣಿತ್ವಾ ಧರ್ಮಲಾಭಂ ಯಾಚತೇ ಭಿಕ್ಷಾಂ ಸ್ವಯಂ ಚೈವ ||

ಅರ್ಥಃ—ಕ್ಷುಲ್ಲಕ ಶ್ರಾವಕನು ತನ್ನ ಭೋಜನದ ಪಾತ್ರೆಯನ್ನು ತೊಳೆದುಕೊಂಡು ಭಿಕ್ಷೆಗೋಸ್ಕರ ಊರೊಳಗೆ ಹೋಗುತ್ತಾನೆ. ಶ್ರಾವಕರ ಮನೆಯ ಅಂಗಳದಲ್ಲಿ ನಿಂತುಕೊಂಡು 'ಧರ್ಮಲಾಭ' ಎಂದು ನುಡಿದು ಭಿಕ್ಷೆಯನ್ನು ಬೇಡುತ್ತಾನೆ. (ಗೃಹಸ್ಥನು ಕರೆದರೂ ಅಥವಾ ಕರೆಯದಿದ್ದರೂ ಭಿಕ್ಷೆಗೆ ಹೋಗುತ್ತಾನೆ.)

ಸಿಗ್ಘಂ ಲಾಹಾಲಾಹೇ ಅದೀಣವಯಣೋ ಣಿಉಯತ್ತಿಊಣ ತಓ ||
ಅಣ್ಣಮ್ಮಿ ಗಿಹೇ ವಚ್ಚಇ ದರಿಸಇ ಮೌಣೇಣ ಕಾಯವ್ವಂ || ೩೦೫ ||

ಶೀಘ್ರಂ ಲಾಭಾಲಾಭೇದೀನವದನೋ ನಿರ್ವೃತ್ಯ ತತಃ ॥
ಅನ್ಯಸ್ಮಿನ್ಗೃಹೇ ವಿಶತಿ ದರ್ಶಯತಿ ಮೌನೇನ ಕರ್ತವ್ಯಮ್ ॥

ಅರ್ಥ:—ಯಾವ ಮನೆಗೆ ಭಿಕ್ಷೆಗೋಸ್ಕರ ಹೋಗುತ್ತಾನೋ, ಅಲ್ಲಿ ತೀವ್ರವಾಗಿ ಅನ್ನದೊರೆಯದಿದ್ದರೆ, ದೀನನಾಗದೆ ಎರಡನೇ ಮನೆಗೆ ಆ ಕ್ಷುಲ್ಲಕನು ಹೋಗಿ ಅಲ್ಲಿ ತನ್ನ ಕರ್ತವ್ಯವನ್ನು ಮೌನದಿಂದಲೇ ತೋರಿಸುತ್ತಾನೆ.

ಜಇ ಅದ್ಧಹವೇ ಕೋಈ ಪಭಣಇ ಪಚ್ಛಇ ಭೋಯಣಂ ಕುಣಹ ॥
ಭೋತ್ತೂಣ ಣಿಯಯಭಿಕ್ಖಂ ತಸಣ್ಣಂ ಭುಂಜಇ ಸೇಸಂ ॥ ೩೦೬ ॥

ಯದ್ಯರ್ಧಪಥೇ ಕಶ್ಚಿತ್ಪ್ರಭಣತಿ ಪ್ರಾರ್ಥಯತಿ ಭೋಜನಂ ಕುರುತ ॥
ಭುಕ್ತ್ವಾ ನಿಜಭಿಕ್ಷಾಂ ತಸ್ಯಾನ್ನಂ ಭುಂಜತಿ ಶೇಷಮ್ ॥

ಅರ್ಥ:—ಕ್ಷುಲ್ಲಕನು ಭಿಕ್ಷೆಯುದೆಶೆಯಿಂದ ಹೋಗುವಾಗ್ಗೆ ಅರ್ಧದಾರಿಯಲ್ಲಿ ಯಾವನೊಬ್ಬನು ಕರೆದರೆ ಅಥವಾ ಭೋಜನ ಮಾಡಬೇಕೆಂದು ಬೇಡಿಕೊಂಡರೆ ಮೊದಲಿನ ಮನೆಯಲ್ಲಿ ದೊರೆದ ಅನ್ನವನ್ನು ತಿಂದು ಅನಂತರ ಈ ದಾತೃ ಕೊಟ್ಟ ಅನ್ನವನ್ನು ತಿನ್ನುತ್ತಾನೆ.

ಅಹ ಣ ಭಣಇ ತೋ ಭಿಖ್ಖಂ ಭಮೇಜ್ಜ ಣಿಯಪೇಟಪೂರಣಪಮಾಣಂ ॥
ಪಚ್ಛಾ ಏಯಮ್ಮಿ ಗಿಹೇ ಜಾಇಜ್ಜಇ ಪ್ಪಾಸುಗಂ ಸಳಿಳಂ ॥ ೩೦೭ ॥
ಜಂ ಕಿಂ ಪಿ ಪರಿಯ ಭಿಖ್ಖಂ ಭುಂಜಿಜ್ಜೋ ಸೋಹಿಊಣ ಜುತ್ತೇಣ ॥
ಪಖ್ಖಾಲಿಊಣ ಪತ್ತಂ ಗಛ್ಛಿಜ್ಜೋ ಗುರುಸಯಾಸಮ್ಮಿ ॥ ೩೦೮ ॥

ಅಥ ನ ಭಣತಿ ತರ್ಹಿ ಭಿಕ್ಷಾಂ ಭ್ರಾಂತ್ವಾ ನಿಜೋದರಪೂರಣಪ್ರಮಾಣಮ್ ॥
ಪಶ್ಚಾದೇಕಸ್ಮಿನ್ಗೃಹೇ ಗತ್ವಾ ಪ್ರಾಸುಕಂ ಸಲಿಲಂ ॥
ಯತ್ಕಿಮಪಿ ಪತಿತಂ ಭೈಕ್ಷ್ಯಂ ಭುಂಜತಿ ಶೋಧಯಿತ್ವಾ ಯುಕ್ತೇನ ॥
ಪ್ರಕ್ಷಾಲ್ಯ ಪಾತ್ರಂ ಗಚ್ಛತಿ ಗುರುಸಮೀಪೇ ॥

ಅರ್ಥ:—ಭಿಕ್ಷೆಗೆ ಯಾರೂ ಕರೆಯದಿದ್ದರೆ ಕ್ಷುಲ್ಲಕನು ತನ್ನ ಹೊಟ್ಟೆತುಂಬುವಷ್ಟು ಅನ್ನವು ದೊರೆಯುವ ತನಕ ಮನೆಮನೆಗೆ ತಿರುಗಿ, ಕಡೆಗೆ ಒಂದು ಮನೆಯಲ್ಲಿ ಶುದ್ಧವಾದ ನೀರು ತಕ್ಕೊಳ್ಳುತ್ತಾನೆ. ಮತ್ತು ಭಿಕ್ಷೆಯ ಪಾತ್ರೆಯಲ್ಲಿ ಯಾವ ಅನ್ನವು ಬಿದ್ದಿರುವದೋ, ಅದನ್ನು ಶೋಧಿಸಿ ಭೋಜನ ಮಾಡುತ್ತಾನೆ. ಅನಂತರ ಭೋಜನ ಪಾತ್ರೆಯನ್ನು ತೊಳೆದುಕೊಂಡು ಗುರುಗಳ ಹತ್ತರ ಹೋಗುತ್ತಾನೆ. ( ಏಲಕ ಶ್ರಾವಕನು ಒಂದೇ ಮನೆಯಲ್ಲಿ ದೊರೆದ ಶುದ್ಧವಾದ ಅನ್ನವನ್ನು ತೆಗೆದುಕೊಳ್ಳುತ್ತಾನೆ. )

ಜಇ ಏವಂ ಣ ಲಹಿಜ್ಜೋ ಕಾಉರಿಸಗಿಹಮ್ಮಿ ಚರಿಯಾಏ ॥
ಪವಿಸತ್ತಿ ಏಯಭಿಕ್ಖಾಪವಿತ್ತಿಣಿಯಮಣಂ ತಾ ಕುಜ್ಜಾ ॥ ೩೦೯ ॥

ಯದ್ಯೇವಂ ನ ಲಭತೇ ಕಾಪುರುಷಗೃಹೇ ಚರ್ಯಾಯೈ ॥
ಪ್ರವಿಶತಿ ಏಕಭಿಕ್ಷಾಪ್ರವೃತ್ತಿನಿಯಮನಂ ತದಾ ಕುರ್ಯಾತ್ ॥

ಅರ್ಥಃ—ಉತ್ತಮವಾದ ಪ್ರತಿಮೆಯುಳ್ಳ ಶ್ರಾವಕನು ( ಕ್ಷುಲ್ಲಕ ಅಥವಾ ಏಲಕ ) ಭಿಕ್ಷೆಯ ದೆಶೆಯಿಂದ ಲೋಭಿ ಮುಂತಾದವರ ಮನೆಗೆ ಹೋದಾಗ್ಗೆ ಅಲ್ಲಿ ಭಿಕ್ಷೆಯು ದೊರೆಯದಿದ್ದರೆ ಆ ದಿವಸ ಉಪವಾಸವನ್ನು ಮಾಡಬೇಕು. ಅದು ಹ್ಯಾಗೆಂದರೆ—

ಗಂತೂಣ ಗುರುಸಮೀವಂ ಪಚ್ಚಕ್ಖಾಣಂ ಚಉವಿಹಂ ವಿಹಿಣಾ ॥
ಗಹಿಊಣ ತಓ ಸವ್ವಂ ಅಳೋಚೇಓ ಪಯತ್ತೇಣ ॥ ೩೧೦ ॥

ಗತ್ವಾ ಗುರುಸಮೀಪಂ ಪ್ರತ್ಯಾಖ್ಯಾನಂ ಚತುರ್ವಿಧಂ ವಿಧಿನಾ ॥
ಗೃಹೀತ್ವಾ ತತಃ ಸರ್ವಮಾಲೋಚಯೇತ್ಪ್ರಯತ್ನೇನ ॥

ಅರ್ಥಃ—ಗುರುಗಳ ಹತ್ತರ ಹೋಗಿ, ವಿಧಿಪೂರ್ವಕವಾಗಿ ನಾಲ್ಕು ಪ್ರಕಾರದ ಆಹಾರವನ್ನು ವರ್ಜಿಸುವ ನಿಯಮವನ್ನು ( ಆ ದಿವಸದ ಬಗ್ಗೆ ) ಮಾಡಿಕೊಂಡು, ಸೋಮಾರಿತನವನ್ನು ಬಿಟ್ಟು, ಗುರುವಿನ ಮುಂದೆ ಆಲೋಚನೆ ಮಾಡಬೇಕು. ( ಪಶ್ಚಾತ್ತಾಪಪೂರ್ವಕ ಕೃತಕರ್ಮದ ಉಚ್ಚಾರವನ್ನು ಮಾಡಬೇಕು. )

ಏವಂ ಭೇಓ ಹೋಈ ಣವರ ವಿಸೇಸೋ ಕುಣಿಜ್ಜ ಣಿಯಮೇಣ ॥
ಳೋಚಂ ಧರಿಜ್ಜ ಪಿಚ್ಛಂ ಭುಂಜಿಜ್ಜೋ ಪಾಣಿಪತ್ತಮ್ಮಿ ॥ ೩೧೧ ॥

ಏವಂ ಭೇದೋ ಭವತಿ ನಾಪರೋ ವಿಶೇಷಃ ಕರೋತಿ ನಿಯಮೇನ ॥
ಲೋಚಂ ಧರತಿ ಪಿಚ್ಛಂ ಭುಂಜತಿ ಪಾಣಿಪಾತ್ರೇ ॥

ಅರ್ಥಃ— ಏಲಕನು ನಿಯಮದಿಂದ ಕೇಶಲೋಚನ ಮಾಡುತ್ತಾನೆ. ಪಿಂಛವನ್ನು ಹಿಡಿಯುತ್ತಾನೆ. ಧಾತುಗಳ ಪಾತ್ರೆಯಲ್ಲಿ ಭೋಜನ ಮಾಡದೆ, ತನ್ನ ಕೈಯಲ್ಲಿ ದಾತನು ಯಾವ ಅನ್ನವನ್ನು ಹಾಕುತ್ತಾನೋ, ಅದನ್ನು ತಿನ್ನುತ್ತಾನೆ. ಕ್ಷುಲ್ಲಕನು ಕೂತುಕೊಂಡು ಭಿಕ್ಷೆಪಾತ್ರೆಯಲ್ಲಿಯ ಅನ್ನವನ್ನು ತನ್ನ ಕೈಯಿಂದ ಊಟ ಮಾಡುತ್ತಾನೆ. ಇದು ಏಲಕ, ಕ್ಷುಲ್ಲಕರ ಭೇದವು.

ದಿಣಪಡಿಮವೀರಚರಿಯಾತಿಯಾಳಜೋಗೇಸು ಣತ್ಥಿ ಅಹಿಯಾರೋ ॥
ಸಿದ್ಧಾಂತರಹಸ್ಸಾಣವಿ ಅಜ್ಝಯಣಂ ದೇಸವಿರದಾಣಾಂ ॥ ೩೧೨ ॥

ದಿನಪ್ರತಿಮಾವೀರಚರ್ಯಾತ್ರಿಕಾಲಯೋಗೇಷು ನಾಸ್ತ್ಯಧಿಕಾರಃ ॥
ಸಿದ್ಧಾಂತರಹಸ್ಯಾನಾಮಪ್ಯಧ್ಯಯನಂ ದೇಶವಿರತಾನಾಮ್ ॥

ಅರ್ಥ:—ಹಗಲಿನಲ್ಲಿ ಪ್ರತಿಮಾಯೋಗ ( ಎದ್ದುನಿಂತು ಧ್ಯಾನ ಮಾಡುವದು ), ವೀರಚರ್ಯ ( ವೀರಾಸನದಿಂದ ಧ್ಯಾನ ಮಾಡುವದು ) ತ್ರೀಕಾಲಯೋಗ, ( ಬೇಸಿಗೆಯಲ್ಲಿ ಪರ್ವತದ ಶಿಖರದಲ್ಲೂ, ಮಳೆಗಾಲದಲ್ಲಿ ಗಿಡದ ಬುಡದಲ್ಲೂ, ಚಳಿ

ಗಾಲದಲ್ಲಿ ನದಿಯ ತೀರದಲ್ಲೂ ಕೊತುಕೊಂಡು ಧ್ಯಾನ ಮಾಡುವದು) ಮತ್ತು ದ್ರವ್ಯಾನುಯೋಗ (ಸಿಂದ್ಧಾಂತ ಶಾಸ್ತ್ರ) ಶಾಸ್ತ್ರದ ಅಧ್ಯಯನ ಮಾಡುವ ಅಧಿಕಾರ ಮುಂತಾದವು ಯಾವತ್ತು ನೆಲೆಯ ಶ್ರಾವಕರಿಗಿಲ್ಲ. ಆದರೆ ಉತ್ಕೃಷ್ಟ ಶ್ರಾವಕನು ಹಗಲಿನಲ್ಲಿ ಪದ್ಮಾಸನಕಾಯೋತ್ಸರ್ಗ ಮಾಡಬೇಕು. ರಾತ್ರಿಯಲ್ಲಿ ಪ್ರತಿಮಾಯೋಗ ಮಾಡಬೇಕು. ಮತ್ತು ಒಬ್ಬನೇ ಇರದೆ ಗುರುವಿನ ಹತ್ತರ ಇರಬೇಕು.

ಉದ್ದಿಠ್ಠಪಿಂಡವಿಓ ದುವಿಯಪ್ಪೋ ಸಾವರಓ ಸಮಾಸೇಣ ॥
ಏಯಾರಸಮ್ಮಿ ಠಾಣೇ ಭಣಿಓ ಸುತ್ತಣುಸಾರೇಣ ॥ ೩೧೩ ॥

ಉದ್ದಿಷ್ಟಪಿಂಡವಿರತೋ ದ್ವಿವಿಕಲ್ಪಃ ಶ್ರಾವಕಃ ಸಮಾಸೇನ ॥
ಏಕಾದಶೇ ಸ್ಥಾನೇ ಭಣಿತಃ ಸೂತ್ರಾನುಸಾರೇಣ ॥

ಅರ್ಥ:—ಉದ್ದಿಷ್ಟ ಪಿಂಡವೆಂದರೆ ತಮಗೆ ಕೊಡುವ ಬಗ್ಗೆ ಮಾಡಿದ ಅನ್ನವನ್ನು ಭಕ್ಷಣಮಾಡದಂಥ ಹನ್ನೊಂದನೇ ನೆಲೆಯ ಶ್ರಾವಕರಲ್ಲಿ ಕ್ಷುಲ್ಲಕ ಮತ್ತು ಏಲಕ ಎಂದು ಎರಡು ಭೇದಗಳುಂಟು. ಇದನ್ನು ಜಿನಾಗಮಾನುಸಾರವಾಗಿ ಸಂಕ್ಷೇಪದಿಂದ ಹೇಳಿದೆನು. ೧ ರಿಂದ ೬ ವರೆಗೆ ಪ್ರತಿಮೆಯುಳ್ಳ ಶ್ರಾವಕನು ಜಘನ್ಯನೆಂತಲೂ ೭-೮-೯ನೇ ಪ್ರತಿಮೆಯುಳ್ಳ ಶ್ರಾವಕನು ಮಧ್ಯಮನೆಂತಲೂ ಮತ್ತು ೧೦-೧೧ ನೇ ಪ್ರತಿಮೆಯುಳ್ಳ ಶ್ರಾವಕನು ಉತ್ಕೃಷ್ಟ ಶ್ರಾವಕನೆಂತಲೂ ಹೇಳಲ್ಪಡುತ್ತದೆ.

## ರಾತ್ರಿಭೋಜನದೋಷವು.

ಏಯಾದಸೇಸು ಪಢಗಂ ವಿ ಜದೋ ಣಿಸಿಭೋಯಣಂ ಕುಣಂತಸ್ಸ ॥
ಠಾಣಂ ಣ ಠಾಇ ತಮ್ಹಾ ಣಿಸಿಭುತ್ತಂ ಪರಿಹರೇ ಣಿಯಮಾ ॥ ೩೧೪ ॥

ಏಕಾದಶಸು ಪ್ರಥಮಮಪಿ ಯತೋ ನಿಶಿಭೋಜನಂ ಕುರ್ವತಃ ॥
ಸ್ಥಾನಂ ನ ತಿಷ್ಠತಿ ತಸ್ಮಾನ್ನಿಶಿಭುಕ್ತಂ ಪರಿಹರೇನ್ನಿಯಮಾತ್ ॥

ಅರ್ಥ:—ಹನ್ನೊಂದು ನೆಲೆಗಳಲ್ಲಿ ಯಾವದೊಂದು ನೆಲೆಯ ಶ್ರಾವಕನು ರಾತ್ರಿಯಲ್ಲಿ ಊಟಮಾಡಿದರೆ ಅವನ ಮೊದಲನೇ ಸ್ಥಾನ ಸಹ ಉಳಿಯುವದಿಲ್ಲ. ಆದಕಾರಣ ರಾತ್ರಿಯಲ್ಲಿ ಎಂದೂ ಊಟಮಾಡಬಾರದು.

ಚಮ್ಮಠ್ಠಿಕೀಡಉಂದುರುಭುಯಂಗಕೇಸಾಇ ಅಸಣಮಜ್ಝಮ್ಮಿ ॥
ಪಡಿಯಂ ಣ ಕಿಂಪಿ ಪಸ್ಸಇ ಭುಂಜಇ ಸವ್ವಂಪಿ ಣಿಸಿಸಮಏ ॥ ೩೧೫ ॥

ಚರ್ಮಾಸ್ಥಿಕೀಟೋಂದುರುಭುಜಂಗಕೇಶಾದ್ಯಶನಮಧ್ಯೇ ॥
ಪತಿತಂ ಕಿಮಪಿ ನ ಪಶ್ಯತಿ ಭುಂಜತಿ ಸರ್ವಮಪಿ ನಿಶಾಸಮಯೇ ॥

ಅರ್ಥಃ—ರಾತ್ರಿವೇಳೆಯಲ್ಲಿ ಚರ್ಮ, ಎಲವು, ಹುಳ, ಇಲಿ, (ಹಾವು ಇತ್ಯಾದಿಗಳ) ಕೂದಲು ಮೊದಲಾದವು ತಿನ್ನುವ ಪದಾರ್ಥಗಳಲ್ಲಿ ಬಿದ್ದರೆ ಅವು

ಕಾಣಿಸುವದಿಲ್ಲ ಅದರಿಂದ ಭೋಜನ ಪಾತ್ರೆಯಲ್ಲಿ ಬಿದ್ದಂಥ ಎಲ್ಲ ಪದಾರ್ಥಗಳನ್ನು ತಿಂದುಬಿಡುತ್ತಾನೆ.

ದೀವಜ್ಜೋಈ ಕುಣಇ ತಹ ವಿ ಚಉರಿಂದಿಯಾ ಅಪರಿಮಾಣಾ ॥
ಣಿವಡಂತಿ ದಿಠ್ಠಿರಾಏಣ ಮೋಹಿಯಾ ಅಸಣಮಜ್ಝಮ್ಮಿ ॥ ೩೧೬ ॥

ದೀಪಜ್ಯೋತಿ: ಕರೋತಿ ತಥಾಪಿ ಚತುರಿಂದ್ರಿಯಾ ಅಪರಿಮಾಣಾಃ ॥
ನಿಪತಂತಿ ದೃಷ್ಟಿರಾಗೇಣ ಮೋಹಿತಾ ಅಶನಮಧ್ಯೇ ॥

ಅರ್ಥ:—ದೀವಿಗೆಯನ್ನು ಹಚ್ಚಿ ಬೆಳಕನ್ನುಂಟು ಮಾಡಿದರೂ ಆ ದೀವಿಗೆಯ ಕಾಂತಿಗಾಗಿ ಅಗಣಿತ ಚತುರಿಂದ್ರಿಯ ಜೀವಗಳು ಅದರ ಹತ್ತರ ಬರುತ್ತವೆ. ಮತ್ತು ಊಟಮಾಡುವ ಪದಾರ್ಥಗಳಲ್ಲಿ ಬೀಳುತ್ತವೆ.

ಇಯ ಏರಿಸಮಾಹಾರಂ ಭುಂಜಂತೋ ಆದಣಾಸಮಿಹ ಲೋಏ ॥
ಪಾಉಣಇ ಪರಭವಮ್ಮಿ ಚಉಗಇಸಂಸಾರದುಕ್ಖಾಇಂ ॥ ೩೧೭ ॥

ಇತೀದೃಶಮಾಹಾರಂ ಭುಂಜನ್ನಾತ್ಮನಾಶಮಿಹ ಲೋಕೇ ॥
ಪ್ರಾಪ್ನೋತಿ ಪರಭವೇ ಚತುರ್ಗತಿಸಂಸಾರದುಃಖಾನಿ ॥

ಅರ್ಥ:—ಈ ಪ್ರಕಾರ ದುಷ್ಟ ಆಹಾರವನ್ನು ಭೋಜನ ಮಾಡುವ ಮನುಷ್ಯನಿಗೆ ಅನೇಕ ರೋಗಗಳುಂಟಾಗುವದರಿಂದ ಅವನು ಈ ಲೋಕದಲ್ಲಿ ಆತ್ಮಘಾತ ಮಾಡಿಕೊಳ್ಳುತ್ತಾನೆ; ಮತ್ತು ಜೀವದಯವಿಲ್ಲದ ಪಾಪದಿಂದ ಪರಲೋಕದಲ್ಲಿ ಚತುರ್ಗತಿಯೆಂಬ ಸಂಸಾರದಲ್ಲಿಯು ಅನಂತ ದು:ಖಗಳನ್ನು ಭೋಗಿಸುತ್ತಾನೆ.

ಏವಂ ವಹುಪ್ಪಯಾರಂ ದೋಸಂ ಣಿಸಿಭೋಯಣಮ್ಮಿ ಣಾಊಣ ॥
ತಿವಿಹೇಣ ರಾಇಭುತ್ತೀ ಪರಿಹರಿಯವ್ವಾ ಹವೇ ತಮ್ಹಾ ॥ ೩೧೮ ॥

ಏವಂ ಬಹುಪ್ರಕಾರಂ ದೋಷಂ ನಿಶಿಭೋಜನೇ ಜ್ಞಾತ್ವಾ ॥
ತ್ರಿವಿಧೇನ ರಾತ್ರಿಭುಕ್ತಿಃ ಪರಿಹರ್ತವ್ಯಾ ಭವೇತ್ತಸ್ಮಾತ್ ॥

ಅರ್ಥಃ—ರಾತ್ರಿ ಭೋಜನ ಮಾಡುವದರಲ್ಲಿ ಅನೇಕ ಪಾಪಗಳಿರುತ್ತವೆ. ಆದದರಿಂದ ಮನ-ವಚನ-ಕಾಯಗಳಿಂದ ರಾತ್ರಿ ಭೋಜನವನ್ನು ಬಿಡಬೇಕು.

## ದೇಶವಿರತದ ಎರಡನೇ ಕರ್ತವ್ಯಗಳು.

ವಿಣಓ ವೈಯಾವಿಚ್ಚಂ ಕಾಯಕಿಲೇಸೋ ಯ ಪೂಯಣವಿಹಾಣಂ ॥
ಸಗಸತ್ತೀ ಜಹಜೋಗ್ಗಂ ಕಾಯವ್ವಂ ದೇಸವಿರಏಹಿಂ ॥ ೩೧೯ ॥

ವಿನಯೋ ವೈಯಾವೃತ್ಯಂ ಕಾಯಕ್ಲೇಶಶ್ಚ ಪೂಜನವಿಧಾನಮ್ ॥
ಸ್ವಶಕ್ತ್ಯಾ ಯಥಾಯೋಗ್ಯಂ ಕರ್ತವ್ಯಂ ದೇಶವಿರತೈಃ ॥

ಅರ್ಥ:--ವಿನಯ, ವೈಯಾವೃತ್ಯ, ಕಾಯಕ್ಲೇಶ, ಜಿನಪೂಜೆ ಮುಂತಾದ ಕ್ರಿಯೆಗಳನ್ನು ದೇಶವಿರತನೆಂಬ ಶ್ರಾವಕನು ತನ್ನ ಶಕ್ತಿಗನುಸರಿಸಿ ವಿಧಿಪೂರ್ವಕವಾಗಿ ಮಾಡಬೇಕು.

## ಪಂಚವಿನಯ.

ದಂಸಣಣಾಣಚರಿತ್ತೇ ತವ ಉವಯಾರಮ್ಮಿ ಪಂಚಹಾ ವಿಣಓ ॥
ಪಂಚಮಗಇಗಮಣತ್ಥಂ ಕಾಯವ್ವೋ ದೇಸವಿರಏಣ ॥ ೩೨೦ ॥

ದರ್ಶನಜ್ಞಾನಚರಿತ್ರೇ ತಪ ಉಪಚಾರೇ ಪಂಚಧಾ ವಿನಯಃ ॥
ಪಂಚಮಗತಿಗಮನಾರ್ಥಂ ಕರ್ತವ್ಯೋ ದೇಶವಿರತೇನ ॥

ಅರ್ಥ:—ದೇಶವಿರತನು ದರ್ಶನ, ಜ್ಞಾನ, ಚಾರಿತ್ರ, ತಪ, ಗತಿ ಮುಂತಾದ ಕ್ರಿಯೆಗಳನ್ನು ಐನೆಯ ಗತಿಯ (ಮೋಕ್ಷದ) ಪ್ರಾಪ್ತಿಗಾಗಿ ಮಾಡಬೇಕು.

## ದರ್ಶನವಿನಯ.

ಣಿಸ್ಸಂಕಿಯಸಂವೇಗಾಇ ಜೇ ಗುಣಾ ವಣ್ಣಿಯಾ ಮಏ ಪುವ್ವಂ ॥
ತೇಸಿಮಣುಪಾಳಣಂ ಜಂ ಸ ವಿಯಾಣೇಹಿ ದೇಸಣೇ ವಿಣಓ ॥ ೩೨೧ ॥

ನಿಃಶಂಕಿತಸಂವೇಗಾದಯೋ ಯೇ ಗುಣಾ ವರ್ಣಿತಾ ಮಯಾ ಪೂರ್ವಮ್ ॥
ತೇಷಾಮನುಪಾಲನಂ ಯತ್ಸ ವಿಜಾನೀಹಿ ದರ್ಶನೇ ವಿನಯಃ ॥

ಅರ್ಥ:—ನಿಶ್ಶಂಕೆ ಮುಂತಾದ ಎಂಟು ಅಂಗಗಳು, ಸಂವೇಗ ಮುಂತಾದ ಎಂಟು ಗುಣಗಳು ಹಿಂದೆ (೪೮-೪೯ ಶ್ಲೋಕಗಳಲ್ಲಿ) ವರ್ಣಿಸಲ್ಪಟ್ಟವೆ. ಇವುಗಳನ್ನು ಚನ್ನಾಗಿ ಪಾಲಿಸುವದು ದರ್ಶನವಿನಯವೆಂದು ತಿಳಿಯತಕ್ಕದ್ದು.

ಣಾಣೇ ಣಾಣುವಯರಣೇ ಣಾಣವಂತಮ್ಮಿ ತಹಯ ಭತ್ತೀ ಯ ॥
ಜಂ ಪಡಿಯರಣಂ ಕೀರಇ ಣಿಚ್ಚಂ ತಂ ಣಾಣವಿಣಓ ॥ ೩೨೨ ॥

ಜ್ಞಾನೇ ಜ್ಞಾನೋಪಕರಣೇ ಜ್ಞಾನವತಿ ತಥೈವ ಭಕ್ತಿಶ್ಚ ॥
ತ್ಪ್ರತಿಕರಣಂ ಕ್ರಿಯತೇ ನಿತ್ಯಂ ತಜ್ಞಾನವಿನಯಃ ॥

ಅರ್ಥ:—ಜ್ಞಾನ, ಜ್ಞಾನವನ್ನುಂಟುಮಾಡುವಂಥ ಶಾಸ್ತ್ರ, ಮತ್ತು ಜ್ಞಾನಿಜನ ಇವರಲ್ಲಿ ಭಕ್ತಿಯನ್ನಿಡುವದು, ಜ್ಞಾನದ ಅಭ್ಯಾಸ ಮಾಡುವದು ಜ್ಞಾನವಿನಯವೆಂದು ತಿಳಿಯತಕ್ಕದ್ದು.

## ಚಾರಿತ್ರವಿನಯ.

ಪಂಚವಿಹಂ ಚಾರಿತ್ತಂ ಅಹಿಯಾರಾ ಜೇ ಹಿ ವಣ್ಣಿಯಾ ತಸ್ಸ ॥
ಜಂ ತೇಸಿಂ ವಹುವಾಣಂ ವಿಯಾಣ ಚಾರಿತ್ತವಿಣಓ ಸೋ ॥ ೩೨೩ ॥

ಪಂಚವಿಧಂ ಚಾರಿತ್ರಮಧಿಕಾರಾ ಯೇ ಹಿ ವರ್ಣಿತಾಸ್ತಸ್ಯ ॥
ಯತ್ತೇಷಾಂ ಬಹುಮಾನಂ ವಿಜಾನೀಹಿ ಚಾರಿತ್ರವಿನಯ: ಸ: ॥

ಅರ್ಥ:—ಸಾಮಾಯಿಕ, ಛೇದೋಪಸ್ಥಾಪನೆ, ಪರಿಹಾರವಿಶುದ್ಧಿ, ಸೂಕ್ಷ್ಮ ಸಾಂಪರಾಯ, ಯಥಾಖ್ಯಾತ ಈ ಐದು ಪ್ರಕಾರದ ಚಾರಿತ್ರಗಳನ್ನು ತನ್ನ ಶಕ್ತ್ಯಾನುಸಾರವಾಗಿ ಪಾಲಿಸುವದು ಚಾರಿತ್ರವಿನಯವೆಂದು ತಿಳಿಯತಕ್ಕದ್ದು.

## ತಪೋವಿನಯ.

ಬಾಳೋ ಯಂ ವುಡ್ಢೋ ಯಂ ಸಂಕಪ್ಪಂ ವಜ್ಜಿಊಣ ತವಸ್ಸೀಣಂ ॥
ಜಂ ಪಣಿವಾಯಂ ಕೀರಇ ತವವಿಣಯಂ ತಂ ವಿಯಾಣೀಹೀ ॥ ೩೨೪ ॥

ಬಾಲೋಯಂ ವೃದ್ಧೋಯಂ ಸಂಕಲ್ಪಂ ವರ್ಜಯಿತ್ವಾ ತಪಸ್ವಿನಾಮ್ ॥
ಯತ್ಪ್ರಣಿಪಾತಂ ಕರೋತಿ ತಪೋವಿನಯಂ ತಂ ವಿಜಾನೀಹಿ ॥

ಅರ್ಥ:—ಈ ತಪಸ್ವಿಯು ಬಾಲಕನಿದ್ದಾನೆ, ಆ ತಪಸ್ವಿಯು ವೃದ್ಧನಿದ್ದಾನೆ ಹೀಗೆ ಮನಸ್ಸಿನಲ್ಲಿ ವಿಕಲ್ಪಮಾಡದೆ ಎಲ್ಲ ತಪಸ್ವಿಗಳಿಗೆ ನಮಸ್ಕಾರ ಮಾಡುವದು ತಪೋವಿನಯವೆಂದು ತಿಳಿಯತಕ್ಕದ್ದು.

## ಉಪಚಾರವಿನಯ.

ಉವಯಾರಿಓ ವಿ ವಿಣಓ ಮಣವಚಿಕಾಯೇಣ ಹೋಇ ತಿವಿಯಪ್ಪಾ ॥
ಸೋ ಪುಣ ದುವಿಹೋ ಭಣಿಓ ಪಚ್ಚಕ್ಖಪರೋಕ್ಖಭೇಏಣ ॥ ೩೨೫ ॥

ಉಪಚಾರಕೋಪಿ ವಿನಯೋ ಮನೋವಚಃಕಾಯೇನ ಭವತಿ ತ್ರಿವಿಕಲ್ಪ: ॥
ಸ ಪುನರ್ದ್ವಿವಿಧೋ ಭಣಿತಃ ಪ್ರತ್ಯಕ್ಷಪರೋಕ್ಷಭೇದೇನ ॥

ಅರ್ಥ:— ಉಪಚಾರವಿನಯದಲ್ಲಿ ಮನ-ವಚನ-ಕಾಯಗಳೆಂದು ಮೂರು ಭೇದಗಳುಂಟು. ಮತ್ತು ಪ್ರತ್ಯಕ್ಷ, ಪರೋಕ್ಷಗಳೆಂದು ಎರಡು ಒಳಭೇದಗಳುಂಟು.

ಜಂ ದುಪ್ಪರಿಣಾಮಾಓ ಮಣೋ ಣಿಯತ್ತಾವಿಊಣ ಸುಹಜೋಏ ॥
ಠಾವಿಜ್ಜಇ ಸೋ ವಿಣಓ ಜಿಣೇಹಿ ಮಾಣಸ್ಸಿಓ ಭಣಿಓ ॥ ೩೨೬ ॥

ಯದ್ದುಷ್ಪರಿಣಾಮಾನ್ಮನೋ ನಿವರ್ತ್ಯ ಶುಭಯೋಗೇ ॥
ವರ್ತಯತಿ ಸ ವಿನಯೋ ಜಿನೈರ್ಮಾನಸಿಕೋ ಭಣಿತಃ ॥

ಅರ್ಥ:—ಕರ್ಮಾಸ್ರವ, ಕರ್ಮಬಂಧಗಳು ಪಾಪಕ್ಕೆ ಕಾರಣವಾಗಿರುವವು. ಈ ಕೆಟ್ಟ ಪರಿಣಾಮದಿಂದ ಮನಸ್ಸನ್ನು ತಿರುಗಿಸಿ, ಶುಭೋಪಯೋಗದಲ್ಲಿ ಅಂದರೆ ಪುಣ್ಯಾಸ್ರವ ಮತ್ತು ಸಂವರನಿರ್ಜರೆಯ ಪರಿಣಾಮದಲ್ಲಿ ಹಚ್ಚುವದು ಮಾನಸಿಕ ವಿನಯವೆಂದು ಶ್ರೀಜಿನೇಶ್ವರನು ಹೇಳಿದ್ದಾನೆ.

ಹಿಯಮಿಯಪುಜ್ಜಂ ಸುತ್ತಾಣುವಚಿ ಅಫರಸಮಕಕ್ಕಸಂ ವಯಣಂ ||
ಸಂಜಮಿಜಣಮ್ಮಿ ಜಂ ಚಾಡುಭಾಸಣಂ ವಾಚಿಓ ವಿಣಓ || ೩೨೭ ||

ಹಿತಂ ಮಿತಂ ಪೂಜ್ಯಂ ಸೂತ್ರಾನ್ವೇಷಿ ಅಪ್ಪರ್ಶಮಕರ್ಕಶಂ ವಚನಂ ||
ಸಂಯಮಿಜನೇ ಯಚ್ಚಾಟುಭಾಷಣಂ ವಾಚಿಕೋ ವಿನಯಃ ||

ಅರ್ಥ:—ಹಿತವಾದ, ಮಿತವಾದ, ಯೋಗ್ಯವಾದ, ಶಾಸ್ತ್ರಕ್ಕೆ ಸರಿಯಾದ, ವೈರವಾಗದಂಥ, ಮತ್ತು ಕೋಮಲವಾದ ಮಾತುಗಳನ್ನು ಯಾವತ್ತು ಆಡುವದು, ಸಂಯಮೀ ಮುನಿಗಳ ಕೂಡ ಆದರದ ಮತ್ತು ಸವಿಯಾದ ಭಾಷಣವನ್ನು ಮಾಡುವದು ವಾಚಿಕವಿನಯವೆಂದು ತಿಳಿಯಬೇಕು.

ಕಿರಿಯಂ ಅಬ್ಭುತ್ಥಾಣಂ ಣವಣಂಜಲಿ ಆಸಣಂ ಚ ಕರವಾಣಂ ||
ಏತೇ ಪಚ್ಚುಗ್ಗಮಣಂ ಚ ಗಚ್ಛಮಾಣೇ ಅಣುವ್ವಜಣಂ || ೩೨೮ ||
ಕಾಯಣುರೂವಂ ಮದ್ದಣಂ ಕರಣಂ ಕಾಳಾಣುರೂವ ಪಡಿಯರಣಂ ||
ಸಂಥಾರಾಈಕರಣಂ ಉವಯರಣಾಣಂ ಚ ಪಡಿಲಿಹಣಂ || ೩೨೯ ||
ಇಚ್ಚೇವಮಾಇ ಕಾಇಯವಿಣಓ ರಿಸಿಸಾವಯಾಣ ಕಾಯವ್ವೋ ||
ಜಿಣವಯಣಮಣುಗಣಂತೇಣ ದೇಸವಿರಏಣ ಜಹಜೋಗ್ಗಂ || ೩೩೦ ||

ಕ್ರಿಯತೇಭ್ಯುತ್ಥಾನಂ ನಮನಾಂಜಲಿರಾಸನಂ ಚ ಕರ್ತವ್ಯಮ್ ||
ಯಾತಿ ಪ್ರತ್ಯುದ್ಗಮನಂ ಚ ಗಚ್ಛಮಾನೇನುವ್ರಜನಮ್ ||
ಕಾಯಾನುರೂಪಂ ಮರ್ದ್ದನಕರಣಂ ಕಾಲಾನುರೂಪಂ ಪ್ರತಿಕರಣಮ್ ||
ಸಂಸ್ತರಾದಿಕರಣಮುಪಕರಣಾನಾಂ ಚ ಪ್ರತಿಲೇಖನಮ್ ||
ಇತ್ಯೇವಮಾದಿಃ ಕಾಯಿಕವಿನಯ ಋಷಿಶ್ರಾವಕಾಣಾಂ ಕರ್ತವ್ಯಃ ||
ಜಿನವಚನಮನುಗಣಯತಾ ದೇಶವಿರತೇನ ಯಥಾಯೋಗ್ಯಮ್ ||

ಅರ್ಥ:—ಮುನಿ ಮತ್ತು ವ್ರತವುಳ್ಳ ಶ್ರಾವಕರು ಭೆಟ್ಟಿಯಾದರೆ ಅವರ ಗೌರವ ಮಾಡುವದು, ಅವರಿಗೆ ನಮಸ್ಕಾರ ಮಾಡುವದು, ಕೈಗಳನ್ನು ಜೋಡಿಸುವದು, ಕೂಡ್ರಲಿಕ್ಕೆ ಆಸನಕೊಡುವದು, ಬಂದ ಸಮಯದಲ್ಲಿ ಎದುರಿಗೆ ಹೋಗುವದು, ಹೋಗುವಾಗ್ಗೆ ಕಳಿಸಲಿಕ್ಕೆ ಹೋಗುವದು, ಅವರ ಶಕ್ತಿಮಾನದಿಂದ ಕೈಕಾಲು ತಿಕ್ಕುವದು, ಕಾಲಕ್ಕನುಸಾರವಾಗಿ ಅವರಿಗೆ ಸಹಾಯ ಮಾಡುವದು, ಅವರಿಗೆ ಹಾಸಿ ಕೊಡುವದು, ಪಿಂಛ, ಪುಸ್ತಕಗಳನ್ನು ಕೊಡುವದು, ಕಮಂಡಲವನ್ನು ಸ್ವಚ್ಛಮಾಡಿ ಕೊಡುವದು, ಅದು ಇಲ್ಲದಿದ್ದರೆ ಹೊಸ ಕಮಂಡಲ ಕೊಡುವದು ಮುಂತಾದ ಕ್ರಿಯೆಗಳನ್ನು ಜಿನಾಗಮಕ್ಕನುಸರಿಸಿ ಮಾಡುವ ದೇಶವಿರತ ಶ್ರಾವಕನು ಯಥಾಯೋಗ್ಯ ಸತ್ಕಾರ ಮಾಡುವದಕ್ಕೆ ಕಾಯಿಕವಿನಯವೆನ್ನುತ್ತಾರೆ.

ಇಯ ಪಚ್ಚಕ್ಖೋ ಏಸೋ ಭಣಿಓ ಗುರುಣಾ ವಿಣಓ ವಿ ಅಣ್ಣಾಏ ॥
ಅಣುವಟ್ಟಿಜ್ಜಹ ಜಂ ತಂ ಪರೋಕ್ಖವಿಣಓ ತ್ತಿ ಣಾಯವ್ವೋ ॥ ೩೩೧ ॥

ಇತಿ ಪ್ರತ್ಯಕ್ಷ ಏಷ ಭಣಿತೋ ಗುರುಣಾ ವಿನಯೋಽಪ್ಯಾಜ್ಞಯಾ ॥
ಅನುವರ್ತತೇ ಇತಿ ಯತ್ತತ್ಪರೋಕ್ಷವಿನಯ ಇತಿ ಜ್ಞಾತವ್ಯಮ್ ॥

ಅರ್ಥ:—ಈ ವರೆಗೆ ಕಾಯಿಕ, ವಾಚಿಕ, ಮಾನಸಿಕ ಮುಂತಾದ ವಿನಯುಗಳನ್ನು ಹೇಳಿದೆನು, ಇವು ಪ್ರತ್ಯಕ್ಷವಿನಯುಗಳು. ಆದರೆ ಗುರುಗಳ ಪಶ್ಚಾತ್ ಅವರ ಆಜ್ಞೆಯ ಪ್ರಕಾರ ನಡೆಯುವದು ಪರೋಕ್ಷವಿನಯುವೆಂದು ತಿಳಿಯತಕ್ಕದು.

ವಿಣಏಣ ಸಸೀಉಜ್ಜಳಜಸೋಹಧವಳಿಯದಿಯಂತಓ ಪುರಿಸೋ ॥
ಸವ್ವತ್ಥ ಹವಇ ಸುಹಿಓ ತಹೇವ ಆದಿಜ್ಜವಯಣೋ. ಯ ॥ ೩೩೨ ॥

ವಿನಯೇನ ಶಶ್ಯುಜ್ವಲಯಶೋಧವಲಿತದಿಗಂತಃ ಪುರುಷಃ ॥
ಸರ್ವತ್ರ ಭವತಿ ಸುಖಿತಸ್ತಥೈವಾದಿತ್ಯವದನಶ್ಚ ॥

ಅರ್ಥ:—ವಿನಯುಗುಣದಿಂದ ನಡೆಯುವ ಮನುಷ್ಯನು ಚಂದ್ರನಂತೆ ನಿರ್ಮಲವಾದ ಕೀರ್ತಿಯನ್ನು ಎಲ್ಲ ದಿಕ್ಕುಗಳಲ್ಲಿ ಹಬ್ಬಿಸುವವನೂ ಸೌಖ್ಯವುಳ್ಳವನೂ ಸೂರ್ಯನಂತೆ ತೇಜವುಳ್ಳವನೂ ಆಗುತ್ತಾನೆ.

ಜೇ ಕೇಇ ವಿ ಉವಏಸಾ ಇಹಪರಳೋಏ ಸುಹಾವಹಾ ಸಂತಿ ॥
ವಿಣಏಣ ಗುರುಜಣಾಓ ಸವ್ವೇ ಪಾಉಣಇ ತೇ ಪುರಿಸಾ ॥ ೩೩೩ ॥

ಯೇ ಕೇಚಿದಪ್ಯುಪದೇಶಾ ಇಹಪರಲೋಕೇ ಸುಖಾವಹಾಃ ಸಂತಿ ॥
ವಿನಯೇನ ಗುರುಜನಾತ್ಸರ್ವೇ ಪ್ರಾಪ್ನುವಂತಿ ತೇ ಪುರುಷಾಃ ॥

ಅರ್ಥ:—ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖಕರವಾದ ಯಾವ ಉಪದೇಶಗಳಿರುತ್ತವೋ, ಅವೆಲ್ಲ ವಿನಯುಗುಣದಿಂದ ಹಾಗು ಗುರುವಿನಿಂದ ಮನುಷ್ಯನಿಗೆ ಪ್ರಾಪ್ತವಾಗುತ್ತವೆ.

ದೇವಿಂದಚಕ್ಕಹರಮಂಡಳೀಯರಾಯಾ ಣ ಜಂ ಸುಹಂ ಳೋಏ ॥
ತಂ ಸವ್ವಂ ವಿಣಯಫಲಂ ಣಿಬ್ಬಾಸುಹಂ ತಹಾ ಚೇವ ॥ ೩೩೪ ॥

ದೇವೇಂದ್ರಚಕ್ರಧರಮಾಂಡಲಿಕರಾಜಾನಾಂ ಯತ್ಸುಖಂ ಲೋಕೇ ॥
ತತ್ಸರ್ವಂ ವಿನಯುಫಲಂ ನಿರ್ವಾಣಸುಖಂ ತಥಾ ಚೈವ ॥

ಅರ್ಥ:—ದೇವೇಂದ್ರ, ಚಕ್ರವರ್ತಿ, ಮಾಂಡಲಿಕರಾಜ ಮುಂತಾದವರಿಗೆ ಈ ಜಗತ್ತಿನಲ್ಲಿ ಯಾವ ಸುಖಗಳಿರುತ್ತವೆಯೋ, ಆ ಸುಖಗಳು ಹಾಗು ನಿರ್ವಾಣಸುಖವು ವಿನಯುದ ಫಲವಿರುತ್ತವೆ.

ಸಾಮಣ್ಣಾ ವಿ ಯ ವಿಜ್ಜಾ ಣ ವಿಣಯಹೀಣಸ್ಸ ಸಿದ್ಧಿಮುವಯಾಇ ॥
ಕಿಂ ಪುಣ ಣಿವ್ವುಇವಿಜ್ಜಾ ವಿಣಯವಿಹೀಣಸ್ಸ ಸಿಜ್ಝೇಇ ॥ ೩೩೫ ॥

ಸಾಮಾನ್ಯಾಪಿ ಚ ವಿದ್ಯಾ ವಿನಯವಿಹೀನಸ್ಯ ಸಿದ್ಧಿಮುಪಯಾತಿ ॥
ಕಿಂ ಪುನರ್ನಿರ್ವೃತಿವಿದ್ಯಾ ವಿನಯವಿಹೀನಸ್ಯ ಸಿದ್ಧ್ಯತಿ ॥

ಅರ್ಥಃ—ವಿನಯವಿಲ್ಲದವರಿಗೆ ಸಾಧಾರಣ ವಿದ್ಯೆಯಾದರೂ ಸಹ ಬರುವದಿಲ್ಲ. ಆದರೆ ನಿರ್ವಾಣಪದವನ್ನು ದೊರಕಿಸುವ ವಿದ್ಯೆಯು ವಿನಯದ ಹೊರ್ತು ಹ್ಯಾಗೆ ಪ್ರಾಪ್ತವಾಗುವದು? ಎಂದೂ ಆಗಲಾರದು.

ಸತ್ತೂ ವಿ ಮಿತ್ತಭಾವಂ ಜಮ್ಹಾ ಉವಯಾಇ ವಿಣಯಸೀಳಸ್ಸ ॥
ವಿಣಓ ತಿವಿಹೇಣ ತಓ ಕಾಯವ್ವೋ ದೇಸವಿರದೇಣ ॥ ೩೩೬ ॥

ಶತ್ರುರಪಿ ಮಿತ್ರಭಾವಂ ಯಸ್ಮಾದುಪಯಾತಿ ವಿನಯಶೀಲಸ್ಯ ॥
ವಿನಯಸ್ತ್ರಿವಿಧೇನ ತತಃ ಕರ್ತ್ತವ್ಯೋ ದೇಶವಿರತೇನ ॥

ಅರ್ಥ:—ವಿನಯವುಳ್ಳ ಮನುಷ್ಯನಿಗೆ ವೈರಿಯು ಸಹ ಮಿತ್ರನಾಗುತ್ತಾನೆ. ಆದದರಿಂದ ದೇಶವಿರತನೆಂಬ ಶ್ರಾವಕನು ತ್ರಿಕರಣಪೂರ್ವಕವಾಗಿ ವಿನಯವನ್ನು ಸಂಪಾದಿಸಬೇಕು.

## ವೈಯಾವೃತ್ಯ.

ಅಇಬಾಳಬುಡ್ಢರೋಗಾಭಿಭೂಯತಣುಕಿಳೇಸಸಂಜುತ್ತಾಣಂ ॥
ಚಾಉವ್ವಣ್ಣೇ ಸಂಘೇ ಜಹಜೋಗ್ಗಂ ತಹ ಮಣೋಣ್ಣಾಣಂ ॥ ೩೩೭ ॥
ಕರಚರಣಪಿಟ್ಠಿಸಾಣಂ ಮದ್ದಣ ಅಬ್ಭಂಗಸೇಯಕಿರಿಯಾಹಿಂ ॥
ಉಚ್ಚತ್ತಣಪರಿಯತ್ತಣಪಸರಣಸಂಕುಇಣಾಇಹಿಂ ॥ ೩೩೮ ॥
ಪಡಿಜಗ್ಗಣೇಹಿಂ ತಣು ಜೋಯಭತ್ತಪಾಣೇಹಿ ಭೇಸಜೇಹಿಂ ॥
ತಹ ಉಚ್ಚಾರಾಈಣವಿ ಕಿಂಚಣೇಣೇಹಿಂ ತಣುಧೋವಣೇಹಿಂ ಚ ೩೩೯
ಸಂಥಾರಸೋಹಣೇಹಿ ಯ ವಜ್ಜಾವಚ್ಚಂ ಸಯಾ ಪಯತ್ತೇಣ ॥
ಕಾಯವ್ವಂ ಸತ್ತೀಏ ಣಿವ್ವಿದಿಗಿಚ್ಛೇಣ ಭಾವೇಣ ॥ ೩೪೦ ॥

ಅತಿಬಾಲವೃದ್ಧರೋಗಾಭಿಭೂತತನುಕ್ಲೇಶಸಂಯುಕ್ತಾನಾಮ್ ॥
ಚಾತುರ್ವರ್ಣ್ಯೇ ಸಂಘೇ ಯಥಾಯೋಗ್ಯಂ ತಥಾ ಮನೋಜ್ಞಾನಾಮ್ ॥
ಕರಚರಣಪೃಷ್ಠಶಿರಸಾಂ ಮರ್ದನಮಭ್ಯಂಗಸೇಕನಕ್ರಿಯಾಭಿಃ ॥
ಉದ್ವರ್ತ್ತನಪರಿವರ್ತ್ತನಪ್ರಸರಣಸಂಕೋಚಾದಿಭಿಃ ॥
ಪ್ರತಿಗ್ರಹಣೈಸ್ತನುಯೋಗ್ಯಭಕ್ತಪಾನೈರ್ಭೈಷಜ್ಯೈಃ ॥
ತಥಾ ಮಲಮೂತ್ರಾದೀನಾಮಪಿ ಕ್ಷೇಪಣೈಸ್ತನುಧೋವನೈರಪಿ ॥

ಸಂಸ್ತರಶೋಧನಸ್ಯೈಕ್ಷ ವೈಯಾವೃತ್ತ್ಯಂ ಸದಾ ಪ್ರಯತ್ನೇನ ॥
ಕರ್ತ್ತವ್ಯಂ ಶಕ್ತ್ಯಾ ನಿರ್ವಿಚಿಕಿತ್ಸೇನ ಭಾವೇನ ॥

ಅರ್ಥ:—ಮುನಿ, ಆರ್ಯಿಕಾ, ಶ್ರಾವಕ ಮತ್ತು ಶ್ರಾವಿಕಾ ಮುಂತಾದವರಲ್ಲಿ ಯಾರಾದರೂ ಬಾಲಕರಾಗಲಿ, ವೃದ್ಧರಾಗಲಿ, ರೋಗಪೀಡಿತರಾಗಲಿ ಇದ್ದರೆ, ಮನೋಜ್ಞ ಮುಂತಾದ ಹತ್ತು ಪ್ರಕಾರದ ಮುನಿಗಳಿದ್ದರೆ ಅವರ ಕೈಕಾಲುಗಳನ್ನು ತಿಕ್ಕುವದು, ಬೆನ್ನು, ತಲೆ ಹಿಚಕುವದು, ಶರೀರ ಕಾಸುವದು, ಅವರನ್ನು ಕೂಡ್ರಿಸುವದು, ಎಬ್ಬಿಸುವದು, ಒಂದು ಮಗ್ಗಲದಿಂದ ಮತ್ತೊಂದು ಮಗ್ಗಲಿಗೆ ಮಲಗುವದಕ್ಕೂ ಕೈ ಕಾಲು ಪಸರಿಸಲಿಕ್ಕೂ ಎಳಕೊಳ್ಳಲಿಕ್ಕೂ ಸಹಾಯ ಮಾಡುವದು, ಪ್ರಕೃತಿಗನುಸರಿಸಿ ಅನ್ನ-ನೀರುಗಳನ್ನು ಕೊಡುವದು, ಔಷಧ ಕೊಡುವದು, ಮಲ ಮೂತ್ರ ತೆಗೆಯುವದು, ಅವರ ಮೈಯನ್ನು ತೊಳೆಯುವದು, ಹಾಸಿಗೆಯನ್ನು ಹಾಸುವದು ಮುಂತಾದ ಕ್ರಿಯೆಗಳನ್ನು ಜುಗುಪ್ಸೆ ಇಲ್ಲದೆ ಎಚ್ಚರದಿಂದ ತನ್ನ ಶಕ್ತ್ಯಾನುಸಾರವಾಗಿ ಮಾಡುವದಕ್ಕೆ ವೈಯಾವೃತ್ಯವೆನ್ನುತ್ತಾರೆ. ಇಲ್ಲಿ ಮನೋಜ್ಞ ಮುಂತಾದ ಹತ್ತು ಪ್ರಕಾರದ ಮುನಿಗಳ ಭೇದವನ್ನು ಹೇಳಿರುತ್ತಾರೆ.:—ವ್ರತವನ್ನು ಕೊಡುವವನು ಆಚಾರ್ಯನು, ದ್ವಾದಶಾಂಗ ಶಾಸ್ತ್ರವನ್ನು ಕಲಿಯುವವನು ಅಥವಾ ಕಲಿಸುವವನು ಉಪಾಧ್ಯಾಯನು, ಹನ್ನೆರಡು ಪ್ರಕಾರದ ತಪಸ್ಸು ಮಾಡುವವನು ತಪಸ್ವಿಯು, ಶಾಸ್ತ್ರಾಧ್ಯಯನ ಮಾಡುವವನು ಸಾಧು, ರೋಗಾದಿಗಳಿಂದ ಕ್ಷೀಣನಾದವನು ಗ್ಲಾನ, ಮುನಿಯ ಪರಂಪರೆಯ ಶಿಷ್ಯನು ಗಣ, ದೀಕ್ಷೆ ಮತ್ತು ಶಿಕ್ಷೆ ಕೊಡುವ ಆಚಾರ್ಯನ ಶಿಷ್ಯನು ಕುಲ, ನಾಲ್ಕು ಪ್ರಕಾರದ ಮುನಿಗಳ ಸಮೂಹವು ಸಂಘವು, ಬಹಳ ದಿವಸ ತಪಶ್ಚರ್ಯ ಮಾಡಿದವನು ಸಾಧು, ಎಲ್ಲ ಜನರಿಗೆ ಪ್ರೀತಿ (ರೂಪ, ಗುಣ, ಭಾಷಣ, ತಪ ಇತ್ಯಾದಿ)ಯುಳ್ಳವನು ಮನೋಜ್ಞನು ಹೀಗೆ ಮುನಿಗಳ ಹತ್ತು ಭೇದಗಳು ಶಾಸ್ತ್ರದಲ್ಲಿ ಹೇಳಲ್ಪಟ್ಟವೆ.

ಣಿಸ್ಸಂಕಿಯ ಸಂವೇಗಾಇ ಜೇ ಗುಣಾ ವಣ್ಣಿಯಾ ಮಣೋವಿಸಯಾ ॥
ತೇ ಹೊಂತಿ ಪ್ಪಯಡಾ ಪುಣ ವಿಜ್ಜಾವಚ್ಚಂ ಕರಂತಸ್ಸ ॥ ೩೪೧ ॥

ನಿಃಶಂಕಿತಸಂವೇಗಾದಿಕಾ ಯೇ ಗುಣಾ ವರ್ಣಿತಾ ಮನೋವಿಷಯಾಃ ॥
ತೇ ಭವಂತಿ ಪ್ರಕಟಾಃ ಪುನರ್ವೈಯಾವೃತ್ತ್ಯಂ ಕುರ್ವತಃ ॥

ಅರ್ಥ:—ನಿಶ್ಶಂಕೆ ಮುಂತಾದ ಸಮ್ಯಕ್ತ್ವದ ಎಂಟು ಅಂಗಗಳು ಮತ್ತು ಸಂವೇಗ ಮುಂತಾದ ಎಂಟು ಗುಣಗಳು ಮನಸ್ಸಿನಲ್ಲಿರತಕ್ಕ ಗುಣಗಳಿರುತ್ತವೆ. ಇವು ವೈಯಾವೃತ್ಯದಿಂದ ಪ್ರಕಟವಾಗುತ್ತವೆ.

ದೇಹ ತವಣಿಯಮಸಂಜಮಸೀಳಸಮಾಹಾಣ ಅಭಯದಾಣಂ ಚ ॥
ಗಇ ಮಇ ಬಳಂ ಚ ದಿಣ್ಣಂ ವಿಜ್ಜಾವಚ್ಚಂ ಕರಂತೇಣ ॥ ೩೪೨ ॥

ದೇಹತಪೋನಿಯಮಸಂಯಮಶೀಲಸಮಾಧಾನಮಭಯದಾನಂ ಚ ॥
ಗತಿರ್ಮತಿರ್ಬಲಂ ಚ ದತ್ತಂ ವೈಯಾವೃತ್ಯಂ ಕುರ್ವತಾ ॥

ಅರ್ಥ:—ದೇಹ, ತಪ, ನಿಯಮ, ಸಂಯಮ, ಶೀಲ, ಸಮಾಧಾನ, ಅಭಯ ದಾನ, ಶುಭಗತಿ, ಶುಭಬುದ್ಧಿ ಮುಂತಾದ ಗುಣಗಳು ವೈಯಾವೃತ್ಯದಿಂದ ದೊರೆಯುತ್ತವೆ. ಯಾಕಂದರೆ ಯಾವದೊಂದು ಸಂಗತಿಯಿಂದ ಪೀಡಿಸಲ್ಪಟ್ಟ ಮನುಷ್ಯನ ಪೀಡೆಯನ್ನು ಕಳೆದ ಹೊರ್ತು ಶರೀರ ಸಂರಕ್ಷಣವೂ ತಪಶ್ಚರ್ಯವೂ ಸಿದ್ಧವಾಗುವದಿಲ್ಲ. ಆದಕಾರಣ ವೈಯಾವೃತ್ಯದಿಂದ ಎಲ್ಲ ಸಿದ್ಧವಾಗುತ್ತವೆ.

ಗುಣಪರಿಣಾಮೋ ಜಾಯಇ ಜಿಣಿಂದಆಣಾ ಯ ಪಾಳಿಯಾ ಹೋಇ ॥
ಜಿಣಸಮಯತಿಳಯಭೂಓ ಲಬ್ಭಇ ಪತ್ತೋ ವಿ ಗುಣರಾಸೀಓ ॥೩೪೩॥
ಭಮಇ ಜಏ ಜಸಕಿತ್ತೀ ಸಜ್ಜಣಸುಇಹಿಯಯಣಯಣಸುಹಜಣಣೀ ॥
ಅಣ್ಣೇ ವಿ ಯ ಹೋಂತಿ ಗುಣಾ ವಿಜ್ಜಾವಚ್ಚೇಣ ಇಹ ಳೋಏ ॥೩೪೪॥

ಗುಣಪರಿಣಾಮೋ ಜಾಯತೇ ಜಿನೇಂದ್ರಾಜ್ಞಾ ಚ ಪಾಲಿತಾ ಭವತಿ ॥
ಜಿನಸಮಯತಿಲಕಭೂತೋ ಲಭತೇ ಪರತ್ರಾಪಿ ಗುಣರಾಶಿಮ್ ॥
ಭ್ರಮತಿ ಜಗತಿ ಯಶ:ಕೀರ್ತಿಃ ಸಜ್ಜನಶ್ರುತಿಹೃದಯನಯನಸುಖಜನನೀ ॥
ಅನ್ಯೇಪಿ ಜ ಭವಂತಿ ಗುಣಾ ವೈಯಾವೃತ್ಯೇನೇಹ ಲೋಕೇ ॥

ಅರ್ಥಃ—ವೈಯಾವೃತ್ಯದಿಂದ ಮನುಷ್ಯನ ಮನಸ್ಸಿನ ಪರಿಣಾಮವು ಗುಣರೂಪವಾಗುತ್ತದೆ. ಜೇನೆಶ್ವರನ ಆಜ್ಞೆಯನ್ನು ಪಾಲಿಸಿದಂತಾಗುತ್ತದೆ. ಅವನು ಜಿನಧರ್ಮದಲ್ಲಿ ಶ್ರೇಷ್ಠನಾಗುತ್ತಾನೆ. ಪರಲೋಕದಲ್ಲಿ ಅವನಿಗೆ ಉತ್ತಮ ಗುಣಗಳು ಪ್ರಾಪ್ತವಾಗುತ್ತವೆ. ಸಜ್ಜನರ ಮನಸ್ಸಿಗೆ ಆನಂದ ಕೊಡುವಂಥ ಜಯವು ಜಗತ್ತಿನಲ್ಲಿ ಹಬ್ಬುತ್ತದೆ. ಮತ್ತೂ ಬೇರೆ ಎಷ್ಟೋ ಗುಣಗಳಾದರೂ ಪ್ರಾಪ್ತವಾಗುತ್ತವೆ.

ಪರಳೋಏ ವಿ ಸರೂವೋ ಚಿರಾಉಸೋ ರೋಯಸೋಯಪರಿಹೀಣೋ॥
ಬಳತೇಯಸತ್ತಜುತ್ತೋ ಜಾಯಇ ಅಖಿಳಪ್ಪಯಾಓ ವ ॥ ೩೪೫ ॥

ಪರಲೋಕೇಪಿ ಸುರೂಪಶ್ಚಿರಾಯೂ ರೋಗಶೋಕಪರಿಹೀನ: ॥
ಬಲತೇಜಃಸತ್ವಯುಕ್ತೋ ಜಾಯತೇಖಿಲಪ್ರತಾಪಃ ॥

ಅರ್ಥಃ—ವೈಯಾವೃತ್ಯದಿಂದಿರುವ ಮನುಷ್ಯನು ಪರಲೋಕದಲ್ಲಾದರೂ ಸುಂದರ, ಚಿರಾಯು, ರೋಗ ಮತ್ತು ಶೋಕರಹಿತ ಮುಂತಾದ ಗುಣಗಳಿಂದ ಯುಕ್ತನಾಗುತ್ತಾನೆ. ಬಲ, ತೇಜ, ಪರಾಕ್ರಮ, ಮುಂತಾದ ಗುಣಗಳುಳ್ಳವನಾಗುತ್ತಾನೆ. ಅಂದರೆ ಷಟ್ಖಂಡಾಧಿಪತಿಯಾದ ಚಕ್ರವರ್ತಿಯಾಗುತ್ತಾನೆ.

ಜಲ್ಲೋಸಹಿಸವ್ವೋಸಹಿಅಖ್ಖೀಣಮಹಾಣಸಾಇರಿದ್ಧೀಓ ॥
ಅಣಿಮಾಇಗುಣಾ ಯ ತಹಾ ವಿಜ್ಜಾವಚ್ಚೇಣ ಪಾಉಣಈ ॥ ೩೪೬ ॥

ಜಲೌಷಧಿ ಸರ್ವೌಷಧ್ಯಕ್ಷೀಣಮಹಾನಸಾದ್ಯರ್ಧಯಃ ॥
ಅಣಿಮಾದಿಗುಣಾಶ್ಚ ತಥಾ ವೈಯಾವೃತ್ಯೇನ ಪ್ರಾಪ್ನೋತಿ ॥

ಅರ್ಥ:— ಜಲೌಷಧ, ಸರ್ವೌಷಧ, ಅಕ್ಷೀಣಮಹಾನಸ ಮುಂತಾದ ಋದ್ಧಿ ಮತ್ತು ಅಣಿಮಾ ಮುಂತಾದ ಗುಣಗಳು ವೈಯಾವೃತ್ಯದಿಂದ ದೊರೆಯುತ್ತವೆ. ಮುನಿಗಳ ಶರೀರದ ಘರ್ಮದಿಂದ ರೋಗಿಗಳ ರೋಗವು ನಾಶವಾಗುವದಕ್ಕೆ ಜಲೌಷಧಿವೆನ್ನುವರು; ಅವರ ಶರೀರ ಸ್ಪರ್ಶದಿಂದ ರೋಗಗಳು ನಾಶವಾಗುವದಕ್ಕೆ ಸರ್ವೌಷಧಿವೆನ್ನುವರು; ಯಾವ ಗೃಹಸ್ಥನ ಮನೆಯಲ್ಲಿ ಋದ್ಧಿಸಂಪನ್ನರಾದ ಸಾಧುಗಳು ಆಹಾರವನ್ನು ಯಾವ ದಿವಸ ತಕ್ಕೊಳ್ಳುವರೋ, ಆ ಮನೆಯು ಅನ್ನವನ್ನು ಆ ದಿವಸ ಎಷ್ಟೋ ಜನರು ಊಟಮಾಡಿದಾಗ್ಯೂ ತೀರುವದಿಲ್ಲ. ಇದಕ್ಕೆ ಅಕ್ಷೀಣಮಹಾನಸವೆನ್ನುವರು. ಇಂಥ ಋದ್ಧಿಗಳು ತಪಶ್ಚರ್ಯದಿಂದ ದೊರೆಯುತ್ತವೆ. ಇದು ಪೂರ್ವಜನ್ಮದಲ್ಲಿ ವೈಯಾವೃತ್ಯವನ್ನು ಮಾಡಿದ್ದರ ಫಲವಿರುತ್ತದೆ. ದೃಷ್ಟಿಗೆ ಕಾಣದಷ್ಟು ಸೂಕ್ಷ್ಮವಾಗುವದಕ್ಕೆ ಅಣಿಮಾ ಅನ್ನುವರು. ಇದು ಸ್ವರ್ಗಲೋಕದೊಳಗಿನ ದೇವತೆಗಳಿಗೆ ಇರುತ್ತದೆ.

ಕಿಂ ಜಪ್ಪಿಏಣ ವಹುಧಾ ತಿಳೋಯಸಂಖೋಹಕಾರಣಮಹತ್ತಂ ॥
ತಿತ್ಥಯರಣಾಮಪುಣ್ಣಂ ವಿಜ್ಜಾವಚ್ಚೇಣ ಅಜ್ಜೇಇ ॥ ೩೪೭ ॥

ಕಿಂ ಜಲ್ಪಿತೇನ ಬಹುಧಾ ತ್ರಿಲೋಕಸಂಕ್ಷೋಭಕಾರಣಮಹತ್ತ್ವಮ್ ॥
ತೀರ್ಥಕರನಾಮಪುಣ್ಯಂ ವೈಯಾವೃತ್ಯೇನಾರ್ಜಯತಿ ॥

ಅರ್ಥ:—ಬಹಳ ಹೇಳುವದೇನು? ತ್ರೀಲೋಕದಲ್ಲಿ ಆಶ್ಚರ್ಯಚಕಿತ ಮಾಡುವಂಥ ಮಹತ್ವವು ಯಾವದಕ್ಕೆ ಅದೆಯೋ, ಅಂಥ ಮಹಾತ್ಮವು ( ತೀರ್ಥಂಕರರಾಗುವ ಪುಣ್ಯವು) ವೈಯಾವೃತ್ಯದಿಂದ ದೊರೆಯುತ್ತದೆ.

ತರುಣಿಮಣಣಯಣಹಾರೀರೂವಬಳತೇಯಸತ್ತಸಂಪಣ್ಣೋ ॥
ಜಾಓ ವಿಜ್ಜಾವಚ್ಚಂ ಪುವ್ವಂ ಕಾಊಣ ವಸುದೇವೋ ॥ ೩೪೮ ॥

ತರುಣೀಮನೋನಯನಹಾರಿರೂಪಬಲತೇಜಃಸತ್ತ್ವಸಂಪನ್ನಃ ॥
ಜಾತೋ ವೈಯಾವೃತ್ತ್ಯಂ ಪೂರ್ವಂ ಕೃತ್ವಾ ವಾಸುದೇವಃ ॥

ಅರ್ಥ:—ಯದುಕುಲಾಗ್ರಗಣ್ಯನಾದ ವಾಸುದೇವನು ತರುಣ ಸ್ತ್ರೀಯರ ಮನಸ್ಸನ್ನೂ ನೋಟುಗಳನ್ನೂ ಹರಣಮಾಡುವಂಥ ರೂಪುಳ್ಳವನೂ ಸಾಮರ್ಥ್ಯವುಳ್ಳವನೂ ಪರಾಕ್ರಮಿಯೂ ಆಗಿದ್ದನು; ಯಾಕಂದರೆ ಅವನು ಪೂರ್ವಜನ್ಮದಲ್ಲಿ ವೈಯಾವೃತ್ಯವನ್ನು ಚನ್ನಾಗಿ ಮಾಡಿದ್ದನು.

ಆಇರಿಯಾಣಂ ವಿಜ್ಜಾವಿಚ್ಚಂ ಕಿಚ್ಚಾ ಅಸಂಜವೇಣಾವಿ ॥
ತಿತ್ಥಯರಣಾಮ ಪುಣ್ಣಂ ಸಮಜ್ಜಿಯಂ ವಾಸುದೇವೇಣ ॥ ೩೪೯ ॥

ಆಚಾರ್ಯೋಣಾಂ ವೈಯಾವೃತ್ತ್ಯಂ ಕೃತ್ವಾ ಅಸಂಯತೇನಾಪಿ ॥
ತೀರ್ಥಂಕರನಾಮಪುಣ್ಯಂ ಸಮರ್ಜಿತಂ ವಾಸುದೇವೇನ ॥

ಅರ್ಥ:—ಅಸಂಯತ ಅಂದರೆ ವ್ರತಹೀನನಾದ ವಾಸುದೇವನು (೬೩ ಶಲಾಕಾಪುರುಷರಲ್ಲಿ ೯ನೆಯ ನಾರಾಯಣನಾದ ಕೃಷ್ಣನು) ವೈಯಾವೃತ್ಯ ಮಾಡಿದ್ದರಿಂದಲೇ ಮುಂದೆ ತೀರ್ಥಂಕರರಾಗುವ ಪುಣ್ಯವನ್ನು ಸಂಪಾದಿಸಿದನು.

ಏವಂ ಣಾಊಣ ಫಳಂ ವಿಜ್ಜಾವಚ್ಚಸ್ಸ ಪರಮಭತ್ತೀಏ ॥
ಣಿಚ್ಛಯಜುತ್ತೇಣ ಸಯಾ ಕಾಯವ್ವಂ ದೇಸವಿರಏಣ ॥ ೩೫೦ ॥

ಏವಂ ಜ್ಞಾತ್ವಾ ಫಲಂ ವೈಯಾವೃತ್ತ್ಯಸ್ಯ ಪರಮಭಕ್ತ್ಯಾ ॥
ನಿಶ್ಚಯಯುಕ್ತೇನ ಸದಾ ಕರ್ತವ್ಯಂ ದೇಶವಿರತೇನ ॥

ಅರ್ಥಃ—ಈ ಮೇರೆಗೆ ವೈಯಾವೃತ್ಯದ ಫಲವನ್ನು ತಿಳಿದು, ದೃಢನಿಶ್ಚಯವುಳ್ಳ ದೇಶವಿರತ ಶ್ರಾವಕನು ಸರ್ವಕಾಲ ಶುದ್ಧಭಕ್ತಿಯಿಂದ ವೈಯಾವೃತ್ಯವನ್ನು ಮಾಡಬೇಕು.

## ಕಾಯಕ್ಲೇಶ.

ಆಯಂವಿಲಣಿವ್ವಿಯಡೀ ಏಯಠ್ಠಾಣಂ ಛಠ್ಠಮಾಇಖವಣೇಹಿಂ ॥
ಜಂ ಕೀರಇ ತಣುತಾವಂ ಕಾಯಕಿಲೇಸೋ ಮುಣೇಯವ್ವೋ ॥ ೩೫೧ ॥

ಆಂಬೀಲನಿಯಡೀ ಏಕಸ್ಥಾನಂ ಷಷ್ಠಾಷ್ಟಮಾದಿಪಕ್ಷೇಣ ॥
ಯತ್ ಕ್ರಿಯತೇ ತನುತಾಪಃ ಕಾಯಕ್ಲೇಶೋ ಜ್ಞಾತವ್ಯಃ ॥

ಅರ್ಥ:—ಪೇಯ (ತಿಳುವಾದ ಪದಾರ್ಥ) ಕುಡಿಯುವದು ಉಪ್ಪುಹಾಕದ ಪದಾರ್ಥವನ್ನು ತಿನ್ನುವದು. ಒಂದು ವೇಳೆ ಭೋಜನ ಮಾಡುವದು. ಆರು ದಿವಸಕ್ಕಾಗಲಿ ಎಂಟು ದಿವಸಕ್ಕಾಗಲಿ ಅಥವಾ ಹದಿನೈದು ದಿವಸಕ್ಕಾಗಲಿ ಒಮ್ಮೆ ಭೋಜನ ಮಾಡುವದು, ಹೀಗೆ ಉಪವಾಸ ಮಾಡಿ ದೇಹವನ್ನು ಕರಗಿಸುವದಕ್ಕೆ ಕಾಯಕ್ಲೇಶವೆನ್ನುವರು.

ಮೇಹಾವಿಣರಾ ಏಏಣ ಚೇವ ಬುಜ್ಝಂತಿ ವುದ್ಧಿವಿಹವೇಣ ॥
ಮಂದವುದ್ಧಿಣೋ ತೇಣ ಕಿಂಪಿ ವೋಚ್ಛಾಮಿ ಸವಿಸೇಸಂ ॥ ೩೫೨ ॥

ಮೇಧಾವಿನರಾ ಏತೇನ ಚೈವ ಬುಧ್ಯಂತಿ ಬುದ್ಧಿವಿಭವೇನ ॥
ಮಂದಬುದ್ಧಯಸ್ತೇನ ಕಿಮಪಿ ವಕ್ಷ್ಯಾಮಿ ಸವಿಶೇಷಮ್ ॥

ಅರ್ಥ:—ಬುದ್ಧಿವಂತನು ತನ್ನ ಬುದ್ಧಿಯ ಪ್ರಭಾವದಿಂದ ಉಪವಾಸದ ಮಹತ್ವವನ್ನು ಇಷ್ಟರಿಂದಲೇ ಈಗ್ಗೆ ಹೇಳಿರುವ ವಾಕ್ಯದಿಂದಲೇ ತಿಳಿಯುತ್ತಾನೆ. ಮಂದಬುದ್ಧಿಯ ಮನುಷ್ಯನು ತಿಳಿಯುವದಿಲ್ಲ. ಆದರಿಂದ ಆವನ ಬಗ್ಗೆ ಸ್ವಲ್ಪ ಹೆಚ್ಚಿಗೆ ಹೇಳುತ್ತೇನೆ.

# ಶುಕ್ಲಪಂಚಮೀವ್ರತವು.

ಆಸಾಢ ಕತ್ತಿಏ ಫಗ್ಗುಣೇ ಯ ಸಿಯಪಂಚಮೀಏ ಗುರುಮೂಳೇ ॥
ಗಹಿಊಣ ವಿಹಿಂ ವಿಹಿಣಾ ಪುವ್ವಂ ಕಾಊಣ ಜಿಣಪೂಜಾ ॥ ೩೫೩ ॥
ಪಡಿಮಾಸಮೇಕ್ಕಖಮಣೇಣ ಜಾವಜ್ಜಾಸಾಣಿ ಪಂಚಮಾಸಾ ಯ ॥
ಅವಿಛಿಣ್ಣಾ ಕಾಯವ್ವಾ ಮುತ್ತಿಸುಹಂ ಜಾಯಮಾಣೇಣ ॥ ೩೫೪ ॥

ಆಷಾಢೇ ಕಾರ್ತಿಕೇ ಫಾಲ್ಗುನೇ ಚ ಸಿತಪಂಚಮ್ಯಾಂ ಗುರುಮೂಲೇ ॥
ಗೃಹೀತ್ವಾ ವಿಧಿಂ ವಿಧಿನಾ ಪೂರ್ವಂ ಕೃತ್ವಾ ಜಿನಪೂಜಾಮ್ ॥
ಪ್ರತಿಮಾಸಮೇಕಪಕ್ಷೇಣ ಯಾವದ್ವರ್ಷಾಣಿ ಪಂಚ ಮಾಸಾಶ್ಚ ॥
ಅವಿಚ್ಛಿನ್ನಾಃ ಕರ್ತವ್ಯಾ ಮುಕ್ತಿಸುಖಂ ಯಾಚಮಾನೇನ ॥

ಅರ್ಥಃ—ಆಷಾಢ, ಕಾರ್ತಿಕ, ಫಾಲ್ಗುಣ ಇವುಗಳಲ್ಲಿ ಯಾವದೊಂದು ತಿಂಗಳ ಶುಕ್ಲಪಕ್ಷದ ಪಂಚಮಿ ತಿಥಿಯ ದಿವಸ ಜಿನಮಂದಿರದಲ್ಲಿ ಹೋಗಿ ವಿಧಿಪೂರ್ವಕವಾಗಿ ಶ್ರೀಜಿನೇಶ್ವರನ ಪೂಜೆಯನ್ನು ಮಾಡಿ, ಅನಂತರ ಗುರುಗಳ ಹತ್ತರ ಪಂಚಮಿ ಉಪವಾಸದ ವ್ರತವನ್ನು ತಕ್ಕೊಳ್ಳಬೇಕು. ಅದು ಹ್ಯಾಗಂದರೆ— ಪ್ರತಿಯೊಂದು ತಿಂಗಳದ ಶುಕ್ಲಪಕ್ಷದ ಪಂಚಮಿ ದಿವಸದಲ್ಲಿ ಉಪವಾಸ ಮಾಡಬೇಕು. ಹೀಗೆ ಉಪವಾಸದ ವ್ರತವನ್ನು ೫ ವರ್ಷ ಮತ್ತು ೫ ತಿಂಗಳ ತನಕ ಬಿಡದೆ ನಡಿಸಬೇಕು.

ಅವಸಾಣೇ ಪಂಚ ಘಡಾವಿಊಣ ಪಡಿಮಾಯ ಜಿಣವರಿಂದಾಣಂ ॥
ತಹ ಪಂಚ ಪುತ್ಥಯಾಣಿ ಯ ಲಿಹಾವಿಊಣಂ ಸಸತ್ತೀಏ ॥ ೩೫೫ ॥
ತೇಸಿಂ ಪಯಿಠ್ಠಯಾಳೇ ಜಂ ಕಿಂ ಪಿ ಪಇಠ್ಠಜೋಗ್ಗಮುವಯರಣಂ ॥
ತಂ ಸವ್ವಂ ಕಾಯವ್ವಂ ಪತ್ತೇಯಂ ಪಂಚ ಪಂಚ ಸಂಖಾಏ ॥ ೩೫೬ ॥

ಅವಸಾನೇ ಪಂಚ ಕಾರಯಿತ್ವಾ ಪ್ರತಿಮಾ ಜಿನವರೇಂದ್ರಾಣಾಮ್ ॥
ತಥಾ ಪಂಚ ಪುಸ್ತಕಾನಿ ಚ ಲೇಖಯಿತ್ವಾ ಸ್ವಶಕ್ತ್ಯಾ ॥
ತೇಷಾಂ ಪ್ರತಿಷ್ಠಾಕಾಲೇ ಯತ್ಕಿಮಪಿ ಪ್ರತಿಷ್ಠಾಯೋಗ್ಯಮುಪಕರಣಮ್ ॥
ತತ್ಸರ್ವಂ ಕರ್ತವ್ಯಂ ಪ್ರತ್ಯೇಕಂ ಪಂಚ ಪಂಚ ಸಂಖ್ಯಯಾ ॥

ಅರ್ಥ:—ವ್ರತವನ್ನು ಪೂರ್ಣ ಮಾಡುವ ಸಮಯದಲ್ಲಿ ತನ್ನ ಶಕ್ತಿಯಂತೆ ಜಿನೇಶ್ವರನ ಐದು ಪ್ರತಿಮೆಗಳನ್ನು ಮಾಡಿಸಬೇಕು. ಮತ್ತು ಐದು ಶಾಸ್ತ್ರಗಳನ್ನು ಬರೆಯಿಸಬೇಕು. ಆ ಪ್ರತಿಮೆಯ ಪ್ರಾಣಪ್ರತಿಷ್ಠೆಯನ್ನು ಮಾಡುವ ವೇಳೆಯಲ್ಲಿ ಅದಕ್ಕೆ ಬೇಕಾದಂಥ ಯೋಗ್ಯವಾದ ಉಪಕರಣಗಳನ್ನು ಪ್ರತಿಯೊಂದು ಐದೈದು ಸಂಖ್ಯೆಯಿಂದ ತಕ್ಕೊಳ್ಳಬೇಕು.

ಸುಹಿರಣ್ಣಪಂಚಕಳಸೇ ಪುರಓ ವಿತ್ಥಾರಿಊಣ ವತ್ಥಮುಹೇ ||
ಪಕ್ಕಣ್ಣಂ ವಹುಭೇಯಮಂ ಫಳಾಣಿ ವಿವಿಹಾಣಿ ತಹ ಚೇವ || ೩೫೭ ||
ದಾಣಂ ಚ ಜಹಾಜೋಗ್ಗಂ ದಾಊಣ ಚಉವ್ವಿಹಸ್ಸ ಸಂಘಸ್ಸ ||
ಉಜ್ಜಾವಣವಿಹಿ ಏವಂ ಕಾಯವ್ವೋ ದೇಸವಿರಏಣ || ೩೫೮ ||

ಸುಹಿರಣ್ಯಪಂಚಕಲಶಾನ್ ಪುರೋ ವಿಸ್ತಾರ್ಯ ವಸ್ತ್ರಮುಖಾನ್ ||
ಪಕ್ವಾನ್ನಂ ಬಹುಭೇದಂ ಫಲಾನಿ ವಿವಿಧಾನಿ ತಥಾ ಚೈವ ||
ದಾನಂ ಚ ಯಥಾಯೋಗ್ಯಂ ದತ್ವಾ ಚತುರ್ವಿಧಸ್ಯ ಸಂಘಸ್ಯ ||
ಉದ್ಯಾಪನವಿಧಿರೇವಂ ಕರ್ತವ್ಯೋ ದೇಶವಿರತೇನ ||

ಅರ್ಥ:—ಉತ್ತಮವಾದ ಬಂಗಾರದ ಐದು ಕಲಶಗಳನ್ನು ವಸ್ತ್ರದಿಂದ ಮುಚ್ಚಿ ಜಿನೇಂದ್ರನ ಪ್ರತಿಮೆಯ ಮುಂದೆ ಇಡಬೇಕು. ಅದರಂತೆ ನಾನಾ ಪ್ರಕಾರದ ಪಕ್ವಾನ್ನಗಳನ್ನೂ ಫಲಗಳನ್ನೂ ಇಡಬೇಕು. ಚತುರ್ವಿಧ ಸಂಘಕ್ಕೆ ದಾನಕೊಡಬೇಕು. ಈ ಪ್ರಕಾರ ಉದ್ಯಾಪನವನ್ನು ದೇಶವಿರತನು ಮಾಡಬೇಕು.

ಉಜ್ಜವಣವಿಹಿಂ ಣ ತರಇ ಕಾಉಂ ಜಇ ಕೋವಿ ಅತ್ಥಪರಿಹೀಣೋ ||
ತೋ ವಿಉಣಂ ಕಾಯವ್ವಂ ಉವವಾಸವಿಹಾಣಂ ಪಯತ್ತೇಣ || ೩೫೯ ||

ಉದ್ಯಾಪನವಿಧಿಂ ನ ತರತಿ ಕರ್ತುಂ ಯದಿ ಕೋಽಪ್ಯರ್ಥಪರಿಹೀನಃ ||
ತದಾ ದ್ವಿಗುಣಂ ಕರ್ತವ್ಯಮುಪವಾಸವಿಧಾನಂ ಪ್ರಯತ್ನೇನ ||

ಅರ್ಥ:—ಯಾರಾದರೂ ಉದ್ಯಾಪನವನ್ನು ಮಾಡಲಿಕ್ಕೆ ಅಸಮರ್ಥನಿದ್ದರೆ ಇಮ್ಮಡಿ ಅಂದರೆ ಹತ್ತುವರ್ಷ, ಹತ್ತು ತಿಂಗಳ ಉಪವಾಸವ್ರತವನ್ನು ಪ್ರಯತ್ನದಿಂದ ಮಾಡಬೇಕು.

ಜಇ ಅಂತರಮ್ಮಿ ಕಾರಣವಸೇಣ ಏಕೋ ವ ದೋ ವ ಉವವಾಸಾ ||
ಣ ಕಓ ತೋ ಮೂಳಾಓ ಪುಣೋ ವಿ ಸೋ ಹೋಇ ಕಾಯವ್ವೋ ||೩೬೦||

ಯದ್ಯಂತರೇ ಕಾರಣವಶೇನೈಕೋ ವಾ ದ್ವೌ ವಾ ಉಪವಾಸೌ ||
ನ ಕೃತೌ ತರ್ಹಿ ಮೂಲತ: ಪುನರಪಿ ಸ ಭವತಿ ಕರ್ತವ್ಯಃ ||

ಅರ್ಥ:—ಉಪವಾಸದ ಕ್ರಮವನ್ನು ನಡೆಸುತ್ತಿರುವಾಗ್ಗೆ ರೋಗ ಮುಂತಾದ ಕಾರಣಗಳಿಂದ ಒಂದೆರಡು ಉಪವಾಸಗಳನ್ನು ಬಿಟ್ಟರೆ, ಪುನಃ ಮೊದಲಿನಿಂದ ಆ ವಿಧಿಯನ್ನು ಆರಂಭ ಮಾಡಬೇಕು. ( ಹಿಂದೆ ಮಾಡಿದ್ದು ಉಪವಾಸದ ಪ್ರಾಯಶ್ಚಿತ್ತವೆಂದು ತಿಳಿಯಬೇಕು. )

ಏಸ ಕಮೋ ಣಾಯವ್ವೋ ಸವ್ವವಿಹೀಣಂ ಭಣಿಜ್ಜಮಾಣಾಣಂ ||
ಏವಂ ಣಾಊಣ ಫುಡಂ ಣಿಯಮಾಓ ಹೋಇ ಕಾಯವ್ವೋ || ೩೬೧ ||

ಏಷ ಕ್ರಮೋ ಜ್ಞಾತವ್ಯಃ ಸರ್ವವಿಧೀನಾಂ ಭವ್ಯಸೂಸಾನಾಮ್ ॥
ಏವಂ ಜ್ಞಾತ್ವಾ ಸ್ಫುಟಂ ನಿಯಮತೋ ಭವತಿ ಕರ್ತವ್ಯಃ ॥

ಅರ್ಥ:—ಮಧ್ಯದಲ್ಲಿ ವ್ರತದ ಭಂಗವಾದರೆ ಪುನ: ಅದನ್ನು ಆರಂಭದಿಂದ ಮಾಡಬೇಕು. ಈ ನಿಯಮವು ಮುಂದಿನ ಎಲ್ಲ ವ್ರತಗಳಿಗಿರುತ್ತದೆಂಬದನ್ನು ಪೂರ್ಣವಾಗಿ ಲಕ್ಷ್ಯದಲ್ಲಿಡಬೇಕು.

ಪಂಚಮಿಉವವಾಸವಿಹಿಂ ಕಿಚ್ಚಾ ದೇವಿಂದಚಕ್ಕವಟ್ಟಿತ್ತೇ ॥
ಭೋತ್ತೂಣ ದಿವ್ವಭೋಏ ಪಚ್ಛಾ ಪಾಉಣಇ ಣಿವ್ವಾಣಂ ॥ ೩೬೨ ॥

ಪಂಚಮ್ಯುಪವಾಸವಿಧಿಂ ಕೃತ್ವಾ ದೇವೇಂದ್ರಚಕ್ರವರ್ತಿತ್ವೇ ॥
ಭುಕ್ತ್ವಾ ದಿವ್ಯಭೋಗಾನ್ ಪಶ್ಚಾತ್‌ಪ್ರಾಪ್ನೋತಿ ನಿರ್ವಾಣಮ್ ॥

ಅರ್ಥ:—ಈ ಪಂಚಮಿ ಉಪವಾಸದ ವಿಧಿಯನ್ನು ಮಾಡುವ ಭವ್ಯನು ಸ್ವರ್ಗದೊಳಗಿನ ಶ್ರೇಷ್ಠವಾದ ದೇವೇಂದ್ರನ ಪದವಿಯನ್ನೂ ಇಹಲೋಕದಲ್ಲಿಯ ಶ್ರೇಷ್ಠವಾದ ಚಕ್ರವರ್ತಿ ಪದವಿಯನ್ನೂ ಭೋಗಿಸಿ ಕಡೆಗೆ ಮುಕ್ತಿಯನ್ನು ಪಡೆಯುವನು.

## ರೋಹಿಣೀವ್ರತವು.

ವಿಹಿಣಾ ಗಹಿಊಣ ವಿಹಿಂ ರೋಹಿಣಿರಿಕ್ಖಮ್ಮಿ ಪಂಚವಾಸಾಣಿ ॥
ಪಂಚ ಯ ಮಾಸಾ ಜಾವಉ ಉವವಾಸಂ ತಮ್ಮಿ ರಿಕ್ಖಮ್ಮಿ ॥ ೩೬೩ ॥
ಕಾಊಣುಜ್ಜಾವಣಂ ಪುಣ ಪುವ್ವವಿಹಾಣೇಣ ಹೋಇ ಕಾಯವ್ವಂ ॥
ಣವರಿ ವಿಸೇಸೋ ಪಡಿಮಾ ಕಾಯವ್ವಾ ವಾಸುಪೂಜ್ಜಸ್ಸ ॥ ೩೬೪ ॥
ತಸ್ಸ ಫಳೇಣಿತ್ಥೀ ವಾ ಪುರಿಸೋ ಸೋಯಂ ಣ ಪೆಚ್ಛವಿ ಕಯಾ ವಿ ॥
ಭೋತ್ತೂಣ ವಿವುಳಭೋಯಂ ಪಚ್ಛಾ ಪಾಉಣಇ ಣಿವ್ವಾಣಂ ॥ ೩೬೫ ॥

ವಿಧಿನಾ ಗೃಹೀತ್ವಾ ವಿಧಿಂ ರೋಹಿಣ್ಯೃಕ್ಷೇ ಪಂಚವರ್ಷಾಣಿ ॥
ಪಂಚ ಚ ಮಾಸಾ ಯಾವದುಪವಾಸಂ ತಸ್ಮಿನ್ನೃಕ್ಷೇ ॥
ಕೃತ್ವೋದ್ಯಾಪನಂ ಪುನಃ ಪೂರ್ವವಿಧಾನೇನ ಭವತಿ ಕರ್ತವ್ಯಮ್ ॥
ಅಯಂ ವಿಶೇಷಃ ಪ್ರತಿಮಾ ಕರ್ತವ್ಯಾ ವಾಸುಪೂಜ್ಯಸ್ಯ ॥
ತಸ್ಯ ಫಲೇನ ಸ್ತ್ರೀರ್ವಾ ಪುರುಷಃ ಶೋಕಂ ನ ಪಶ್ಯತಿ ಕದಾಪಿ ॥
ಭುಕ್ತ್ವಾ ವಿಪುಲಭೋಗಂ ಪಶ್ಚಾತ್ಪ್ರಾಪ್ನೋತಿ ನಿರ್ವಾಣಮ್ ॥

ಅರ್ಥಃ—ರೋಹಿಣೀ ನಕ್ಷತ್ರದ ದಿವಸದಲ್ಲಿ ವಿಧಿಪೂರ್ವಕವಾಗಿ ಜಿನೇಂದ್ರನ ಪೂಜೆಯನ್ನು ಮಾಡಿ, ಆ ದಿವಸ ಗುರುಗಳಿಂದ ಉಪವಾಸ ವ್ರತವನ್ನು ತಕ್ಕೊಂಡು, ಅದನ್ನು ಐದು ವರ್ಷ, ಐದು ತಿಂಗಳ ನಡಿಸಬೇಕು. ಕಡೆಗೆ ಪೂರ್ವದಲ್ಲಿ ಹೇಳಿ

ದಂತೆಯೇ ಉದ್ಯಾಪನವನ್ನು ಮಾಡಬೇಕು. ಈ ವ್ರತದಲ್ಲಿ ವಿಶೇಷವೇನಂದರೆ, ಶ್ರೀವಾಸುಪೂಜ್ಯ ತೀರ್ಥಂಕರರ ಪ್ರತಿಮೆಯನ್ನು ಮಾಡಿಸಬೇಕು. ಈ ವ್ರತವನ್ನು ಮಾಡುವಂಥ ಸ್ತ್ರೀ ಪುರುಷರಿಗೆ ಎಂದೂ ಶೋಕವಾಗುವದಿಲ್ಲ. ಅನೇಕ ಪ್ರಕಾರದ ದಿವ್ಯ ಭೋಗಗಳನ್ನು ಭೋಗಿಸಿ ಕಡೆಗೆ ನಿರ್ವಾಣಪದವನ್ನು ಹೊಂದುವರು.

ಗಹಿಊಣಾಸಿಣಿರಿಕ್ಖಮ್ಮಿ ವಿಹಿಂ ರಿಕ್ಖೇಸು ಸತ್ತವೀಸೇಸು ||
ರಿಕ್ಖಂಪಡಿ ಏಕ್ಕೇಕ್ಕೋ ಉವವಾಸೋ ಹೋಇ ಕಾಯವ್ವೋ || ೩೬೬ ||
ಏವಂ ಕಾಊಣ ವಿಹಿಂ ಸತ್ತೀಏ ಜೋ ಕರೇಇ ಉಜ್ಜವಣಂ ||
ಭುತ್ತೂಣಬ್ಭುದಯಸುಹಂ ಸೋ ಪಾವಇ ಅಕ್ಖಯಂ ಸುಕ್ಖಂ ||೩೬೭||

ಗೃಹೀತ್ವಾಶ್ವಿನ್ಯೃಕ್ಷೇ ವಿಧಿನ್ನೃಕ್ಷೇಷು ಸಪ್ತವಿಂಶಸು ||
ಋಕ್ಷಂ ಪ್ರತ್ಯೇಕೈಕ ಉಪವಾಸೋ ಭವತಿ ಕರ್ತವ್ಯಃ ||
ಏವಂ ಕೃತ್ವಾ ವಿಧಿಂ ಶಕ್ತ್ಯಾ ಕಃ ಕರಿಷ್ಯತ್ಯುದ್ಯಾಪನಮ್ ||
ಭುಕ್ತ್ವಾಭ್ಯುದಯಸುಖಂ ಸ ಪ್ರಾಪ್ನೋತ್ಯಕ್ಷಯಂ ಸುಖಮ್ ||

ಅರ್ಥಃ—ಅಶ್ವಿನೀ ನಕ್ಷತ್ರದ ದಿವಸದಲ್ಲಿ ಉಪವಾಸದ ವ್ರತವನ್ನು ತಕ್ಕೊಂಡು ಪ್ರತಿಯೊಂದು ನಕ್ಷತ್ರದ ಉದ್ದೇಶವಾಗಿ ಆಯಾ ನಕ್ಷತ್ರದ ದಿವಸಗಳಲ್ಲಿ ಉಪವಾಸ ಮಾಡಬೇಕು. ಹೀಗೆ ವ್ರತವನ್ನು ಮಾಡಿ, ಉದ್ಯಾಪನವನ್ನು ಮಾಡುವವನು ಸ್ವಗ ಲೋಕದಲ್ಲಿ ದೇವೇಂದ್ರನಾಗಿ ಮತ್ತು ಮೃತ್ಯುಲೋಕದಲ್ಲಿ ಚಕ್ರವರ್ತಿಯಾಗಿ ಅನೇಕ ಭೋಗಗಳನ್ನು ಭೋಗಿಸಿ, ಕಡೆಗೆ ನಿರ್ವಾಣಪದವನ್ನು ಹೊಂದುವನು.

## ಸುಖಸಂಪತ್ತಿವ್ರತವು.

ಏಯಾ ಪಡಿವಾ ವೀಯಾ ಉ ದುಣ್ಣಿ ತೀಯಾ ಉ ತಿಣ್ಣಿ ಚಉತ್ಥೀಓ ||
ಚಉರೋ ಯ ಪಂಚಮೀಓ ಪಂಚ ಯ ಛಟ್ಠೀಉ ಛಟ್ಟೇವ || ೩೬೮ ||
ಸತ್ತೇವ ಸತ್ತಮೀಓ ಅಟ್ಠಟ್ಠಮ್ಮೀಓ ಯ ಣವ ಯ ಣವಮೀಓ ||
ದಸಮೀಓ ಯ ತಹಾ ಏಯಾರಸ ಏಯಾರಸೀಓ ಯ || ೩೬೯ ||
ಬಾರಸ ಯ ವಾರಸೀಓ ತೇರಹ ತಹ ತೇರಸೀಓ ಣಾಯವ್ವಾ ||
ಚೌದಸ ಯ ಚೌದಸೀಓ ಪಣ್ಣರಸಾ ಪುಣ್ಣಿಮಾಓ ಯ || ೩೭೦ ||
ಉವವಾಸಾ ಕಾಯವ್ವಾ ಜಹುತ್ತಸಂಖಾ ಕಮೇಣ ಏಯಾಸು ||
ಏಸಾ ಣಾಮೇಣ ವಿಹಿ ಣೇಯಾ ಉ ಸುಖಸಂಪತ್ತೀ || ೩೭೧ ||
ಏಯಸ್ಸಾ ಸಂಜಾಇಏ ಫಳೇಣ ಅಬ್ಭುದಯಸುಖಸಂಪತ್ತೀ ||
ಕಮಸೋ ಮುತ್ತಿಸುಹಸ್ಸ ವಿ ತಮ್ಹಾ ಕುಜ್ಜಾ ಪಯತ್ತೇಣ || ೩೭೨ ||

ಏಕಾ ಪ್ರತಿಪದ್ದ್ವಿತೀಯೇ ತು ದ್ವಯೇ ತೃತ್ರೀಯಾಯೊಸ್ತು ತ್ರಯಶ್ಚತುರ್ಥ್ಯಾ: ॥
ಚತಸ್ರಶ್ಚ ಪಂಚಮ್ಯ: ಪಂಚ ಚ ಷಷ್ಠ್ಯಾಃ ಷಡೇವ ॥
ಸಪ್ತೈವ ಸಪ್ತಮ್ಯೋಷ್ಟ ಚ ನವ ಚ ನವಮ್ಯಾಃ ॥
ದಶಮ್ಯೋ ದಶ ತಥೈಕಾದಶ್ಯೈ ಏಕಾದಶ್ಯಾಶ್ಚ ॥
ದ್ವಾದಶ ದ್ವಾದಶ್ಯಾಸ್ತ್ರಯೋದಶ ತ್ರಯೋದಶ್ಯೋ ಜ್ಞಾತವ್ಯಾ: ॥
ಚತುರ್ದಶ ಚತುರ್ದಶ್ಯಾಃ ಪಂಚದಶ ಪೌರ್ಣಮಾಯಾಶ್ಚ ॥
ಉಪವಾಸಾ: ಕರ್ತವ್ಯಾ ಯಥೋಕ್ತಸಂಖ್ಯಾಃ ಕ್ರಮೇಣೈತಾಸು ॥
ಏಷಾ ನಾಮ್ನಾ ವಿಧಿರ್ಜ್ಞೇಯಾ ಸುಖಸಂಪತ್ತಿಃ ॥
ಏತಸ್ಯಾ: ಸಂಜಾಯತೇ ಫಲೇನಾಭ್ಯುದಯಸುಖಸಂಪತ್ತಿ: ॥
ಕ್ರಮಶೋ ಮುಕ್ತಿಸುಖಸ್ಯಾಪಿ ತಸ್ಮಾತ್ಕಾರ್ಯಾತ್ಪ್ರಯತ್ನೇನ ॥

ಅರ್ಥ:—ಪ್ರತಿಪದಾ ತಿಥಿಯ ಒಂದು ಉಪವಾಸವನ್ನೂ ಪ್ರತಿಯೊಂದು ದ್ವಿತೀಯಗೆ ಒಂದರಂತೆ ದ್ವಿತೀಯ ಎರಡು ಉಪವಾಸಗಳನ್ನೂ ಪ್ರತಿಯೊಂದು ತೃತಿಯಗೆ ಒಂದರಂತೆ ತೃತಿಯ ಮೂರು ಉಪವಾಸಗಳನ್ನೂ ಮಾಡಬೇಕು. ಇದರಂತೆ ಚತುರ್ಥಿಗೆ ನಾಲ್ಕು, ಪಂಚಮಿಗೆ ಐದು, ಷಷ್ಠಿಗೆ ಆರು, ಸಪ್ತಮಿಗೆ ಏಳು, ಅಷ್ಟಮಿಗೆ ಎಂಟು, ನವಮಿಗೆ ಒಂಭತ್ತು, ದಶಮಿಗೆ ಹತ್ತು, ಏಕಾದಶಿಗೆ ಹನ್ನೊಂದು, ದ್ವಾದಶಿಗೆ ಹನ್ನೆರಡು, ತ್ರಯೋದಶಿಗೆ ಹದಿಮೂರು, ಚತುರ್ದಶಿಗೆ ಹದಿನಾಲ್ಕು, ಹುಣ್ಣಿವಿಗೆ ಹದಿನೈದು, ಉಪವಾಸಗಳನ್ನು ಮಾಡಬೇಕು. ಇದಕ್ಕೆ ಸುಖಸಂಪತ್ತೀವ್ರತ ಅನ್ನುತ್ತಾರೆ. ಈ ವ್ರತದಿಂದ ಸಂಸಾರದಲ್ಲಿ ಸೌಖ್ಯವುಂಟಾಗಿ ಕಡೆಗೆ ಮುಕ್ತಿಯಾದರೂ ಪ್ರಾಪ್ತವಾಗುತ್ತದೆ.

## ನಂದೀಶ್ವರಪಂಕ್ತಿವಿಧಾನ.

ಕಾಊಣ ಅಠ್ಠ ಏಯಂತರಾಣಿ ರಇಯರಣಗೇಸು ಚತ್ತಾರಿ ॥
ದಹಿಮುಹಸೇಲೇಸು ಪುಣೋ ಅಂಜಣಜಿಣಚೇಇಏಣಠ್ಠಂ ॥ ೩೭೩ ॥
ನಂದೀಸರಮ್ಮಿ ದೀವೇ ಏವಂ ಚಉಸು ವಿ ದಿಸಾಸು ಕಾಯವ್ವಾ ॥
ಉವವಾಸಾ ಏಸ ವಿಹಿ ಣಂದೀಸರಪಂತಿ ಣಾಮೇಣ ॥ ೩೭೪ ॥
ಜಂ ಕಿಂಪಿ ದೇವಲೋಏ ಮಹದ್ಧಿದೇವಾಣ ಮಾಣುಸಾಣ ಸುಹಂ ॥
ಭೋತ್ತೂಣ ಸಿದ್ಧಿಸೋಕ್ಖಂ ಪಾಊಣಇ ಫಳೇಣ ಏಯಸ್ಸ ॥ ೩೭೫ ॥

ಕೃತ್ವಾಷ್ಟಾವೇಕಾಂತರಾ ರತಿಕರನಗೇಷು ಚತ್ವಾರ: ॥
ದಧಿಮುಖಶೈಲೇಷು ಪುನರಂಜನಗಿರಿಜಿನಚೈತ್ಯಾರ್ಥಮ್ ॥
ನಂದೀಶ್ವರೇ ದ್ವೀಪೇ ಏವಂ ಚತುರ್ಷ್ವಪಿ ದಿಶಾಸು ಕರ್ತವ್ಯಾ: ॥
ಉಪವಾಸಾ ಏಷ ವಿಧಿರ್ನಂದೀಶ್ವರಪಂಕ್ತಿರ್ನಾಮ್ನಾ ॥

ಯತ್ಕಿಮಪಿ ದೇವಲೋಕೇ ಮಹರ್ಧಿಕದೇವಾನಾಂ ಮನುಷ್ಯಾಣಾಂ ಸುಖಮ್ ॥
ಭುಕ್ತ್ವಾ ಸಿದ್ಧಿಸೌಖ್ಯಂ ಪ್ರಾಪ್ನೋತಿ ಫಲೇನೈತಸ್ಯ ॥

ಅರ್ಥ:—ನಂದೀಶ್ವರ ದ್ವೀಪದೊಳಗಿನ ರತಿಕರವೆಂಬ ಹೆಸರಿನ ಎಂಟು ಪರ್ವತಗಳ ಮೇಲಿನ ಜಿನಬಿಂಬಗಳಗೋಸ್ಕರ ಒಂದು ದಿವಸ ಬಿಟ್ಟು ಒಂದು ದಿವಸದಂತೆ ಎಂಟು ಉಪವಾಸ ಮಾಡಬೇಕು. ಅನಂತರ ನಾಲ್ಕು ದಧಿಮುಖ ಪರ್ವತಗಳ ಮೇಲಿನ ಜಿನಬಿಂಬಗಳ ಬಗ್ಗೆ ಒಂದು ದಿವಸ ಬಿಟ್ಟು ಒಂದು ದಿವಸದಂತೆ ನಾಲ್ಕು ಉಪವಾಸಗಳನ್ನು ಮಾಡಬೇಕು. ಬಳಿಕ ಅಂಜನಗಿರಿ ಪರ್ವತದ ಮೇಲಿನ ಜಿನಬಿಂಬದ ದೆಶೆಯಿಂದ ಒಂದು ಉಪವಾಸ ಮಾಡಬೇಕು. ಒಟ್ಟಿಗೆ ಹದಿಮೂರು ಉಪವಾಸಗಳಾದವು. ಇವೆಲ್ಲವೂ ಒಂದೇ ದಿಕ್ಕಿನವು. ಇದರಂತೆ ಎಲ್ಲ ದಿಕ್ಕುಗಳ ಪರ್ವತಗಳ ಮೇಲಿನ ಜಿನಬಿಂಬಗಳ ದೆಶೆಯಿಂದ ಉಪವಾಸ ಮಾಡಬೇಕು. ಹೀಗೆ ಒಟ್ಟಿಗೆ ೫೨ ಉಪವಾಸಗಳಾಗುತ್ತವೆ. ಇದು ನಂದೀಶ್ವರ ಪಂಕ್ತಿಯೆಂಬ ವ್ರತವು. ಈ ವ್ರತವನ್ನು ಮಾಡುವವರಿಗೆ ದೇವಲೋಕದಲ್ಲಿ ಮಹರ್ಧಿಕ ದೇವರ ಸೌಖ್ಯವೂ ಮನುಷ್ಯ ಲೋಕದಲ್ಲಿ ಮನುಷ್ಯನಿಗಿದ್ದ ಸೌಖ್ಯವೆಲ್ಲವೂ ದೊರೆದು ಕಡೆಗೆ ನಿರ್ವಾಣ ಪದವು ಪ್ರಾಪ್ತವಾಗುತ್ತದೆ.

## ವಿಮಾನಪಂಕ್ತಿವಿಧಾನ.

ಏಯಂತರೋವವಾಸಾ ಚತ್ತಾರೀ ಚಉದಿಸಾಸು ಕಾಊಣ ॥
ಛಠ್ಠಂ ಮಜ್ಝೇ ಏವಂ ತಿಸಠ್ಠಿಖುತ್ತೋ ವಿಹಿಂ ಕುಜ್ಜಾ ॥ ೩೭೬ ॥
ಪಠ್ಠವಣೇ ಣಿಠ್ಠವಣೇ ಛಠ್ಠಂ ಮಜ್ಝಮ್ಮಿ ಅಠ್ಠಯಂ ಚ ತಹಾ ॥
ಏಸ ವಿಹೀ ಣಾಯವ್ವೋ ವಿಮಾಣಪಂತಿ ಣಾಮೇಣ ॥ ೩೭೭ ॥
ಫಳಮೇಯಸ್ಸಾ ಭೋತ್ತೂಣ ದೇವಮಣುಸೇಸು ಇಂದಿಯಜಂ ಸುಖಂ ॥
ಪಚ್ಛಾ ಪಾವಇ ಮೋಕ್ಖಂ ಥುಣಿಜ್ಜಮಾಣೋ ಸುರಿಂದೇಹಿಂ ॥ ೩೭೮ ॥

ಏಕಾಂತರೋಪವಾಸಾಶ್ಚತ್ವಾರಶ್ಚತುರ್ದಿಕ್ಷು ಕೃತ್ವಾ ॥
ಷಷ್ಠಂ ಮಧ್ಯ ಏವಂ ತ್ರಿಷಷ್ಟಿಕೃತ್ವೋ ವಿಧಿಂ ಕುರ್ಯಾತ್ ॥
ಪ್ರಸ್ಥಾಪನೇ ನಿಷ್ಠಾಪನೇ ಷಷಂ ಮಧ್ಯೇಷ್ಟಕಂ ಚ ತಥಾ ॥
ಏಷ ವಿಧಿರ್ಜ್ಞಾತವ್ಯೋ ವಿಮಾನಪಂಕ್ತಿರ್ನಾಮ್ನಾ ॥
ಫಲಮೇತಸ್ಯಾ ಭುಕ್ತ್ವಾ ದೇವಮನುಷ್ಯೇಷ್ವಿಂದ್ರಿಯಜಂ ಸುಖಮ್ ॥
ಪಶ್ಚಾತ್ಪ್ರಾಪ್ನೋತಿ ಮೋಕ್ಷಂ ಸ್ತೂಯಮಾನಃ ಸುರೇಂದ್ರೈಃ ॥

ಅರ್ಥ:—ನಾಲ್ಕು ದಿಕ್ಕುಗಳಿಗೆ ಉದ್ದೇಶಿಸಿ ನಾಲ್ಕು ಒಪ್ಪತ್ತಿನ ಊಟಗಳನ್ನೂ ನಾಲ್ಕು ಉಪವಾಸಗಳನ್ನೂ ಮಾಡಬೇಕು. ಮಧ್ಯದಲ್ಲಿ ಎರಡು ಉಪವಾಸಗಳನ್ನು ಮಾಡಬೇಕು. ಇದರಂತೆ ೬೩ ಸಾರೆ ಮಾಡಬೇಕು. ಎರಡು ಉಪ

ವಾಸವಾದ ನಂತರ ಒಂದಾವರ್ತಿ ಊಟವನ್ನು ಮಾಡಬೇಕು. ಅನಂತರ ಒಂದು ಉಪವಾಸ, ಆಮೇಲೆ ಒಪ್ಮೆ ಒಂದಾವರ್ತಿ ಊಟ, ಈ ಕ್ರಮದಿಂದ ನಾಲ್ಕು ಉಪವಾಸಗಳನ್ನೂ ನಾಲ್ಕು ಒಪ್ಪತ್ತಿನ ಊಟಗಳನ್ನೂ ಮಾಡಬೇಕು. ಈ ನಿಯಮವು ಒಂದು ಪಟಲದ್ದು ಇರುತ್ತದೆ. ಎರಡನೆಯ ಪಟಲದ ಬಗ್ಗೆ ಮೊದಲು ಒಂದಾವರ್ತಿಪೂಟ, ತರುವಾಯ ಎರಡು ಉಪವಾಸ, ಆ ಮೇಲೆ ಒಂದಾವರ್ತಿಪೂಟ ಮತ್ತು ಒಂದು ಉಪವಾಸ ಹೀಗೆ ನಾಲ್ಕು ಉಪವಾಸ ಮತ್ತು ನಾಲ್ಕು ಒಂದಾವರ್ತಿಊಟ ಮಾಡಬೇಕು. ಈ ಪ್ರಕಾರ ಊರ್ಧ್ವಲೋಕದೊಳಗಿನ ವಿಮಾನದ ೬೩ ಪಟಲದ ಬಗ್ಗೆ ೬೩ ಸಾರೆ ಮಾಡಬೇಕು. ಕಡೆಗೆ ಮೂರು ಉಪವಾಸಗಳನ್ನು ಮಾಡಬೇಕು. ಅಂದರೆ ವ್ರತವು ಪೂರ್ಣವಾಗುತ್ತದೆ. ಒಂದೊಂದು ಪಟಲಕ್ಕೆ ನಾಲ್ಕು ನಾಲ್ಕು ಉಪವಾಸಗಳಂತೆ ೬೩ ಪಟಲಕ್ಕೆ ೨೫೨ ಉಪವಾಸಗಳಾಗುತ್ತವೆ. ಎರಡು ಉಪವಾಸಗಳು ೧೨೬ ಆಗುತ್ತವೆ. ಕಡೆಯ ೩ ಉಪವಾಸಗಳು ಕೂಡಿ ಒಟ್ಟಿಗೆ ೩೮೧ ಉಪವಾಸಗಳಾಗುತ್ತವೆ. ಇದರಂತೆ ೬೩ ಪಟಲಕ್ಕೆ ೨೫೨ ಒಂದಾವರ್ತಿ ಊಟಗಳಾಗುತ್ತವೆ. ೬೩ ಎರಡು ಉಪವಾಸಕ್ಕೆ ೬೩ ಒಂದಾವರ್ತಿ ಊಟಗಳು ಮತ್ತು ಕಡೆಯ ಮೂರು ಉಪವಾಸದ ಒಂದು ಊಟ ಒಟ್ಟಿಗೆ ೩೧೬ ಒಂದಾವರ್ತಿ ಊಟಗಳಾಗುತ್ತವೆ. ಹೀಗೆ ಈ ವ್ರತಕ್ಕೆ ಉಪವಾಸಗಳು ೩೮೧ ಮತ್ತು ಒಂದಾವರ್ತಿ ಊಟಗಳು ೩೧೬, ಎಲ್ಲ ಕೂಡಿ ೬೯೭ ದಿವಸಗಳು ಬೇಕಾಗುತ್ತವೆ. ಈ ನಿಯಮವು ವಿಮಾನಪಂಕ್ತಿಯ ವ್ರತದ್ದೆಂದು ತಿಳಿಯತಕ್ಕದ್ದು. ಈ ವ್ರತದ ಫಲದಿಂದ ದೇವಲೋಕದಲ್ಲಿಯೂ ಭೂಲೋಕದಲ್ಲಿಯೂ ಅನೇಕ ಪ್ರಕಾರದ ಸುಖಗಳು ಪ್ರಾಪ್ತವಾಗಿ ಕಡೆಗೆ ಮನುಷ್ಯನು ದೇವೇಂದ್ರನಿಂದಾದರೂ ವಂದಿಸಲ್ಪಡುವವನಾಗಿ ಮೋಕ್ಷಪದವನ್ನು ಪಡೆಯುತ್ತಾನೆ.

ಉದ್ದೇಸಮತ್ತಮೇಯಂ ಕೀರಇ ಅಣ್ಣಂ ಪಿ ಜಂ ಸಸತ್ತೀಏ ||
ಸುತ್ತೋತ್ತತವವಿಹಾಣಂ ಕಾಯಕಿಳೇಸುತ್ತಿ ತಂ ವಿಂತಿ || ೩೭೯ ||

ಉದ್ದೇಶಮಾತ್ರಮೇತತ್ಕ್ರಿಯತೇಽನ್ಯದಪಿ ಯತ್ಸ್ವಶಕ್ತ್ಯಾ ||
ಸೂತ್ರೋಕ್ತತಪೋವಿಧಾನಂ ಕಾಯಕ್ಲೇಶ ಇತಿ ತಜ್ಞಾನಂತಿ ||

ಅರ್ಥಃ—ಇಲ್ಲಿ ಸ್ವಲ್ಪವ್ರತಗಳ ವರ್ಣನೆಯು ಮಾಡಲ್ಪಟ್ಟಿದೆ. ಆದರೆ ಜಿನಶಾಸ್ತ್ರದಲ್ಲಿ ಎಷ್ಟೋ ವ್ರತಗಳು ಹೇಳಲ್ಪಟ್ಟವೆ. ಇವುಗಳನ್ನು ಯಥಾ ಶಕ್ತಿಯಿಂದ ಮಾಡುವದು ಕಾಯಕ್ಲೇಶವೆಂದು ತಿಳಿಯುತ್ತಾರೆ. ಶಾಸ್ತ್ರದಲ್ಲಿ ತಪದ ಅನೇಕ ಭೇದಗಳಿರುತ್ತವೆ. ಅವುಗಳಲ್ಲಿ ಕೆಲವು ಹೇಳುತ್ತೇನೆ:— ೧ ಅಷ್ಟಾನಿಕವ್ರತ, ೨ ಷೋಡಶಕಾರಣವ್ರತ, ೩ ಲಬ್ಧಿವಿಧಾನ, ೪ ಅಕ್ಷಯನಿಧಿ, ೫ ಮೇಘಮಾಲಾ, ೬ ಜೇಷ ಜಿನವರ, ೭ ಷಡ್ರಸತ್ಯಾಗ, ೮ ಪಾಕ್ಷಿಕ, ೯ ಜ್ಞಾನಪಂಚವಿಂಶತಿ, ೧೦ ಸುಖಕರಣ, ೧೧ ಸಮವಸರಣ, ೧೨ ಆಕಾಶಪಂಚಮಿ, ೧೩ ಅಕ್ಷಯದಶಮಿ, ೧೪ ಚಂದನಷಷ್ಟಿ, ೧೫

ನಿರ್ದೋಷಸಪ್ತಮೀ, ೧೬ ಸುಗಂಧದಶಮೀ, ೧೭ ಶ್ರಾವಣದ್ವಾದಶೀ, ೧೮ ಅನಂತ ಚತುರ್ದಶೀ, ೧೯ ನೌಕಾರಪೈತೀಸೀ, ೨೦ ಐವತ್ತೂರುಕ್ರಿಯೆ, ೨೧ ಜಿನಗುಣಸಂಪತ್ತಿ, ೨೨ ಶೀಲಕಲ್ಯಾಣ, ೨೩ ಶೀಲವ್ರತ, ೨೪ ನಕ್ಷತ್ರಮಾಲಾ, ೨೫ ಸರ್ವಾರ್ಥಸಿದ್ಧಿ, ೨೬ ಲೇನಚೌವೀಸಿ, ೨೭ ಶ್ರುತಸ್ಕಂಧ, ೨೮ ಜಿನಮುಖಾವಲೋಕನ, ೨೯ ಲಘುಸುಖ ಸಂಪತ್ತಿ, ೩೦ ಬೃಹತ್ಸುಖಸಂಪತ್ತಿ, ೩೧ ದ್ವಾದಶವ್ರತ, ೩೨ ಏಕಾವಲಿ, ೩೩ ದ್ವಿಕಾವಲಿ, ೩೪ ರತ್ನಾವಲಿ, ೩೫ ಕನಕಾವಲಿ, ೩೬ ಮುಕ್ತಾವಲಿ, ೩೭ ಬೃಹನ್ಮುಕ್ತಾವಲಿ, ೩೮ ಮುಕುಟಸಪ್ತಮೀ, ೩೯ ಲಘುಮೃದಂಗಮಧ್ಯ, ೪೦ ಬೃಹನ್ಮೃದಂಗಮಧ್ಯ, ೪೧ ಧರ್ಮಚಕ್ರ, ೪೨ ನವನಿಧಿ, ೪೩ ಶ್ರುತಜ್ಞಾನಪದ, ೪೪ ಸಿಂಹವಿಕ್ರೀಡಿತ, ೪೫ ಚೌತಿಸ ( ೩೪ ) ಅತಿಶಯ, ೪೬ ಚಾರಿತ್ರಶುದ್ಧಿ, ೪೭ ಬಾರಹಪೈಚೌತಿಸಾ, ೪೮ ಪಂಚಪರಮೇಷ್ಠಿಗುಣ, ೪೯ ಪುಷ್ಪಾಂಜಲಿ, ೫೦ ಬೇಲಾವ್ರತ, ೫೧ ಚೌವೀಸೀಕಾ ಬೇಲಾವ್ರತ, ೫೨ ಜಿನಪೂಜಾಪುರಂದರ, ೫೩ ಕೋಕಿಲಾಪಂಚಮೀ, ೫೪ ಕವಲ ಚಾಂದ್ರಾಯಣ, ೫೫ ಮೇರುಪಂಕ್ತಿ, ೫೬ ಪಲ್ಯವಿಧಾನ, ೫೭ ನಿರ್ಜರಾಪಂಚಮೀ, ೫೮ ಕರ್ಮನಿರ್ಜರಣ, ೫೯ ಆದಿತ್ಯವ್ರತ, ೬೦ ಕರ್ಮಚುರಣ, ೬೧ ಅನಸ್ತಮೀ, ೬೨ ಪಂಚಕಲ್ಯಾಣ, ೬೩ ನಿರ್ವಾಣಕೇವಲ, ೬೪ ಲಘುಪಂಚಕಲ್ಯಾಣ ಮುಂತಾದ ವ್ರತಗಳ ಸ್ವರೂಪವನ್ನು ವ್ರತಕಥಾಕೋಶ ಗ್ರಂಥದಿಂದ ತಿಳಿಯತಕ್ಕದ್ದು.

## ಪೂಜನವಿಧಾನ.

ಜಿಣಸಿದ್ಧಸೂರಿಪಾಠಯಸಾಹೂಣಂ ಜಂ ಸುಯಸ್ಸ ವಿಹವೇಣ ॥
ಕೀರಇ ವಿವಿಹಾ ಪೂಜಾ ವಿಯಾಣ ತಂ ಪೂಜಣವಿಹಾಣಂ ॥ ೩೮೦ ॥

ಜಿನಸಿದ್ಧಸೂರಿಪಾಠಕಸಾಧೂನಾಂ ಯತ್ ಶ್ರುತಸ್ಯ ವಿಭವೇನ ॥
ಕ್ರಿಯತೇ ವಿವಿಧಾ ಪೂಜಾ ವಿಜಾನೀಹಿ ತತ್ಪೂಜನವಿಧಾನಮ್ ॥

ಅರ್ಥಃ—ಅರಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸಾಧು ಮತ್ತು ಶಾಸ್ತ್ರ ಇವುಗಳನ್ನು ಎಂಟು ಪ್ರಕಾರದಿಂದಲೂ ಅಥವಾ ಶಾಸ್ತ್ರದಲ್ಲಿ ಹೇಳಿದ ಅನೇಕ ಪ್ರಕಾರದಿಂದಲೂ ಪೂಜೆಯನ್ನು ಮಾಡುವದಕ್ಕೆ ಪೂಜಾವಿಧಾನವೆನ್ನುವರು.

## ಆರು ಪ್ರಕಾರದ ಪೂಜೆ.

ಣಾಮಟ್ಠವಣಾದವ್ವೇ ಖಿತ್ತೇ ಕಾಳೇ ವಿಯಾಣ ಭಾವೇ ಯ ॥
ಛವ್ವಿಹಪೂಯಾ ಭಣಿಯಾ ಸಮಾಸಓ ಜಿಣವರಿಂದೇಹಿಂ ॥ ೩೮೧ ॥

ನಾಮಸ್ಥಾಪನಾದ್ರವ್ಯೇ ಕ್ಷೇತ್ರೇ ಕಾಲೇ ವಿಜಾನೀಹಿ ಭಾವೇ ಚ ॥
ಷಡ್ವಿಧಪೂಜಾ ಭಣಿತಾ ಸಮಾಸತೋ ಜಿನವರೇಂದ್ರೈಃ ॥

ಅರ್ಥ:—ನಾಮಪೂಜೆ, ಸ್ಥಾಪನಾಪೂಜೆ, ದ್ರವ್ಯಪೂಜೆ, ಕ್ಷೇತ್ರಪೂಜೆ, ಕಾಲಪೂಜೆ ಮತ್ತು ಭಾವಪೂಜೆ ಹೀಗೆ ಆರು ಪ್ರಕಾರದ ಪೂಜೆಯನ್ನು ಜಿನೇಶ್ವರನು ಹೇಳಿದ್ದಾನೆ.

## ನಾಮಪೂಜೆ.

ಉಚ್ಚಾರಿಊಣ ಣಾಮಂ ಅರುಹಾಈಣಂ ವಿಸುದ್ಧದೇಸಮ್ಮಿ ॥
ಪುಪ್ಫಾಣಿ ಜಂ ಖಿವಿಜ್ಜಂತಿ ವಿಣ್ಣೇಯಾ ಣಾಮಪೂಯಾ ಸಾ ॥ ೩೮೨ ॥

ಉಚ್ಚಾರ್ಯ ನಾಮಾರ್ಹದಾದೀನಾಂ ವಿಶುದ್ಧದೇಶೇ ॥
ಪುಷ್ಪಾಣಿ ಯತ್‌ಕ್ಷಿಪ್ಯಂತೇ ವಿಜ್ಞೇಯಾ ನಾಮಪೂಜಾ ಸಾ ॥

ಅರ್ಥಃ—ಅರಹಂತ, ಸಿದ್ಧ, ಆಚಾರ್ಯ, ಉಪಾಧ್ಯಾಯ, ಸರ್ವಸಾಧು, ಸರಸ್ವತಿ ಮುಂತಾದ ದೇವರ ಹೆಸರುಗಳನ್ನು ಉಚ್ಚರಿಸಿ ಪವಿತ್ರವಾದ ಸ್ಥಳದಲ್ಲಿ ಪುಷ್ಪಗಳನ್ನು ಹಾಕುವದಕ್ಕೆ ನಾಮಪೂಜೆಯೆನ್ನುವರು.

## ಸ್ಥಾಪನಾಪೂಜೆ.

ಸಬ್ಭಾವಾಸಬ್ಭಾವಾ ದುವಿಹಾ ಠವಣಾ ಜಿಣೇಹಿ ಪಣ್ಣತ್ತಾ ॥
ಸಾಯಾರವಂತವತ್ಥುಮ್ಮಿ ಜಂ ಗುಣಾರೋವಣಂ ಪಢಮಾ ॥ ೩೮೩ ॥

ಸದ್ಭಾವಾಸದ್ಭಾವಾ ದ್ವಿವಿಧಾ ಸ್ಥಾಪನಾ ಜಿನೈಃ ಪ್ರಣೀತಾ ॥
ಸಾಕಾರವತಿ ವಸ್ತುನಿ ಯದ್ಗುಣಾರೋಪಣಂ ಪ್ರಥಮಾ ॥

ಅರ್ಥಃ—ಸ್ಥಾನಪೂಜೆಯಲ್ಲಿ ಸದ್ಭಾವಸ್ಥಾಪನೆ ಮತ್ತು ಅಸದ್ಭಾವಸ್ಥಾಪನೆ ಎಂದು ಎರಡು ಭೇದಗಳುಂಟು. ಆಕಾರಯುಕ್ತ ವಸ್ತುವಿನ ಸ್ಥಳದಲ್ಲಿ (ಬಂಗಾರ, ಬೆಳ್ಳಿಗಳಿಂದ ಮಾಡಿದ ಮೂರ್ತಿಗಳಲ್ಲಿ) ಶ್ರೀಜಿನರ ಗುಣದ ಆರೋಪಣ ಮಾಡಿ, ಪೂಜೆಯನ್ನು ಮಾಡುವದು ಸದ್ಭಾವಪೂಜೆಯೆಂದು ತಿಳಿಯತಕ್ಕದ್ದು.

ಅಕ್ಖಯವರಾಡಓ ವಾ ಅಮುಗೋ ಏಸೋತ್ತಿ ಣೀಯಬುದ್ಧೀಏ ॥
ಸಂಕಪ್ಪಿಊಣ ವಯಣಂ ಏಸಾ ವಿಣೇಯಾ ಅಸಬ್ಭಾವಾ ॥ ೩೮೪ ॥

ಅಕ್ಷತೋ ವರಾಟಕೋ ವಾಮುಕ ಏಷ ಇತಿ ನಿಜಬುದ್ಧ್ಯಾ ॥
ಸಂಕಲ್ಪ್ಯ ವಚನಮೇಷಾ ವಿಜ್ಞೇಯಾಸದ್ಭಾವಾ ॥

ಅರ್ಥ:—ಅಕ್ಕಿಯನ್ನಾಗಲಿ, ಕಮಲದ ಬೀಜವನ್ನಾಗಲಿ, ಪುಷ್ಪವನ್ನಾಗಲಿ ತೆಗೆದುಕೊಂಡು ಅದು ಇಂಥ ದೇವತೆ (ಅರಹಂತ, ಸಿದ್ಧ ಇತ್ಯಾದಿ) ಎಂದು ತನ್ನ ಬುದ್ಧಿಯಿಂದ ಸಂಕಲ್ಪಮಾಡಿಕೊಂಡು, ಅದನ್ನು ಉಚರಿಸಿ ಅದರ ಸ್ಥಾಪನೆಯನ್ನು ಮಾಡುವದು ಅಸದ್ಭಾವಸ್ಥಾಪನೆ ಎಂದು ತಿಳಿಯತಕ್ಕದ್ದು. ಇದಕ್ಕೇ ನಿರಾಕಾರ ಅಥವಾ ಅತದಾಕಾರಸ್ಥಾಪನೆ ಅನ್ನುತ್ತಾರೆ. ಸದ್ಭಾವ ಮತ್ತು ಅಸದ್ಭಾವ ಇವುಗಳ ಅರ್ಥದ ಬಗ್ಗೆ ಎಷ್ಟೋ ಜನರ ಅಭಿಪ್ರಾಯವೇನಂದರೆ— "ಸಮವಸರಣ

ದಲ್ಲಿರುವಂಥ ಸಾಕ್ಷಾತ್ ತೀರ್ಥಂಕರ ಕೇವಲಿಯು ತದಾಕಾರವು, ಮತ್ತು ತೀರ್ಥಂಕರ ಪ್ರತಿಮೆಯು ಅತದಾಕಾರವು. ಯಾಕಂದರೆ, ಪ್ರತ್ಯಕ್ಷ ತೀರ್ಥಂಕರರ ಆಕೃತಿಯೂ ಎತ್ತರವೂ ವರ್ಣವೂ (ಪೀತ, ನೀಲ ಇತ್ಯಾದಿ) ಎಷ್ಟು ಇರುತ್ತವೆಯೋ, ಅಷ್ಟು ಆಕಾರದ ಪ್ರತಿಮೆಯಾಗುವದು ಅಶಕ್ಯವಿರುತ್ತದೆ. ಅಂದರೆ ತೀರ್ಥಂಕರರ ಆಕೃತಿಯ ಹಾಗೆ ಪ್ರತಿಮೆಯು ಆಗುವದಿಲ್ಲ. ಆದ್ದರಿಂದಲೇ ಅದಕ್ಕೆ ಅತದಾಕಾರ ಅನ್ನುತ್ತಾರೆ. ಆದಕಾರಣ ಸಾಕ್ಷಾತ್ ತೀರ್ಥಂಕರ ಪೂಜೆಯು ತದಾಕಾರವೆಂತಲೂ ಜಿನಬಿಂಬದ ಪೂಜೆಯು ಅತದಾಕಾರವೆಂತಲೂ ತಿಳಿಯತಕ್ಕದ್ದು."

ಹುಂಡಾವಸಪ್ಪಿಣೀಏ ಬಿದಿಯಾ ಠವಣಾ ಣ ಹೋದಿ ಕಾಯವ್ವಾ ||
ಳೋಏ ಕುಳಿಂಗ ಮಇಮೋಹಿಯಾ ಜದೋ ಹೋಯಸಂದೇಹೋ ||೩೮೫||

ಹುಂಡಾವಸರ್ಪಿಣ್ಯಾಂ ದ್ವಿತೀಯಾ ಸ್ಥಾಪನಾ ನ ಭವತಿ ಕರ್ತವ್ಯಾ ||
ಲೋಕೇ ಕುಲಿಂಗೇ ಮತಿರ್ಮೋಹಿತಾ ಯತೋ ಭವತ್ಯಸಂದೇಹಃ ||

ಅರ್ಥ:—ಈ ಹುಂಡಾವಸರ್ಪಿಣಿಯು ಅಸದ್ಭಾವಸ್ಥಾಪನೆಯನ್ನು ಮಾಡಬಾರದು; ಯಾಕಂದರೆ, ಮಿಥ್ಯಾಮತದಲ್ಲಿ ಅಸದ್ಭಾವಸ್ಥಾಪನೆಯ ಪ್ರವೃತ್ತಿಯು ಇರುತ್ತದೆ. ಅದರಿಂದ ಬುದ್ಧಿಯು ಭ್ರಮವಾಗಬಹುದು. ( ಮಿಥ್ಯಾಮತದಲ್ಲಿದ್ದ ಅಸದ್ಭಾವಸ್ಥಾಪನೆಯ ವಿಚಾರಗಳು ಜೈನಮತದಲ್ಲಿ ಸೇರುವವು. )

## ಸದ್ಭಾವಸ್ಥಾಪನೆಯ ವಿಶೇಷ ಸ್ವರೂಪ.

ಕಾರಾವಗಿಂದಪಡಿಮಾ ಪಇಟ್ಠಲಖ್ಖಣವಿಹಿಂ ಫಳಂ ಚೇವ ||
ಏದೇ ಪಂಚಹಿಯಾರಾ ಣಾಯವ್ವಾ ಪಢಮಠವಣಾಯಾ || ೩೮೬ ||

ಕಾರಾಪಕೇಂದ್ರಪ್ರತಿಮಾಃ ಪ್ರತಿಷ್ಠಾಲಕ್ಷಣವಿಧಿಂ ಫಲಂ ಚೈವ ||
ಏತೇ ಪಂಚಾಧಿಕಾರಾ ಜ್ಞಾತವ್ಯಾಃ ಪ್ರಥಮಸ್ಥಾಪನಾಯಾಃ ||

ಅರ್ಥ:—ಸದ್ಭಾವಸ್ಥಾಪನೆಯು ಐದು ಅಧಿಕಾರಗಳಿರುತ್ತವೆ. ಅವು:— ಕಾರಾಪಕ ( ಪ್ರತಿಷ್ಠೆಯನ್ನು ಮಾಡಿಸುವವನು ), ಇಂದ್ರ ( ಪ್ರತಿಷ್ಠೆಯನ್ನು ಮಾಡುವವನು ), ಪ್ರತಿಮೆ, ಪ್ರತಿಷ್ಠಾಲಕ್ಷಣ ವಿಧಿ, ಮತ್ತು ಪ್ರತಿಷ್ಠೆಯ ಫಲ ಎಂದು ಐದು ಭೇದಗಳುಂಟು.

### ಕಾರಾಪಕ.

ಭಾಗೀ ವಚ್ಛಲಪಹಾವಣಾಖಮಾಸಚ್ಚಮದ್ದವೋವೇದೋ ||
ಜಿಣಸಾಸಣಗುರುಭತ್ತೋ ಸುತ್ತೇ ಕಾರಾವಗೋ ಭಣಿದೋ || ೩೮೭ ||

ಭಾಗೀ ವಾತ್ಸಲ್ಯಪ್ರಭಾವನಾಕ್ಷಮಾಸತ್ಯಮಾರ್ದವೋಪೇತಃ ||
ಜಿನಶಾಸನಗುರುಭಕ್ತಃ ಸೂತ್ರೇ ಕಾರಾಪಕೋ ಭಣಿತಃ ||

ಅರ್ಥ:—ಸಂಪತ್ತಿವಂತನೂ, ವಾತ್ಸಲ್ಯ ( ಧರ್ಮಬಂಧುಗಳ ಬಗ್ಗೆ ಪ್ರೇಮ ), ಪ್ರಭಾವನೆ ( ಜೈನಧರ್ಮದ ಮಹತ್ವವನ್ನು ಬೆಳಿಸೋಣ ), ಕ್ಷಮೆ, ಸತ್ಯ, ಮಾರ್ದವ ಮುಂತಾದ ಗುಣಗಳಿಂದ ಯುಕ್ತನಾದವನೂ ದೇವ-ಗುರು-ಶಾಸ್ತ್ರಗಳಲ್ಲಿ ಭಕ್ತಿಯುಳ್ಳವನೂ ಆದ ಪುರುಷನು ಪ್ರತಿಷ್ಠೆಯನ್ನು ಮಾಡಲಿಕ್ಕೆ ಯೋಗ್ಯನಿರುತ್ತಾನೆ. ಹೀಗೆ ಶಾಸ್ತ್ರದಲ್ಲಿ ಹೇಳಿರುತ್ತದೆ.

## ಇಂದ್ರಲಕ್ಷಣ.

ದೇಸಕುಳಜಾಇಸುದ್ಧೋ ಣಿರೂವಮಾಂಗೋ ವಿಸುದ್ಧಸಮ್ಮತ್ತೋ ॥
ಪಢಮಾಣುಜೋಗಕುಸಳೋ ಪಇಠ್ಠಲಕ್ಖಣವಿಹಿವಿದಾಣೂ ॥ ೩೮೮ ॥
ಸಾವಯಗುಣೋವವೇದೋ ಉವಾಸಯಜ್ಝಯಣಸತ್ಥಥಿರವುದ್ಧೀ ॥
ಏವಂಗುಣೋ ಪಇಠ್ಠಾಇರಿಓ ಜಿಣಸಾಸಣೇ ಭಣಿಓ ॥ ೩೮೯ ॥

ದೇಶಕುಲಜಾತಿಶುದ್ಧೋ ನಿರುಪಮಾಂಗೋ ವಿಶುದ್ಧಸಮ್ಯಕ್ತ್ವ: ॥
ಪ್ರಥಮಾನುಯೋಗಕುಶಲಃ ಪ್ರತಿಷ್ಠಾಲಕ್ಷಣವಿಧಿವಿದ್ವಾನ್ ॥
ಶ್ರಾವಕಗುಣೋಪವೇತ ಉಪಾಸಕಾಧ್ಯಯನಶಾಸ್ತ್ರಸ್ಥಿರಬುದ್ಧಿಃ ॥
ಏವಂ ಗುಣಃ ಪ್ರತಿಷ್ಠಾಚಾರ್ಯೋ ಜಿನಶಾಸನೇ ಭಣಿತಃ ॥

ಅರ್ಥ:—ದೇಶ, ಕುಲ, ಜಾತಿ, ಆಚಾರ, ವಿಚಾರ ಮುಂತಾದವುಗಳಿಂದ ಶುದ್ಧನಿದ್ದವನೂ ಸುಂದರ ಶರೀರವುಳ್ಳವನೂ ಶುದ್ಧವಾದ ಸಮ್ಯಕ್ತ್ವವುಳ್ಳವನೂ ಪ್ರಥಮಾನುಯೋಗ ಶಾಸ್ತ್ರಬಲ್ಲವನೂ ಪ್ರತಿಷ್ಠೆನಿಯಮವನ್ನು ಬಲ್ಲವನೂ ಶ್ರಾವಕ ಗುಣಗಳಿಂದ ಯುಕ್ತನಾದವನೂ ಉಪಾಸಕಾಧ್ಯಯನ ಶಾಸ್ತ್ರವನ್ನು ತಿಳಿದಂಥವನೂ ಆದ ಪುರುಷನು ಪ್ರತಿಷ್ಠಾಚಾರ್ಯ ( ಇಂದ್ರ )ನಿರಬೇಕೆಂದು ಶಾಸ್ತ್ರದಲ್ಲಿ ಹೇಳಿರುತ್ತದೆ.

## ಪ್ರತಿಮಾಲಕ್ಷಣ.

ಮಣಿಕಣಯರುಪ್ಪಯಪಿತ್ತಲಮುತ್ತಾಹಲೋವಲಾಇಹಿಂ ॥
ಪಡಿಮಾಲಕ್ಖಣವಿಹಿಣಾ ಜಿಣಾಇಪಡಿಮಾ ಘಡಾವಿಜ್ಜಾ ॥ ೩೯೦ ॥

ಮಣಿಕಾಂಚನರೌಪ್ಯಪಿತ್ತಲಮುಕ್ತಾಫಲೋಪಲಾದಿಭಿ: ॥
ಪ್ರತಿಮಾಲಕ್ಷಣವಿಧಿನಾ ಜಿನಾದಿಪ್ರತಿಮಾ ಘಟಯಿತವ್ಯಾ ॥

ಅರ್ಥ:—ಮಣಿ ( ರತ್ನ ) ಬಂಗಾರ, ಬೆಳ್ಳಿ, ಹಿತ್ತಾಳಿ, ಮುತ್ತು ಪಾಷಾಣ ಮುಂತಾದವುಗಳಿಂದ ಪ್ರತಿಮೆಯ ಲಕ್ಷಣಾನುಸಾರವಾಗಿ ಜಿನಬಿಂಬಗಳನ್ನು ಮಾಡಿಸಬೇಕು.

# ಪ್ರತಿಷ್ಠಾಲಕ್ಷಣ.

ಬಾರಹಅಂಗಗೀ ಜಾ ದಂಸಣತಿಳಯಾ ಚರಿತ್ತವತ್ಥಹರಾ ॥
ಚೋದ್ದಹಪುವ್ವಾಹರಣಾ ಠಾವೇಯವ್ವಾ ಯ ಸುಯದೇವೀ ॥ ೩೯೧ ॥
ಅಹವಾ ಜಿಣಾಗಮಂ ಪುತ್ಥಏಸು ಸಮ್ಮಂ ಲಿಹಾವಿಊಣ ತಓ ॥
ಸುಹತಿಹಿಲಗ್ಗಮುಹುತ್ತೇ ಆರಂಭೋ ಹೋಇ ಕಾಯವ್ವೋ ॥ ೩೯೨ ॥

ದ್ವಾದಶಾಂಗಾಂಗೀ ಯಾ ದರ್ಶನತಿಲಕಾ ಚರಿತ್ರವಸ್ತ್ರಧರಾ ॥
ಚತುರ್ದಶಪೂರ್ವಾಭರಣಾ ಸ್ಥಾಪಯಿತವ್ಯಾ ಚ ಶ್ರುತದೇವೀ ॥
ಅಥವಾ ಜಿನಾಗಮಂ ಪುಸ್ತಕೇಷು ಸಮ್ಯಗ್ಲಿಖಾಪ್ಯ ತತಃ ॥
ಶುಭತಿಥಿಲಗ್ನಮುಹೂರ್ತೇ ಆರಂಭೋ ಭವತಿ ಕರ್ತವ್ಯಃ ॥

ಅರ್ಥ:—ದ್ವಾದಶಾಂಗ ಶಾಸ್ತ್ರವು ಅಂಗವಾಗಿಯೂ ಸಮ್ಯಗ್ದರ್ಶನವು ತಿಲಕವಾಗಿಯೂ ಸಮ್ಯಕ್‌ಚ್ಚಾರಿತ್ರವು ವಸ್ತ್ರವಾಗಿಯೂ ಹದಿನಾಲ್ಕುಪೂರ್ವಶಾಸ್ತ್ರವು ಅಲಂಕಾರವಾಗಿಯೂ ಇರುವಂಥ ಶ್ರುತದೇವಿಯ ಪ್ರತಿಮೆಯನ್ನು ಸ್ಥಾಪನೆ ಮಾಡಬೇಕು. ಅಥವಾ ಜಿನಾಗಮವನ್ನು ಬರೆಯಿಸಬೇಕು. ತರುವಾಯ ಶುಭಮುಹೂರ್ತದಲ್ಲಿ ಪ್ರತಿಷ್ಠೆಯನ್ನು ಆರಂಭಮಾಡಬೇಕು.

ಅಠ್ಠದಸಹತ್ಥಮೆತ್ತಂ ಭೂಮಿಂ ಸಂಸೋಹಿಊಣ ಜಇಣಾಣ ॥
ತಸ್ಸುವರಿ ಮಂಡಓ ಪುಣ ಕಾಯವ್ವೋ ತಪ್ಪಮಾಣೇಣ ॥ ೩೯೩ ॥

ಅಷ್ಟಾದಶಹಸ್ತಮಾತ್ರಾಂ ಭೂಮಿಂ ಸಂಶೋಧ್ಯ ಯತ್ನೇನ ॥
ತಸ್ಯಾ ಉಪರಿ ಮಂಡಪಃ ಪುನಃ ಕರ್ತವ್ಯಸ್ತತ್ಪ್ರಮಾಣೇನ ॥

ಅರ್ಥ:—ಹದಿನೆಂಟು ಮೊಳ ಪ್ರಮಾಣದ ಭೂಮಿಯನ್ನು ಚನ್ನಾಗಿ ಶುದ್ಧಮಾಡಿ, ಆದರ ಮೇಲೆ ಅಷ್ಟೇ ಪ್ರಮಾಣದ ಮಂಟಪವನ್ನು ನಿಲ್ಲಿಸಬೇಕು.

ಚಉತೋರಣಚಉದಾರೋವಸೋಹಿಓ ವಿವಿಹವತ್ಥಕಯಭೂಸೋ ॥
ಧೂಯಂತಧಯವಡಾಓ ಣಾಣಾಪುಪ್ಫೋವಹಾರಡ್ಢೋ ॥ ೩೯೪ ॥

ಚತುಸ್ತೋರಣಚತುರ್ದ್ವಾರೋಪಶೋಭಿತೋ ವಿವಿಧವಸ್ತ್ರಕೃತಭೂಷಃ ॥
ಧೂಯಮಾನಧ್ವಜಪತಾಕೋ ನಾನಾಪುಷ್ಪೋಪಹಾರಾಢ್ಯಃ ॥

ಅರ್ಥ:—ಆ ಮಂಟಪದ ನಾಲ್ಕೂ ದಿಕ್ಕುಗಳಿಗೆ ಕಮಾನವುಳ್ಳ ನಾಲ್ಕು ದ್ವಾರ (ಬಾಗಿಲ)ಗಳನ್ನು ಮಾಡಿ, ಗಾಳಿಗೆ ಅಲ್ಲಾಡುವಂಥ ನಾನಾಪ್ರಕಾರದ ಧ್ವಜಪತಾಕೆಗಳಿಂದಲೂ ನಾನಾಪ್ರಕಾರದ ಪುಷ್ಪಗಳಿಂದಲೂ ಆ ಮಂಟಪವನ್ನು ಅಲಂಕರಿಸಬೇಕು.

ಲಂಬಂತಕುಸುಮದಾಮೋ ವಂದಣವಾಲಾಹಿಭೂಸಿಯದುವಾರೋ ॥
ದಾರುವರಿ ಉಭಯಕೋಣೇಸು ಪುಣ್ಣಕಳಸೇಹಿ ರಮಣೀಓ ॥ ೩೯೫ ॥

ಲಂಬಮಾನಕುಸುಮದಾಮಾ ವಂದನಮಾಲಾಭಿಭೂಷಿತದ್ವಾರಃ ॥
ದ್ವಾರೋಪರಿ ಉಭಯಕೋಣಯೋಃ ಪೂರ್ಣಕಲಶೈ ರಮಣೀಯಃ ॥

ಅರ್ಥ:—ಮತ್ತು ಆ ಮಂಟಪದಲ್ಲಿ ಅಲ್ಲಲ್ಲಿಗೆ ಹೂವಿನ ಮಾಲೆಗಳನ್ನು ತೂಗಹಾಕಬೇಕು. ವಂದನ ಮಾಲೆಗಳಿಂದ ಅದರ ದ್ವಾರಗಳನ್ನು ಶೃಂಗರಿಸಬೇಕು. ಆ ಬಾಗಿಲುಗಳ ಮೇಲ್ಭಾಗದ ಮೂಲೆಗಳೆರಡರಲ್ಲಿ ನೀರು ತುಂಬಿದ ಕಲಶಗಳನ್ನು ಇಡಬೇಕು.

ತಸ್ಸ ವಹುಮಜ್ಝದೇಸೇ ಪಇಠ್ಠಸತ್ಥಮ್ಮಿ ಉತ್ತಮಾಣೇಣ ॥
ಸಮಚಉರಸ್ಸಂ ಪೀಢಂ ಸವ್ವತ್ಥ ಸಮಂ ಚ ಕಾಊಣ ॥ ೩೯೬ ॥

ತಸ್ಯ ಬಹುಮಧ್ಯದೇಶೇ ಪ್ರತಿಷ್ಠಾಶಾಸ್ತ್ರೇ ಉಕ್ತಮಾನೇನ ॥
ಸಮಚತುರಸ್ರಂ ಪೀಠಂ ಸರ್ವತ್ರ ಸಮಂ ಚ ಕೃತ್ವಾ ॥

ಅರ್ಥ:—ಆ ಮಂಟಪದ ಮಧ್ಯ ಪ್ರದೇಶದಲ್ಲಿ ಪ್ರತಿಷ್ಠಾಶಾಸ್ತ್ರದಲ್ಲಿ ಹೇಳಿದ ಪ್ರಮಾಣದಂತೆ ಎಲ್ಲ ಕಡೆಯಿಂದ ಸರಿಯಾದಂಥ ಚತುರಾಕಾರದ ಪೀಠವನ್ನು ಮಾಡಬೇಕು.

ಚಉಸು ವಿ ದಿಸಾಸು ತೋರಣವಾಲೋವವೇದವಾರಾಣಿ ॥
ಛತ್ತಾವತ್ತಾಣಿ ತಹಾ ದಿಠ್ಠಾಣಿ ರಇಊಣ ಕೋಣೇಸು ॥ ೩೯೭ ॥

ಚತುಷ್ಷ್ವಪಿ ದಿಶಾಸು ತೋರಣಮಾಲೋಪೇತದ್ವಾರಾಣಿ ॥
ಛತ್ರಾವರ್ತಾನಿ ತಥಾ ದೃಶ್ಯಾನಿ ರಚಯಿತ್ವಾ ಕೋಣೇಷು ॥

ಅರ್ಥ:—ಆ ಪೀಠದ ನಾಲ್ಕೂ ದಿಕ್ಕುಗಳಿಗೆ ಕಮಾನಗಳಿಂದಲೂ ವಂದನ ಮಾಲೆಯಿಂದಲೂ ಯುಕ್ತವಾಗಿರುವ ನಾಲ್ಕು ಬಾಗಿಲಗಳಿರಬೇಕು. ಅದರ ಮೇಲಿನ ನಾಲ್ಕೂ ಮೂಲೆಗಳನ್ನು ಛತ್ರಾಕಾರವಾಗಿ ರಚಿಸಬೇಕು.

ಪಡಿವೇಣ ಣೇತ್ತಪಟ್ಟಾವರಹಿಂ ವತ್ಥೇಹಿ ವಹುವಿಹೇಹಿ ತಹಾ ॥
ಉಲ್ಲೋವಿಊಣ ಉವರಿಂ ಚಂದೋವಯಮಣಿವಿಹಾಹಿಂ ॥ ೩೯೮ ॥

ಪ್ರತಿವೇಷ್ಟ್ಯ ನೇತ್ರಪಟ್ಟಾಂಬರೈರ್ವಸ್ತ್ರೈರ್ಬಹುವಿಧೈಸ್ತಥಾ ॥
ಉಲ್ಲಂಬಯಿತ್ವೋಪರಿ ಚಂದ್ರೋಪಕಂ ಮಣಿವಿಭಾಭಿಃ ॥

ಅರ್ಥ:—ನೋಟಕ್ಕೆ ಸುಂದರವಾದಂಥ ರೇಶಿಮೆ ವಸ್ತ್ರಗಳಿಂದ ಆ ಪೀಠವನ್ನು ಮುಚ್ಚಿ ಅದರ ಮೇಲ್ಭಾಗವನ್ನು ರತ್ನ ಜಡಿತ ಚಂದ್ರೋಪಕ (ಛತ್ರ)ದಿಂದ ಅಲಂಕರಿಸಬೇಕು.

ಸಂಭೂಷಿಊಣ ಚಂದಉವಪಣ ವರೇಹಿಂ ಸರಲೇಹಿಂ ||
ಮುತ್ತಾದಾಮೇಹಿಂ ತಹಾ ಕಿಂಕಿಣಿಜಾಲೇಹಿಂ ವಿವಿಹೇಹಿಂ || ೩೯೯ ||

ಸಂಭೂಷಯಿತ್ವಾ ಚಂದ್ರೋಪಕೇನ ವರೈಃ ಸರಲೈಃ ||
ಮುಕ್ತಾದಾಮಭಿಸ್ತಥಾ ಕಿಂಕಿಣೀಜಾಲೈರ್ವಿವಿಧೈಃ ||

ಅರ್ಥ:—ಚಂದ್ರೋಪಕದಿಂದಲೂ ಉತ್ತಮ ಮತ್ತು ಸರಳವಾದ ಮುತ್ತಿನ ಮಾಲೆಗಳಿಂದಲೂ ಕಿಂಕಿಣಿ ಅಂದರೆ ಸಣ್ಣ ಗಂಟೆಗಳಿಂದಲೂ ಆ ಪೀಠದ ಮೇಲ್ಭಾಗ ಮಂಟಪವನ್ನು ಸುಶೋಭಿತ ಮಾಡಬೇಕು.

ಛತ್ತೇಹಿ ಯ ಚಮರೇಹಿ ಯ ದಪ್ಪಣಭಿಂಗಾರತಾಲವಟ್ಟೇಹಿಂ ||
ಕಲಸೇಹಿ ಪುಪ್ಫವಡಿಲಿಯ ಸುವಇಠ್ಠಯದೀವಣಿವಹೇಹಿಂ || ೪೦೦ ||

ಛತ್ರೈಶ್ಚ ಚಾಮರೈಶ್ಚ ದರ್ಪಣಭೃಂಗಾರತಾಲವೃಂತೈಃ ||
ಕಲಶೈಃ ಪುಷ್ಪಪ್ರತಿವೃತೈಃ ಸುಪ್ರತಿಷ್ಠಕದೀಪನಿವಹೈಃ ||

ಅರ್ಥ:—ಛತ್ರ, ಚಾಮರ, ದರ್ಪಣ, ಭೃಂಗಾರ (ಜಾಗಟೆ) ತಾಲವೃಂತ (ಪಂಖೆ) ಪುಷ್ಪಮಾಲಾವೃತ ಕಲಶ, ಸುಪ್ರತಿಷ್ಠಕ (ಸ್ವಸ್ತಿಕ) ದೀಪ ಮೊದಲಾದ ಮಂಗಲ ದ್ರವ್ಯಗಳನ್ನಿಡಬೇಕು.

ಏವಂ ರಯಣಂ ಕಾಊಣ ತಓ ಅಬ್ಭಂತರಮ್ಮಿ ರಇಊಣ ||
ವಿವಿಹೇಹಿಂ ವಹುಭಂಡೇಹಿಂ ವೇಈಯಾಚಉಸು ಕೋಣೇಸು ||೪೦೧||

ಏವಂ ರಚನಾಂ ಕೃತ್ವಾ ತತೋಽಭ್ಯಂತರೇ ರಚಯಿತ್ವಾ ||
ವಿವಿಧೈರ್ಬಹುಭಾಂಡೈರ್ವೇದಿಕಾಯಾಶ್ಚತುರ್ಷು ಕೋಣೇಷು ||

ಅರ್ಥ:—ಮೇಲೆ ಹೇಳಿದ ಪ್ರಕಾರ ಪೀಠವನ್ನು ರಚಿಸಿ ಅದರೊಳಗೆ ನಾನಾ ಪ್ರಕಾರದ ಮಣ್ಣಿನ ಪಾತ್ರೆಗಳನ್ನು ನಾಲ್ಕೂ ದಿಕ್ಕುಗಳಲ್ಲಿಡಬೇಕು.

ಇಂದೋ ತಹ ದಾಯಾರೋ ಪಾಸುಯಸಲಿಳೇಣ ಧಾರಣಾದಿಣ್ಹೇ ||
ಪಕ್ಖಾಳಿಊಣ ದೇಹಂ ಪಚ್ಛಾ ಭೋತ್ತೂಣ ಮಹುರಣ್ಣಂ || ೪೦೨ ||

ಇಂದ್ರಸ್ತಥಾ ದಾತಾ ಪ್ರಾಸುಕಸಲಿಲೇನ ಧಾರಣಾದಿವಸೇ ||
ಪ್ರಕ್ಷಾಲ್ಯ ದೇಹಂ ಪಶ್ಚಾದ್‌ಭುಕ್ತ್ವಾ ಮಧುರಾನ್ನಮ್ ||

ಅರ್ಥ:—ಇಂದ್ರ (ಪ್ರತಿಷ್ಠಾಚಾರ್ಯ) ಮತ್ತು ದಾನವಂತ (ಪ್ರತಿಷ್ಠೆಯನ್ನು ಮಾಡಿಸುವವನು) ಇವರಿಬ್ಬರೂ ಉಪವಾಸದ ಮೊದಲನೆಯ ದಿವಸದಲ್ಲಿ ಪ್ರಾಸುಕ ಜಲದಿಂದ ಸ್ನಾನಮಾಡಿ, ನಂತರಮಧುರ ಅನ್ನವನ್ನು ಊಟಮಾಡಿ,

ಉವವಾಸಂ ಪುಣ ಪೋಸಹ ವಿಹಿಣಾ ಗಹಿಊಣ ಗುರುಸಯಾಸಮ್ಮಿ ॥
ಣವಧವಳವತ್ಥಭೂಸೋ ಸಿರಿಖಂಡವಿಲಿತ್ತಸವ್ವಂಗೋ ॥ ೪೦೩ ॥

ಉಪವಾಸಂ ಪುನಃ ಪ್ರೋಷಧಂ ವಿಧಿನಾ ಗೃಹೀತ್ವಾ ಗುರುಸಮೀಪೇ ॥
ನವಧವಲವಸ್ತ್ರಭೂಷ: ಶ್ರೀಖಂಡವಿಲಿಪ್ತಸರ್ವಾಂಗಃ ॥

ಅರ್ಥಃ—ಶುಭ್ರವಾದ ಹೊಸ ವಸ್ತ್ರಗಳನ್ನು ಹೊದ್ದುಕೊಂಡು, ಸರ್ವಾಂಗಕ್ಕೆ ಗಂಧದ ಲೇಪವನ್ನು ಮಾಡಿ, ಗುರುಗಳ ಹತ್ತಿರ ಪ್ರೋಷಧೋಪವಾಸದ ನಿಯಮವನ್ನು ವಿಧಿಪೂರ್ವಕವಾಗಿ ತಕ್ಕೊಂಡು,

ಆಹರಣವಾಸಿಯಾಹಿ ಭೂಸಿಯಯಂಗೋ ಸಯವುದ್ಧೀಏ ॥
ಸಕ್ಕೋ ಹಮುವಿಯಪ್ಪಿವಿಹಿಂ ವಿಸೇಜ್ಜ ಜಗ್ಗಾವಣಿಂ ಇಂದೋ ॥ ೪೦೪ ॥

ಆಭರಣವಸ್ತ್ರಾದಿಭಿರ್ಭೂಷಿತಾಂಗ: ಸ್ವಬುದ್ಧ್ಯಾ ॥
ಶಕ್ರೋಹಂ ವಿಕಲ್ಪೈರ್ವಿಶೇತ್ ಯಜ್ಞಾವನಿಮಿಂದ್ರ: ॥

ಅರ್ಥಃ—ಅಲಂಕಾರ, ವಸ್ತ್ರ, ಸುಗಂಧ ಮುಂತಾದವುಗಳಿಂದ ಭೂಷಿತನಾಗಿ, ಇಂದ್ರನಿದ್ದೇನೆಂದು ಮನಸ್ಸಿನಲ್ಲಿ ಕಲ್ಪಿಸಿ, ಯಜ್ಞಭೂಮಿಯ ಮೇಲೆ ಪ್ರತಿಷ್ಠಾಚಾರ್ಯನು ಪ್ರವೇಶ ಮಾಡಬೇಕು.

ಪುವ್ವುತ್ತವೇಇಮಜ್ಝೇ ಲಿಹಜ್ಜ ಚುಣ್ಣೇಣ ಪಂಚವಣ್ಣೇಣ ॥
ಪಿಹುಕಣ್ಣಿಯಂ ಪಇಟ್ಠಾಕಳಾವವಿಹಿಣಾ ಸುಕಂದುತ್ಥಂ (?) ॥ ೪೦೫ ॥

ಪೂರ್ವೋಕ್ತವೇದೀಮಧ್ಯೇ ಲಿಖೇಚ್ಚೂರ್ಣೇನ ಪಂಚವರ್ಣೇನ ॥
ಪೃಥುಕರ್ಣಿಕಂ ಪ್ರತಿಷ್ಠಾಕಲಾವಿಧಿನಾ ಸುಕರ್ದಮಜಮ್ ॥

ಅರ್ಥ:—ಪ್ರತಿಷ್ಠಾಶಾಸ್ತ್ರಕ್ಕನುಸರಿಸಿ ಪಂಚವರ್ಣದ ರತ್ನಚೂರ್ಣಗಳಿಂದ ಮೇಲೆ ಹೇಳಿದ ಪೀಠದ ಮೇಲೆ ದೊಡ್ಡಕರ್ಣಿಕೆಯುಳ್ಳ ಕಮಲವು ರಚಿಸಲ್ಪಡಬೇಕು.

ರಂಗಾವಳಿಂ ಚ ಮಜ್ಝೇ ಠವಿಜ್ಜ ಸಿಯವತ್ಥಪರಿವುಡಂ ಪೀಠಂ ॥
ಉಚ್ಚದೇಸೇಸು ತಹ ಪಇಠ್ಠೋವಯರಣದವ್ವಂ ಚ ಠಾಣೇಸು ॥ ೪೦೬ ॥

ರಂಗಾವಲಿಂ ಚ ಮಧ್ಯೇ ಸ್ಥಾಪಯೇತ್ ಸಿತವಸ್ತ್ರಪರಿವೃತಂ ಪೀಠಮ್ ॥
ಉಚ್ಚದೇಶೇಷು ತಥಾ ಪ್ರತಿಷ್ಠೋಪಕರಣದ್ರವ್ಯಂ ಚ ಸ್ಥಾನೇಷು ॥

ಅರ್ಥ:—ಸುತ್ತಲೂ ರಂಗೋಲಿಯನ್ನು ಹಾಕಿ ಮಧ್ಯಭಾಗದಲ್ಲಿ ಬಿಳಿವಸ್ತ್ರದಿಂದ ಆವರಿಸಿದ ಪೀಠವನ್ನು ಸ್ಥಾಪಿಸಬೇಕು. ಪ್ರತಿಷ್ಠೆಗೆ ಬೇಕಾದ ಸಾಮಗ್ರಿಗಳನ್ನು ಎತ್ತರವಾದ ಸ್ಥಳದಲ್ಲಿಡಬೇಕು.

ಏವಂ ಕಾಊಣ ತಹಿ ಇಸಾಣದಿಸಾಏ ವೇಇಏ ದಿವ್ವಂ ॥
ರಇಊಣ ಣ್ಹವಣಪೀಠಂ ತಸ್ಸ ಯ ಮಜ್ಝಮ್ಮಿ ಠಾವೇಜ್ಜೋ ॥ ೪೦೭ ॥

ಏವಂ ಕೃತ್ವಾ ತತ ಈಶಾನ್ಯದಿಶಾಯಾಂ ವೇದಿಕಾಂ ದಿವ್ಯಾಮ್ ॥
ರಚಯಿತ್ವಾ ಸ್ನಪನಪೀಠಂ ತಸ್ಯಾಶ್ಚ ಮಧ್ಯೇ ಸ್ಥಾಪಯೇತ್ ॥

ಅರ್ಥಃ—ಈ ಪ್ರಕಾರ ರಚಿಸಿ ಅದರ ಈಶಾನ್ಯದಿಕ್ಕಿಗೆ ಒಂದು ಸುಂದರವಾದ ವೇದಿಕೆಯನ್ನು ತಯಾರಮಾಡಿ ಅದರ ಮೇಲೆ ಸ್ನಾನದ ಪೀಠವನ್ನು ಮಾಡಬೇಕು.

ಅರುಹಾಈಣಂ ಪಡಿಮಂ ವಿಹಿಣಾ ಸಂಠಾವಿಊಣ ತಸ್ಸುವರಿಂ ॥
ಧೂಳೀಕಳಸಾಹಿಸೇಯಂ ಕರಾವಿಯೋ ಸುತ್ತಹಾರೇಣ ॥ ೪೦೮ ॥

ಅರ್ಹದಾದೀನಾಂ ಪ್ರತಿಮಾಂ ವಿಧಿನಾ ಸಂಸ್ಥಾಪ್ಯ ತಸ್ಯೋಪರಿ ॥
ಧೂಲೀಕಲಶಾಭಿಷೇಕಂ ಕಾರಾಪಯೇತ್ಸೂತ್ರಧಾರೇಣ ॥

ಅರ್ಥ:—ಆ ಸ್ನಾನಪೀಠದ ಮೇಲೆ ಅರಹಂತ ಮುಂತಾದವರ ಪ್ರತಿಮೆಗಳನ್ನು ಕೂಡ್ರಿಸಿ, ಆ ಪ್ರತಿಮೆಗಳಿಗೆ ಕೌಶಲ್ಯಗಾರರಿಂದ ಧೂಲೀಕಲಶದ ಅಭಿಷೇಕವನು ಮಾಡಿಸಬೇಕು. ( ತೀರ್ಥಕ್ಷೇತ್ರದ ಮಣ್ಣು, ಗಿಡದ ತೋಟೆಯ ಚೂರ್ಣ ಮುಂತಾದವುಗಳಿಂದ ತುಂಬಿದ ಕಲಶಕ್ಕೆ ಧೂಲೀಕಲಶವೆನ್ನುತ್ತಾರೆ. )

ವತ್ಥಾದಿಯಸಮ್ಮಾಣಂ ಕಾಯವ್ವಂ ಹೋದಿ ತಸ್ಸ ಸತ್ತೀಏ ॥
ಪೇಖಣಣವಿಹಿಂ ಜ ಮಂಗಲವಯಣಂ ಕುಜ್ಜಾ ತಹಿ ಕಮಸೋ ೪೦೯

ವಸ್ತ್ರಾದಿಕಸನ್ಮಾನಃ ಕರ್ತವ್ಯೋ ಭವತಿ ತಸ್ಯ ಶಕ್ತ್ಯಾ ॥
ಪ್ರೇಷಣವಿಧಿಂ ಚ ಮಂಗಲವಚನಂ ಕುರ್ಯಾತ್ತತಃ ಕ್ರಮಶ: ॥

ಅರ್ಥಃ—ಆ ಕೌಶಲ್ಯಗಾರನಿಗೆ ತನ್ನ ಶಕ್ತ್ಯಾನುಸಾರವಾಗಿ ವಸ್ತ್ರಾಲಂಕಾರಗಳನ್ನು ಕೊಟ್ಟು ಅವನ ಸನ್ಮಾನ ಮಾಡಬೇಕು. ಮತ್ತು ಮಂಗಲ ಶಬ್ದಗಳಿಂದ ಅವನ ಗೌರವ ಮಾಡಬೇಕು.

ತಪ್ಪಾಉಗ್ಗವಯರಣಂ ಅಪ್ಪಸಮೀವಂ ಣಿವೇಸಿಊಣ ತಹಿ ॥
ಅಗಾರಸುದ್ಧೀ ಕುಜ್ಜಾ ಪಇಠ್ಠಸತ್ಥುತ್ತಮಗ್ಗೇಣ ॥ ೪೧೦ ॥

ತತ್ಪ್ರಾಗುಕ್ತೋಪಕರಣಮಾತ್ಮಸಮೀಪಂ ನಿವೇಶ್ಯ ತತಃ ॥
ಆಗಾರಶುದ್ಧಿಂ ಕುರ್ಯಾತ್ಪ್ರತಿಷ್ಠಾಶಾಸ್ತ್ರೋಕ್ತಮಾರ್ಗೇಣ ॥

ಅರ್ಥ:—ಬಳಿಕ ಮೊದಲು ಹೇಳಿದಂತೆ ಅಂದರೆ ಎತ್ತರವಾದ ಸ್ಥಳದಲ್ಲಿಟ್ಟ ಪೂಜೆಯ ದ್ರವ್ಯಗಳನ್ನು ತನ್ನ ಹತ್ತರ ತಕ್ಕೊಂಡು ಪ್ರತಿಷ್ಠಾಶಾಸ್ತ್ರದಲ್ಲಿ ಹೇಳಿದ ಪ್ರಕಾರ ಮಂದಿರವನ್ನು ಶುದ್ಧಮಾಡಬೇಕು.

ಏವಂ ಕಾಊಣ ರವೋ ಖುಹಿಯಸಮುದ್ದೇಹಿ ಗಜ್ಜಮಾಣೇಹಿಂ ||
ವರಭೇರಿಕರಡಕಾಹಳಜಯಘಂಟಾಸಂಖಣಿವಹೇವಿಂ || ೪೧೧ ||

ಏವಂ ಕೃತ್ವಾ ರವಃ ಕ್ಷುಭಿತಸಮುದ್ರೈರ್ಗರ್ಜಮಾನೈಃ ||
ವರಭೇರಿಕರಡಕಾಹಲಜಯಘಂಟಾಶಂಖನಿವಹೈಃ ||

ಅರ್ಥ:—ವಿಮಾನಶುದ್ಧಿ ಮಾಡಿದ ಮೇಲೆ ಸಮುದ್ರದಂತೆ ಗರ್ಜನೆಯನ್ನು ಮಾಡುವ ನಗಾರಿ, ಕರಡಿ, ಕಾಳಿ, ಜಯಗಂಟೆ, ಶಂಖ ಮುಂತಾದ ವಾದ್ಯಗಳನ್ನು ಬಾರಿಸಬೇಕು.

ಗುಲಗುಲಂತೇಹಿ ತಿವಿಲೇಹಿಂ ಕಂಸತಾಲೇಹಿ ಝುಮಝುಮಂತೇಹಿಂ ||
ಘುಮಂತಪಡಹಮದ್ದಲಹೂಡಕಮುಕ್ಖೇಹಿ ವಿವಿಹೇಹಿಂ || ೪೧೨ ||

ಗುಲಗುಲದ್ಭಿಸ್ತಿಬಿಲೈಃ ಕಂಸತಾಲೈರ್ಝುಮಝುಮದ್ಭಿಃ ||
ಘುಮತ್ಪಟಹಮದ್ದಲಹೂಡಕಮುಖ್ಯೈರ್ವಿವಿಧೈಃ ||

ಅರ್ಥ:—ಗುಳ್ ಗುಳ್ ಶಬ್ದಮಾಡುವ ಮದ್ದಲಿ, ಝಣ್ ಝಣ್ ಶಬ್ದಮಾಡುವ ಕೈತಾಳ, ಪಟ್ ಪಟ್ ಶಬ್ದಮಾಡುವ ಪಟಹ, ಮೃದಂಗ ಡೋಲ ಮುಂತಾದವುಗಳನ್ನು ಬಾರಿಸಬೇಕು.

ಗಜ್ಜಂತೇಹಿಂ ಸಂಧಿಬಂಧಾ ಇಏಹಿಂ ಗಿಏಹಿ ವಹುಪಯಾರೇಹಿಂ ||
ವೀಣಾವಂಸೇಹಿ ತಹಾ ಆಣಯಸದ್ದೇಹಿಂ ರಮ್ಮೇಹಿಂ || ೪೧೩ ||

ಗರ್ಜದ್ಭಿಃ ಸಂಧಿಬಂಧಾದಿಕೈರ್ಗೀತೈರ್ಬಹುಪ್ರಕಾರೈಃ ||
ವೀಣಾವಂಶೈಸ್ತಥಾನಕಶಬ್ದೈಃ ರಮ್ಯೈಃ ||

ಅರ್ಥ:— ನಾನಾಪ್ರಕಾರದ ಸ್ವರವನ್ನುಂಟುಮಾಡುವ ವೀಣೆ, ತಂಬೂರಿ ಮುಂತಾದವುಗಳನ್ನೂ ಮತ್ತು ರಮ್ಯವಾದ ಡೋಲವನ್ನೂ ಬಾರಿಸಬೇಕು.

ವಹುಹಾವಭಾವವಿಭ್ಭಮವಿಳಾಸಕರಚರಣತಣುವಿಯಾರೇಹಿಂ ||
ಣಚ್ಚಂತು ಣವರಸೇಹಿ ಭಿಣ್ಣಣಾಡಏಹಿ ವಿವಿಹೇಹಿಂ || ೪೧೪ ||

ಬಹುಹಾವಭಾವವಿಭ್ರಮವಿಲಾಸಕರಚರಣತನುವಿಕಾರೈಃ ||
ನೃತ್ಯಂತು ನವರಸೈರ್ಭಿನ್ನನಾಟಕೈರ್ವಿವಿಧೈಃ

ಅರ್ಥ:—ಅನೇಕ ಪ್ರಕಾರದ ಹಾವಭಾವ, ವಿಭ್ರಮ, ವಿಲಾಸ, ಕರಚರಣ ತನುವಿಕಾರ ಮುಂತಾದವುಗಳ ಯೋಗದಿಂದ ನವರಸಯುಕ್ತವಾದ ನೃತ್ಯವನ್ನು ಮಾಡಬೇಕು. ಮತ್ತು ನಾನಾಪ್ರಕಾರದ ನಾಟಕಗಳನ್ನು ಆಡಬೇಕು.

ಥೋತೇಹಿ ಮಂಗಳೇಹಿ ಯ ಉಚ್ಚಾರಸಏಹಿ ಮಹುರವಯಣಸ್ಸ ||
ಧಮ್ಮಾಣುರಾಯರತ್ತಸ್ಸ ಚಾಉವಣ್ಣಸ್ಸ ಸಂಘಸ್ಸ || ೪೧೫ ||

ಭತ್ತೀಯೇ ಪಿಚ್ಛಮಾಣಸ್ಸ ತಓ ಉಚ್ಚಾಇಊಣ ಜಿಣಪಡಿಮಂ ||
ಓಸಿಯಸಿಯಾಯವತ್ತಂ ಸಿಯಚಾಮರಧೂಯಮಾಣಸವ್ವಂಗೋ||೪೧೬
ಆರೋವಿಊಣ ಸೀಸೇ ಕಾಊಣ ಪಯಹಿಣಂ ಜಿಣಗೇಹಸ್ಸ ||
ವಿಹಿಣಾ ಠವಿಜ್ಜ ಪುವ್ವುತ್ತವೇಇಮಜ್ಝಪೀಠಮ್ಮಿ || ೪೧೭ ||

ಸ್ತೋತ್ರೈರ್ಮಂಗಲೈಶ್ಚೋಚ್ಚಾರಶತೈರ್ಮಧುರವಚನಸ್ಯ ||
ಧರ್ಮಾನುರಾಗರಕ್ತಸ್ಯ ಚತುರ್ವರ್ಣಸಂಘಸ್ಯ ||
ಭಕ್ತ್ಯಾ ಪ್ರೇಕ್ಷಮಾಣಸ್ಯ ತತ ಉತ್ತಿಷ್ಠಾಪ್ಯ ಜಿನಪ್ರತಿಮಾಮ್ ||
ಪ್ರಸಾರಿತಸಿತಾತಪತ್ರಾಂ ಸಿತಚಾಮರಧೂಯಮಾನಸರ್ವಾಂಗಾಮ್ ||
ಆರೋಪ್ಯ ಶಿರಸಿ ಕೃತ್ವಾ ಪ್ರದಕ್ಷಿಣಂ ಜಿನಗೇಹಸ್ಯ ||
ವಿಧಿನಾ ಸ್ಥಾಪಯೇತ್ಪೂರ್ವೋಕ್ತವೇದೀಮಧ್ಯಪೀಠೇ ||

ಅರ್ಥ:—ಧರ್ಮದ ಪ್ರೀತಿಯುಬಗ್ಗೆ ಅನುರಕ್ತರಾದ " ಋಷಿ-ಆರ್ಯಿಕಾ, ಶ್ರಾವಕ ಶ್ರಾವಿಕಾ "ರೂಪ ಚತು:ಸಂಗ ಮುಂತಾದವರನ್ನು ಮಂಗಲಕಾರಕ ಸ್ತೋತ್ರಗಳಿಂದಲೂ ನೂರಾರು ಮಧುರವಾದ ವಚನಗಳಿಂದಲೂ ಭಕ್ತಿಯಿಂದಲೂ ಹೊಗಳುವಾಗ್ಗೆ ಯಾವನ ಮೇಲೆ ಶ್ವೇತಛತ್ರವು ಪಸರಿಸಲ್ಪಟ್ಟಿದೆಯೋ, ಚಾಮರವು ಬೀಸಲ್ಪಡುತ್ತದೆಯೋ, ಅಂಥ ಜಿನಪ್ರತಿಮೆಯನ್ನು ನೆಗವಿ ಮಸ್ತಕದ ಮೇಲಿಟ್ಟುಕೊಂಡು, ಜಿನಮಂದಿರಕ್ಕೆ ಮೂರು ಪ್ರದಕ್ಷಣೆಯನ್ನು ಮಾಡಿ, ಪುನಃ ಪೂರ್ವದ ವೇದಿಯ ಮಧ್ಯಪೀಠದಲ್ಲಿ ಸ್ಥಾಪಿಸಬೇಕು.

ಚಿಠ್ಠೇಜ್ಜ ಜಿಣಗುಣರೋವಣಂ ಕುಣಂತೋ ಜಿಣಂದಪಡಿಬಿಂಬೇ ||
ಇಠ್ಠೇ ಲಗ್ಗಸ್ಸುದಏ ಚಂದಣತಿಳಯಂ ತಓ ದಿಜ್ಜಾ || ೪೧೮ ||

ತಿಷ್ಠೇಚ್ಚ ಜಿನಗುಣರೋಪಣಂ ಕುರ್ವನ್ ಜಿನೇಂದ್ರಪ್ರತಿಬಿಂಬೇ ||
ಇಷ್ಟೇ ಲಗ್ನಸ್ಯೋದಯೇ ಚಂದನತಿಲಕಂ ತತೋ ದದ್ಯಾತ್ ||

ಅರ್ಥ:—ಬಳಿಕ ಜಿನಬಿಂಬದ ಸ್ಥಳದಲ್ಲಿ ಜಿನಗುಣದ ಹೆಸರನ್ನಿಡುವ ಇಂದ್ರನು ಎದ್ದುನಿಂತು, ಶುಭಮುಹೂರ್ತದ ಮೇಲೆ ಆ ಪ್ರತಿಮೆಯ ಹಣೆಗೆ ಚಂದನದ ತಿಲಕವನ್ನು ಹಚ್ಚಬೇಕು.

ಸವ್ವಾವಯವೇಸು ಪುಣೋ ಮಂತರಣಾಸಂ ಕುಣಜ್ಜ ಪಡಿಮಾಏ ||
ವಿವಿಹಚ್ಚಣಂ ಚ ಕುಜ್ಜಾ ಕುಸುಮೇಹಿಂ ವಹುಪಯಾರೇಹಿಂ ||೪೧೯||

ಸರ್ವಾವಯವೇಷು ಪುನರ್ಮಂತ್ರನ್ಯಾಸಂ ಕುರ್ಯಾತ್ಪ್ರತಿಮಾಯಾಃ ||
ವಿವಿಧಾರ್ಚನಂ ಚ ಕುರ್ಯಾತ್ಕುಸುಮೈರ್ಬಹುಪ್ರಕಾರೈಃ ||

ಅರ್ಥ:—ಆಮೇಲೆ ಪುನಃ ಜಿನಬಿಂಬದ ಎಲ್ಲ ಅವಯುವಗಳ ಮೇಲೆ

ಮಂತ್ರವನ್ನು ಬರೆಯಬೇಕು. ಮತ್ತು ತರತರದ ಪುಷ್ಪಗಳಿಂದ ನಾನಾಪ್ರಕಾರದ ಪೂಜೆಯನ್ನು ಮಾಡಬೇಕು.

ದಾಊಣ ಮುಹಪಡಂ ಧವಳವತ್ಥಜುಯಳೇಣ ಮಯಣಫಲಸಹಿಯಂ॥
ಅಕ್ಖಯಚರುದೀವಾಇಧೂವೇಹಿಂ ಫಳೇಹಿಂ ವಿವಿಹೇಹಿಂ ॥ ೪೨೦ ॥
ವಲಿವತ್ತಿಏಹಿಂ ಜುವಾರೇಹಿ ಯ ಸಿದ್ಧತ್ಥಪಣ್ಣರುಕ್ಖೇಹಿಂ ॥
ಪುವ್ವುತ್ತುವಯರಣೇಹಿ ಯ ರಇಜ್ಜ ಪುಜ್ಜಂ ಸವಿಹವೇಣ ॥ ೪೨೧ ॥

ದತ್ವಾ ಮುಖಪಟಂ ಧವಲವಸ್ತ್ರಯುಗಲೇನ ಮದನಫಲಸಹಿತಮ್ ॥
ಅಕ್ಷತಚರುದೀಪಾದಿಧೂಪೈಃ ಫಲೈರ್ವಿವಿಧೈಃ ॥
ಬಲಿವತ್ತೈರ್ಯರ್ವಾರೈಶ್ಚ ಸಿದ್ಧಾರ್ಥಪರ್ಣವೃಕ್ಷೈಃ ॥
ಪೂರ್ವೋಕ್ತೋಪಕರಣೈಶ್ಚ ರಚಯೇತ್ಪೂಜಾಂ ಸ್ವವಿಭವೇನ ॥

ಅರ್ಥ:—ಅನಂತರ ಆ ಪ್ರತಿಮೆಯನ್ನು ಶುಭ್ರವಾದ ಜೋಡು ವಸ್ತ್ರದಿಂದ ಮುಚ್ಚಿ ಮದನಫಲ, ಅಕ್ಷತೆ, ಚರು, ದೀಪ, ಜಲ, ಗಂಧ, ಪುಷ್ಪ, ಧೂಪ, ನಾನಾಪ್ರಕಾರದ ಹಣ್ಣುಗಳು, ಬಲಿ, ಎಳ್ಳು, ಸಾಸಿವೆ, ಉಪಕರಣ ಮುಂತಾದವುಗಳಿಂದ ತನ್ನ ಶಕ್ತ್ಯಾನುಸಾರವಾಗಿ ಪೂಜೆಯನ್ನು ಮಾಡಬೇಕು.

ರತ್ತಿಂ ಜಗಿಜ್ಜ ಪುಣೋ ತಿಸಟ್ಠಿಸಲಾಯಪುರುಸಸುಕಹಾಹಿಂ ॥
ಸಂಘೇಣ ಸಯಂ ಪುಜ್ಜಂ ಪುಣೋ ವಿ ಕುಜ್ಜಾ ಪಹಾಯಮ್ಮಿ ॥ ೪೨೨ ॥

ರಾತ್ರೌ ಜಾಗೃಯಾತ್ಪುನಸ್ತ್ರಿಷಷ್ಟಿಶಲಾಕಾಪುರುಷಸುಕಥಾಭಿಃ ॥
ಸಂಘೇನ ಸಮಂ ಪೂಜಾಂ ಪುನರಪಿ ಕುರ್ಯಾತ್ಪ್ರಭಾತೇ ॥

ಅರ್ಥ:—ಅರವತ್ಮೂರು ಶಲಾಕಾಪುರುಷರ ಕಥೆಯನ್ನು ಕೇಳಿ ಆ ರಾತ್ರಿಯಲ್ಲಿ ಜಾಗರಣ ಮಾಡಬೇಕು. ಪುನಃ ಪ್ರಾತಃಕಾಲದಲ್ಲಿ ಚತುರ್ವಿಧ ಸಂಘಸಹ ಪೂಜೆಯನ್ನು ಮಾಡಬೇಕು.

ಏವಂ ಚತ್ತಾರಿ ದಿಣಾಣಿ ಜಾವ ಕುಜ್ಜಾ ತಿಸಂಝು ಜಿಣಪುಜ್ಜಂ ॥
ಣೇತುಮ್ಮೀಳಣಪುಜ್ಜಂ ಚಉತ್ಥಣ್ಹವಣಂ ತಓ ಕುಜ್ಜಾ ॥ ೪೨೩ ॥

ಏವಂ ಚತ್ವಾರಿ ದಿನಾನಿ ಯಾವತ್ಕುರ್ಯಾತ್ತ್ರಿಸಂಧ್ಯಂ ಜಿನಪೂಜಾಮ್ ॥
ನೇತ್ರೋನ್ಮೀಲನಪೂಜಾಂ ಚತುರ್ಥಸ್ನಪನಂ ತತಃ ಕುರ್ಯಾತ್ ॥

ಅರ್ಥ:— ಈಪ್ರಕಾರ ನಾಲ್ಕು ದಿವಸಗಳ ವರೆಗೆ ತ್ರೀಕಾಲ ಪೂಜೆಯನ್ನು ಮಾಡಬೇಕು. ನಾಲ್ಕನೆಯ ದಿವಸ ನೇತ್ರೋನ್ಮೀಲನ ಕ್ರಿಯೆಯನ್ನು ಮಾಡಿ, ಬಳಿಕ ಅಭಿಷೇಕ ಮಾಡಬೇಕು.

ಏಯಂ ಣ್ಹವಣಂ ಕಾಊಣ ಸತ್ಥಮಗ್ಗೇಣ ಸಂಘಮಜ್ಝಮ್ಮಿ ॥
ತೋ ವಖ್ಖಮಾಣವಿಹಿಣಾ ಜಿಣಪಯಪೂಯಾಇ ಕಾಯವ್ವಾ ॥ ೪೨೪॥

ಏವಂ ಸ್ನಪನಂ ಕೃತ್ವಾ ಶಾಸ್ತ್ರಮಾರ್ಗೇಣ ಸಂಘಮಧ್ಯೇ ॥
ತತೋ ವಕ್ಷ್ಯಮಾಣವಿಧಿನಾ ಜಿನಪದಪೂಜಾದಿ: ಕರ್ತವ್ಯಾ ॥

ಅರ್ಥ:—ಈ ಮೇರೆಗೆ ಶಾಸ್ತ್ರಮಾರ್ಗಕ್ಕನುಸರಿಸಿ ಸಂಘದಲ್ಲಿ ಜಿನಬಿಂಬಕ್ಕೆ ಅಭಿಷೇಕಮಾಡಿ ಅನಂತರ ಮುಂದೆ ಹೇಳಿದ ಪ್ರಕಾರ ಜಿನಪದದ ಪೂಜೆಯನ್ನು ಮಾಡಬೇಕು.

ಗೆಹಿಊಣ ಸಿಸಿರಕರಕಿರಣಣಿಯರಧವಲಂ ರಯಣಭಿಂಗಾರಂ ॥
ಮೊತ್ತಿಯಪವಾಳಮರಗಯಸುವಣ್ಣಮಣಿಖಚಿಯವರಕಂಠಂ ॥ ೪೨೫ ॥
ಸುಯವುತ್ತಕುಸುಮಕುವಳಯರಜಪಿಂಜರಸುರಹಿವಿಮಲಜಳಭರಿಯಂ ॥
ಜಿಣಚರಣಕಮಳಪುರಓ ಖಿವಿಜ್ಜಓ ತಿಣ್ಣಿ ಧಾರಾಓ ॥ ೪೨೬ ॥

ಗೃಹಿತ್ವಾ ಶಿಶಿರಕರಕಿರಣನಿಕರಧವಲಂ ರತ್ನಭೃಂಗಾರಮ್ ॥
ಮೌಕ್ತಿಕಪ್ರವಾಲಮರಕತಸುವರ್ಣಮಣಿಖಚಿತವರಕಂಠಮ್ ॥
ಶ್ರುತ್ಯುಕ್ತಕುಸುಮಕುವಲಯರಜಃ ಪಿಂಜರಸುರಭಿವಿಮಲಜಲಭರಿತಮ್ ॥
ಜಿನಚರಣಕಮಲಪುರತಃ ಕ್ಷಿಪೇತ್ತಿಸ್ರೋ ಧಾರಾ: ॥

ಅರ್ಥ:—ಚಂದ್ರಕಿರಣಗಳ ಸಮೂಹದಂತಿರುವ ಶುಭ್ರವಾದ ಮತ್ತು ಮುತ್ತು, ಮಾಣಿಕ, ಪಚ್ಚೆ, ಸುವರ್ಣ ಮುಂತಾದವುಗಳು ಜಡಿಯಲ್ಪಟ್ಟ ಕೊರಳಿನ ರತ್ನದ ಝಾರಿಯಲ್ಲಿ ಶಾಸ್ತ್ರದಲ್ಲಿ ಹೇಳಿದ ಪ್ರಕಾರ ಹೂವಿನ ಮತ್ತು ಕಮಲದ ಪರಾಗದಿಂದ ಸುಗಂಧವಾದ ನೀರು ತುಂಬಿ, ಅದನ್ನು ಕೈಯಲ್ಲಿ ತಕ್ಕೊಂಡು, ಶ್ರೀಜಿನಪತಿಯ ಚರಣಗಳಮುಂದೆ ಮೂರು ಧಾರೆಯನ್ನು ಬಿಡಬೇಕು.

ಕಪ್ಪೂರಕಂಕುಮಾಯರುತರುಕ್ಕಮಿಸ್ಸೇಣ ಚಂದಣರಸೇಣ ॥
ವರಬಹಲಪರಿಮಲಾಮೋಯವಾಸಿಯಾಸಾಸಮೂಹೇಣ ॥ ೪೨೭ ॥
ವಾಸಾಣುಯಗ್ಗಸಂಪತ್ತಮಯಮತ್ತಾಳಿರಾವಮುಹರೇಣ ॥
ಸುರಮಉಡಘಟ್ಟಚರಣಂ ಭತ್ತಿಏ ಸಮಲಹಿಜ್ಜ ಜಿಣಂ ॥ ೪೨೮ ॥

ಕರ್ಪೂರ ಕುಂಕುಮಾಗರುತರುಷ್ಕಮಿಶ್ರೇಣ ಚಂದನರಸೇನ ॥
ವರಬಹಲಪರಿಮಲಾಮೋದವಾಸಿತಾಶಾಸಮೂಹೇನ ॥
ವಾಸಾನುಮಾರ್ಗಸಂಪ್ರಾಪ್ತಮದಮತ್ತಾಲಿರಾವಮುಖರೇಣ ॥
ಸುರಮುಕುಟಘೃಷ್ಟಚರಣಂ ಭಕ್ತ್ಯಾ ಸಮಾಲಭೇತ ಜಿನಮ್ ॥

ಅರ್ಥ:—ಕರ್ಪೂರ, ಕುಂಕುಮ, ಅಗರು, ತರುಷ್ಕ ( ಊದ ) ಮುಂತಾದ

ಸುಗಂಧದ ದ್ರವ್ಯಗಳು ಯಾವದರಲ್ಲಿ ಕೂಡಿರುತ್ತವೆಯೋ, ಪರಿಮಳದ ದರ್ಪದಿಂದ ಎಲ್ಲ ದಿಕ್ಕುಗಳು ಸುವಾಸಿತ ಆಗಿರುತ್ತವೆಯೋ, ಆ ವಾಸನೆಯಗೋಸ್ಕರ ಭ್ರಮರಗಳು ಝುಂಕಾರ ಮಾಡುತ್ತವೆಯೋ, ಇಂಥ ಗಂಧದಿಂದ ದೇವೇಂದ್ರನು ತನ್ನ ಮಸ್ತಕವನ್ನು ಹಚ್ಚುವ ಜಿನೇಶನ ಪಾದಗಳಿಗೆ ಸ್ಪರ್ಶಮಾಡಬೇಕು. ಅಂದರೆ ಗಂಧಾರ್ಚನ ಮಾಡಬೇಕು.

ಸಸಿಕಂತಖಂಡವಿಮಲೇಹಿಂ ವಿಮಲಜಲಸಿತಘೌಇಸುಯಂಧೇಹಿಂ ॥
ಜಿಣಪಡಿಮಪಇತ್ಥಯಜ್ಜಿಯವಿಸುದ್ಧಪುಣ್ಣಂಕುರೇಹಿಂ ಚ ॥ ೪೨೯ ॥
ವರಕಳಮಸಾಲಿತಂಡುಲಚಯೇಹಿಂ ಸುಛಂಡಿಯದೀಹಸಯಲೇಹಿಂ ॥
ಮಣುಯಸುರಾಸುರಮಹಿಯಂ ಪುಜ್ಜಿಜ್ಜ ಜಿಣಂದಪಯಜುಯಳಂ ॥ ೪೩೦॥

ಶಶಿಕಾಂತಖಂಡವಿಮಲೈರ್ವಿಮಲಜಲಸಿತಾತಿಸುಗಂಧೈಃ ॥
ಜಿನಪ್ರತಿಮಾಪ್ರತಿಷ್ಠಾರ್ಜಿತವಿಶುದ್ಧಪುಣ್ಯಾಂಕುರೈಶ್ಚ ॥
ವರಕಮಲಶಾಲಿತಂಡುಲಚಯೈಃ ಸುಸಂಡಿತದೀರ್ಘಸಕಲೈ: ॥
ಮನುಜಸುರಾಸುರಮಹಿತಂ ಪೂಜಯೇಜ್ಜಿನೇಂದ್ರಪದಯುಗಲವ್ ॥

ಅರ್ಥಃ—ಚಂದ್ರಕಾಂತ ಮಣಿಯಂತೆ ಸ್ವಚ್ಛವಾಗಿಯೂ ನಿರ್ಮಲ ಜಲದಿಂದ ತೊಳೆಯಲ್ಪಟ್ಟದ್ದಾಗಿಯೂ ಅತ್ಯಂತ ಶುಭ್ರವಾಗಿಯೂ ಸುಗಂಧವಾಗಿಯೂ ಜಿನ ಬಿಂಬದ ಪ್ರತಿಷ್ಠೆಯುಯೋಗದಿಂದ ಸಂಪಾದಿಸಿದ ಪುಣ್ಯದ ಅಂಕುರವೋ ಏನೋ ಎಂಬುವ ಹಾಗೆಯೂ ನಿವಡಿಸಿದಾಗಿಯೂ ಉದ್ದವಾಗಿಯೂ ಅಖಂಡವಾಗಿಯೂ ಇರುವ ಸಾಳಿ ಅಕ್ಕಿಯಿಂದ ಮನುಷ್ಯ, ದೇವ, ದೈತ್ಯರಿಂದ ಪೂಜಿಸಲ್ಪಟ್ಟ ಜಿನಬಿಂಬದ ಪಾದಗಳನ್ನು ಪೂಜಿಸಬೇಕು.

ಮಾಳಇಕಯಂಬಕಣಯಾರಿಯಪ್ಪಯಾಸೋಯಮವಲುಳತಿಳಏಹಿಂ ॥
ಮಂದಾರಣಾಯಚಂಪಯಪಉಮುಪ್ಪಳಸಿಂದುವಾರೇಹಿಂ ॥ ೪೩೧ ॥
ಕಣವೀರಮಲ್ಲಿಯಾಹಿಂ ಕಂಚಣಾರಮಚಕುಂದಕಿಂಕರಾಏಹಿಂ ॥
ಸುರವಣಜಜುಹೀಯಾಪಾರಿಜಾತಯಜಾಸವಣಟಗರೇಹಿಂ ॥ ೪೩೨ ॥
ಸೋವಣ್ಣರೂವಮೇಹಿ ಯ ಮುತ್ತಾದಾಮೇಹಿ ವಹುವಿಯಪ್ಪೇಹಿಂ ॥
ಜಿಣಪಯಪಂಕಯಜುಯಳಂ ಪುಜ್ಜಿಜ್ಜ ಸುರಿಂದಸಯಮಹಿಳಂ ॥೪೩೩॥

ಮಾಲತಿಕದಂಬಸೂರ್ಯಮುಖೀ ಅಶೋಕಬಕುಲತಿಲಕೈಃ ॥
ಮಂದಾರನಾಗಚಂಪಕಪದ್ಮೋತ್ಪಲಸಿಂದುವರೈಃ ॥
ಕಣವೀರಮಲ್ಲಿಕಾಕಚನಾರಮಚಕುಂದಕಿಂಕರಾದಿಭಿ: ॥
ಸುರವನಜಜಯಿಪಾರಿಜಾತಕಜಾಸವನತಗರೈಃ ॥
ಸೌವರ್ಣರೌಪ್ಯಪುಷ್ಪೈರ್ಮುಕ್ತಾದಾಮಭಿರ್ಬಹುವಿಕಲ್ಪೈಃ ॥
ಜಿನಪದಪಂಕಜಯುಗಲಂ ಪೂಜಯೇತ್ಸುರೇಂದ್ರೈರಪಿ ಪೂಜಿತಮ್ ॥

ಅರ್ಥ:—ಮಾಲತಿ, ಕದಂಬ, ಸೂರ್ಯಮುಖಿ, ಅಶೋಕ, ಬಕುಲ, ತಿಲಕ, ಮಲ್ಲಿಗೆ, ನಾಗಸಂಪಿಗೆ, ನೀಲಕಮಲ, ಶ್ವೇತಕಮಲ, ಕೆಂಪುಕಮಲ, ನಿಗಡಿ, ಕಣಗಿಲ, ಮೊಗರೆ, ಕಚನಾರ, ಕುಂದ, ಕಿಂಕರ, ಕಲ್ಪವೃಕ್ಷ, ಜೂಜಮಲ್ಲಿಗೆ, ಪಾರಿಜಾತ, ಜಾಸ ಬಂದಿ, ತಗರ ಮುಂತಾದ ಹೂವುಗಳಿಂದಲೂ ಬೆಳ್ಳಿ, ಬಂಗಾರಗಳ ಹೂವುಗ ಳಿಂದಲೂ ಅನೇಕ ಮುತ್ತಿನ ಮಾಲೆಗಳಿಂದಲೂ ದೇವೇಂದ್ರನು ಪೂಜಿಸಿದಂಥ ಜಿನಪದಗಳನ್ನು ಪೂಜಿಸಬೇಕು.

ದಹಿಂದುಗ್ಧಸಪ್ಪಿಮಿಸ್ಸೇಹಿಂ ಕಳಮಭತ್ತೇಹಿಂ ಬಹುಪ್ಪಯಾರೇಹಿಂ ||
ತೇವಠ್ಠಿವಿಂಜಣೇಹಿ ಯ ಬಹುವಿಹಪಕ್ಕಣ್ಣಭೇಏಹಿಂ || ೪೩೪ ||
ರೌಪ್ಪಸುವಣ್ಣಕಂಸಾಇಥಾಳಿಣಿಹಿಏಹಿ ವಿವಿಹಭಕ್ಖೇಹಿಂ ||
ಪುಜ್ಜಂ ವಿಚ್ಛಾರಿಜ್ಜೋ ಭತ್ತೀಏ ಜಿಣಿಂದಪಯಪುರಬು || ೪೩೫ ||

ದಧಿದುಗ್ಧಸರ್ಪಿರ್ಮಿಶ್ರೈಃ ಕಮಲಭಕ್ತೈರ್ಬಹುಪ್ರಕಾರೈಃ ||
ತೇವರ್ಷಿವ್ಯಂಜನೈಶ್ಚ ಬಹುವಿಧಪಕ್ವಾನ್ನಭೇದೈಃ ||
ರೌಪ್ಯಸುವರ್ಣಕಾಂಸ್ಯಾದಿಸ್ಥಾಲೀನಿಹಿತೈರ್ವಿವಿಧಭಕ್ಷ್ಯೈಃ ||
ಪೂಜಾಂ ವಿಸ್ತಾರಯೇದ್ಭಕ್ತ್ಯಾ ಜಿನೇಂದ್ರಪದಪುರತಃ ||

ಅರ್ಥ:—ಮೊಸರು, ಹಾಲು, ತುಪ್ಪ ಮೊದಲಾದವುಗಳಿಂದ ಕೂಡಿದ ನಾನಾ ಪ್ರಕಾರದ ಸಾಳಿಯ ಅಕ್ಕಿಯ ಅನ್ನವನ್ನೂ ಅನೇಕಪ್ರಕಾರದ ಪಕ್ವಾನ್ನಗಳನ್ನೂ ಫಲಾಹಾರದ ಪದಾರ್ಥಗಳನ್ನೂ ಬೆಳ್ಳಿಬಂಗಾರ ಮುಂತಾದವುಗಳ ತಾಟನಲ್ಲಿಟ್ಟು ಜಿನೇಶ್ವರನ ಚರಣಗಳ ಮುಂದೆ ಇಡಬೇಕು. ಅಂದರೆ ನೈವೇದ್ಯಪೂಜೆಯನ್ನು ಮಾಡಬೇಕು.

ದೀವೇಹಿಂ ಣಿಯಪ್ಪಹೋಹಮಿಯಕ್ಕತೇಬುಹಿ ಧೂಮರಹಿಏಹಿಂ ||
ಮಂದಚಲಮಂದಾಣಿಲವಸೇಣ ಣಿಚ್ಚಂತ ಅಚ್ಚಣಂ ಕುಜ್ಜಾ || ೪೩೬ ||
ಘಣಪಡಲಕಮ್ಮಣಿವಹವ್ವ ದೂರಮವಸಾರಿಯಂಧಯಾರೇಹಿಂ ||
ಜಿಣಚರಣಕಮಲಪುರಬು ಕುಣಿಜ್ಜ ರಯಣಂ ಸುಭತ್ತೀಏ || ೪೩೭ ||

ದೀಪೈರ್ನಿಜಪ್ರಭಾಘಮಿತಾರ್ಕತೇಜೋಭಿರ್ಧೂಮರಹಿತೈಃ ||
ಮಂದಚಲಂತೋ ಮಂದಾನಿಲವಶೇನ ನೃತ್ಯಂತೋರ್ಚನಂ ಕುರ್ವಂತ ಇವ ||
ಘನಪಟಲಕರ್ಮನಿವಹವತ್ ದೂರಮುಪಸಾರಿತಾಂಧಕಾರೈಃ ||
ಜಿನಚರಣಕಮಲಪುರತಃ ಕುರ್ಯಾದರ್ಚನಾಂ ಸುಭಕ್ತ್ಯಾ ||

ಅರ್ಥ:—ಸೂರ್ಯನ ಪ್ರಕಾಶಕ್ಕೆ ಸರಿಯಾಗಿಯೂ ಹೊಗೆ ಇಲ್ಲದ್ದಾಗಿಯೂ ಮಂದವಾಯುವಿನ ಸ್ಪರ್ಶದಿಂದ ಕುಣಿಯುತ್ತದೆಯೋ ಏನೋ, ಎಂಬಂತೆ ಹೊಯ್ದಾಡುವಂಥಾದ್ದಾಗಿಯೂ ಕರ್ಮಪಟಲದ ಸಮುದಾಯದಂತಿರುವ ಕತ್ತಲೆಯನ್ನು

ನಾಶಮಾಡುವಂಥಾದ್ದಾಗಿಯೂ ಇರುವ ದೀಪವನ್ನು ಜಿನೇಶ್ವರನ ಚರಣಕಮಲಗಳ ಮುಂದೆ ಭಕ್ತಿಯಿಂದ ರಚಿಸಬೇಕು. ಅಂದರೆ ದೀಪಪೂಜೆಯನ್ನು ಮಾಡಬೇಕು.

ಕಾಳಾಯರುಣಹಽಕಂದಹ ಕಪ್ಪುರಸಿಲ್ಹಾರಸಾಇದವ್ವೇಹಿಂ ॥
ಣಿಪ್ಪಣ್ಣಧೂಪವತ್ತಿಹಿ ಪರಿಮಳಾಪತ್ತ್ರಯಾಳೀಹಿಂ ॥ ೪೩೮ ॥
ಉಗ್ಗಸಿಹಾದೇಸಿಯಸಗ್ಗಮೋಕ್ಖಮಗ್ಗೇಹಿ ಬಹಳಧೂಮೇಹಿಂ ॥
ಧೂವಿಜ್ಜ ಜಿಣಿಂದಪಾಯಾರವಿಂದಜುಯಳಂ ಸುರಿಂದಣುಯಂ ॥೪೩೯॥

ಕಾಲಾಗರ್ವಂಬರಕರ್ಪೂರಶಿಲಾರಸಾದಿದ್ರವ್ಯೈಃ ॥
ನಿಷ್ಪನ್ನಧೂಪವರ್ತಿಭಿ: ಪರಿಮಲಪ್ರಾಪ್ತಾಲಿಭಿಃ ॥
ಉಗ್ರಶಿಖಾದೇಶಿತಸ್ವರ್ಗಮೋಕ್ಷಮಾರ್ಗೈರ್ಬಹಲಧೂಮ್ರೈಃ ॥
ಧೂಪಯೇಜ್ಜಿನೇಂದ್ರಪಾದಾರವಿಂದಯುಗಲಂ ಸುರೇಂದ್ರನುತಮ್ ॥

ಅರ್ಥಃ—ಕಾಲಾಗರು, ಅಂಬರ, ಕರ್ಪೂರ, ಶಿಲಾರಸ, ಚಂದನ, ದೇವದಾರ ಮುಂತಾದ ಸುಗಂಧದ ದ್ರವ್ಯಗಳಿಂದ ನಿರ್ಮಿಸಲ್ಪಟ್ಟಂಥ, ಮತ್ತು ಯಾವ ಸುಗಂಧಕ್ಕೆ ಗುಂಗಿ ಹುಳಗಳು ಮೋಹಿತವಾಗಿರುತ್ತವೆಯೋ ಮತ್ತು ಮೇಲೆ ಹೋಗುವ ಎಷ್ಟೋ ಹೊಗೆಯಿಂದ ತಿಳಿದ ಯಾವ ಸ್ವರ್ಗಮೋಕ್ಷದ ದಾರಿಯನ್ನು ತೋರಿಸಿದೆಯೋ. ಅಂಥ ಧೂಪದಿಂದ ಭಗವಂತನ ಪಾದಕಮಲಗಳನ್ನು ಪೂಜಿಸಬೇಕು.

ಜಂಬೀರಮೋಯದಾಡಿಮಕವಿತ್ಥಪನಸನಾಳಿಏರೇಹಿಂ ॥
ಹಿಂತಾಲತಾಲಖಜ್ಜೂರವಿಂವಣಾರಂಗಽಚೂದೇಹಿಂ ॥ ೪೪೦ ॥
ಪೂಈಫಲತಿಂದುಲ ಆಮಲಯಜಂಬುವಿಲ್ಲಾಇಸುರಹಿಮಿಠ್ಠೇಹಿಂ ॥
ಜಿಣಪಯಪುರಽು ರಯಣಂ ಫಲೇಹಿಂ ಕುಜ್ಜಾ ಸುಪಕ್ಕೇಹಿಂ ॥ ೪೪೧ ॥

ಜಂಬೀರಮೋಚದಾಡಿಮಕಪಿತ್ಥಪನಸನಾಲಿಕೇರೈ: ॥
ಹಿಂತಾಲತಾಲಖರ್ಜೂರಕಿಂದೂರಿ (?) ನಾರಂಗಚೂತೈಃ
ಪೂಗೀಫಲತಿಂದುಲ (?) ಆಮಲಕಜಂಬೂಬಿಲ್ವಾದಿಸುರಭಿಮಿಷ್ಟೈಃ ॥
ಜಿನಪದಪುರತೋ ರಚನಾಂ ಫಲೈ: ಕುರ್ಯಾತ್ಸುಪಕ್ವೈಃ ॥

ಅರ್ಥ:—ಪೇರಲ, ಬಾಳೆ, ದಾಳಿಂಬ, ಬೆಳವಲ, ಹಲಸು, ತೆಂಗು ಹಿಂತಾಲ, ತಾಲ, ಖರ್ಜೂರ, ಕಿತ್ತಳೆ, ಮಾವು, ಅಡಿಕೆ, ನೆಲ್ಲಿ, ಮುಂತಾದ ಜಾತಿಯ ಸುರಸವಾದ, ಮಿಷ್ಟವಾದ, ಪಕ್ವವಾದ ಹಣ್ಣುಗಳನ್ನು ಶ್ರೀಜಿನಪತಿಯ ಪಾದಕ್ಕೆ ಅರ್ಪಣ ಮಾಡಬೇಕು.

ಅಠ್ಠವಿಹಮಂಗಲಾಣಿ ಯ ವಹುವಿಹಪೂಜೋವಯರಣದವ್ವಾಣಿ ॥
ಧೂವದಹಣಾಇ ತಹಾ ಜಿಣಪೂಯತ್ಥಂ ವಿತೀರಿಜ್ಜಇ ॥ ೪೪೨ ॥

ಅಷ್ಟವಿಧಮಂಗಲಾನಿ ಚ ಬಹುವಿಧಪೂಜೋಪಕರಣದ್ರವ್ಯಾಣಿ ॥
ಧೂಪದಹನಾದಿ ತಥಾ ಜಿನಪೂಜಾರ್ಥಂ ವಿತರೇತ್ ॥

ಅರ್ಥ:—ಛತ್ರ, ಚಾಮರ, ಧ್ವಜ, ಪಂಖೆ, ಸ್ವಸ್ತಿಕ, ದರ್ಪಣ, ಝಾರಿ ಮತ್ತು ಕಲಶ ಈ ಎಂಟು ಮಂಗಲದ್ರವ್ಯಗಳನ್ನೂ ಪೂಜೆಯ ಉಪಕರಣ (ಚೌರಂಗ, ಕೂಡ್ರುವ ಮಣೆ, ಪೀಠ ಇತ್ಯಾದಿ) ಗಳನ್ನೂ ಮತ್ತು ಧೂಪಾರತಿ ಮೊದಲಾದವುಗಳನ್ನೂ ಜಿನಪೂಜೆಯಗೋಸ್ಕರ ಚೈತ್ಯಾಲಯದಲ್ಲಿಡಬೇಕು.

ಏವಂ ಚಲಪಡಿಮಾಏ ಠವಣಾ ಭಣಿಯಾ ಥಿರಾಏ ಯ ॥
ಣವರ ವಿಸೇಸೋ ಆಗರಸುದ್ಧಿಂ ಕುಜ್ಜಾ ಸುಠಾಣಮ್ಮಿ ॥ ೪೪೩ ॥
ಚಿತ್ತಪಡಲೇವಪಡಿಮಾಏ ದಪ್ಪಣೇ ದಾವಿಊಣ ಪಡಿಬಿಂಬಂ ॥
ತಿಳಯಂ ದಾಊಣ ತಓ ಮುಹವತ್ಥಂ ದಿಜ್ಜ ಪಡಿಮಾಏ ॥ ೪೪೪ ॥
ಆಗರಸುದ್ಧಿಂ ಚ ಕರೇಜ್ಜ ದಪ್ಪಣೇ ಅಹವಾ ಅಣ್ಣಪಡಿಮಾಏ ॥
ಎತ್ತಿಯಮತ್ತವಿಸೇಸೋ ಸ ವಿಹೀ ಜಾಣೇಯ ಪುವ್ವೋ ಯ ॥ ೪೪೫ ॥
ಏವಂ ಚರಿತ್ತಣಾಣಂ ಪಿ ಕಟ್ಟಿಮಾಕಟ್ಟಿಮಾಣ ಪಡಿಮಾಣಂ ॥
ಜಂ ಕೀರಇ ಬಹುಮಾಣಂ ಠವಣಾಪೂಜ್ಜಂ ಹಿ ತಂ ಜಾಣೇ ॥ ೪೪೬ ॥

ಏವಂ ಚಲಪ್ರತಿಮಾಯಾಃ ಸ್ಥಾಪನಾ ಭಣಿತಾ ಸ್ಥಿರಾಯಾಶ್ಚ ॥
ನಾಪರೋ ವಿಶೇಷೋಗಾರಶುದ್ಧಿಂ ಕುರ್ಯಾತ್ಸುಸ್ಥಾನೇ ॥
ಚಿತ್ರಪಟಲೇಪಪ್ರತಿಮಾಯಾ ದರ್ಪಣೇ ದರ್ಶಯಿತ್ವಾ ಪ್ರತಿಬಿಂಬಮ್ ॥
ತಿಲಕಂ ದತ್ವಾ ತತೋ ಮುಖವಸ್ತ್ರಂ ದದ್ಯಾತ್ಪ್ರತಿಮಾಯಾ: ॥
ಅಗಾರಶುದ್ಧಿಂ ಚ ಕುರ್ಯಾದ್ದರ್ಪಣೇಥವಾನ್ಯಪ್ರತಿಮಾಯಾಃ ॥
ಏತಾವನ್ಮಾತ್ರವಿಶೇಷಃ ಸ ವಿಧಿರ್ಜ್ಞೇಯಸ್ತಾಂ ಪೂರ್ವೋಕ್ತ: ॥
ಏವಂ ಚಾರಿತ್ರಜ್ಞಾನಮಪಿ ಕೃತ್ರಿಮಾಕೃತ್ರಿಮಾಣಾಂ ಪ್ರತಿಮಾನಾಮ್ ॥
ಯತ್ಕ್ರಿಯತೇ ಬಹುಮಾನಂ ಸ್ಥಾಪನಪೂಜಾಂ ಹಿ ತಾಂ ಜಾನೀಹಿ ॥

ಅರ್ಥ: —ಈ ಪ್ರಕಾರ ಚಲಪ್ರತಿಮೆಯ ಸ್ಥಾಪನೆಯನ್ನು ಹೇಳಿದೆನು. ಸ್ಥಿರ ಪ್ರತಿಮೆಯ ಸ್ಥಾಪನೆಯಾದರೂ ಹೀಗೇ ಇರುತ್ತದೆ. ಇವೆರಡಕ್ಕೂ ಭೇದವೇನಂದರೆ—(ಪ್ರಥಮ ಗೃಹಶುದ್ಧಿ ಮಾಡಿಕೊಂಡು, ಆ ಮೇಲೆ ಜಿನಪ್ರತಿಮೆಯ ಚಿತ್ರವನ್ನು ವಸ್ತ್ರದ ಮೇಲೆ ಅಥವಾ ಗೋಡೆಯ ಮೇಲೆ ಕೊರೆದು, ಅದರ ಪ್ರತಿಬಿಂಬವನ್ನು ಕನ್ನಡಿಯಲ್ಲಿ ಕೆಡವಬೇಕು. ಅದರ ಹಣೆಗೆ ತಿಲಕವನ್ನು ಹಚ್ಚಬೇಕು. ಅನಂತರ ಮುಖವಸ್ತ್ರದಿಂದ ಆ ಬಿಂಬವನ್ನು ಮುಚ್ಚಬೇಕು.) ಇದೇ ಪ್ರಕಾರ ಸಮ್ಯಕ್ಚಾರಿತ್ರ, ಸಮ್ಯಗ್ಜ್ಞಾನ, ಕೃತ್ರಿಮ, ಅಕೃತ್ರಿಮ ಮುಂತಾದ ಜಿನಪ್ರತಿಮೆಗಳಿಗೆ ಪ್ರೀತಿಯಿಂದ ಮಾಡಲ್ಪಡುವ ಪೂಜೆಯು ಸ್ಥಾಪನಾಪೂಜೆಯೆಂದು ಹೇಳಲ್ಪಡುತ್ತದೆ.

ಈ ಬಗ್ಗೆ ವಿಶೇಷ ವರ್ಣನೆಯನ್ನು ಪ್ರತಿಷ್ಠಾತಿಲಕ ಮುಂತಾದ ಗ್ರಂಥಗಳಿಂದ ತಿಳುಕೊಳ್ಳಬೇಕು.

ಜೇ ಪುವ್ವಸಮುದ್ದಿಠ್ಠಾ ಠವಣಾಪುಯಾಪಿ ಪಂಚ ಅಹಿಯಾರಾ ॥
ಚತ್ತಾರಿ ತೇಸು ಭಣಿಯಾ ಅವಸಾಣೇ ಪಂಚಮಂ ಭಣಿಮೋ ॥೪೪೭॥

ಯೇ ಪೂರ್ವಸಮುದ್ದಿಷ್ಟಾಃ ಸ್ಥಾಪನಾಯಾ ಪಂಚಾಧಿಕಾರಾಃ ॥
ಚತ್ವಾರಸ್ತೇಷು ಭಣಿತಾ ಅವಸಾನೇ ಪಂಚಮಂ ಭಣಾಮಃ ॥

ಅರ್ಥ:—ಪೂರ್ವದಲ್ಲಿ (೩೮೭ ನೇ ಶ್ಲೋಕದಲ್ಲಿ) ಸ್ಥಾಪನಾಪೂಜೆಯ ಐದು ಅಧಿಕಾರಗಳ ಹೆಸರುಗಳು ಹೇಳಲ್ಪಟ್ಟವೆ. ಅದರಲ್ಲಿಯು ನಾಲ್ಕು ಅಧಿಕಾರಗಳ ವರ್ಣನೆಯು ಹೇಳಲ್ಪಟ್ಟಿತು. ಐದನೆಯ ಅಧಿಕಾರದ (ಫಲದ) ವರ್ಣನೆಯು (೪೮೧ ಶ್ಲೋಕದಿಂದ) ಮಾಡಲ್ಪಡುವದು.

## ದ್ರವ್ಯಪೂಜೆಯು.

ದವ್ವೇಣ ಯ ದವ್ವಸ್ಸ ಯ ಜಾ ಪೂಜಾ ಜಾಣ ದವ್ವಪೂಜಾ ಸಾ ॥
ದವ್ವೇಣ ಗಂಧಸಲಿಲಾಇಪುವ್ವಭಣಿಏಣ ಕಾಯವ್ವಾ ॥ ೪೪೮ ॥

ದ್ರವ್ಯೇಣ ಚ ದ್ರವ್ಯಸ್ಯ ಚ ಯಾ ಪೂಜಾ ಜ್ಞಾಯತಾಂ ದ್ರವ್ಯಪೂಜಾ ಸಾ ॥
ದ್ರವ್ಯೇಣ ಗಂಧಸಲಿಲಾದಿಪೂರ್ವಭಣಿತೇನ ಕರ್ತವ್ಯಾ ॥

ಅರ್ಥ:—ದ್ರವ್ಯದಿಂದ ದ್ರವ್ಯದ ಅಂದರೆ ಷಡ್ದ್ರವ್ಯಗಳ ಸಾರವಾದ ಪರಮಾತ್ಮನ ಪೂಜೆಯು ದ್ರವ್ಯಪೂಜೆಯೆಂದು ತಿಳಿಯಬೇಕು. ದ್ರವ್ಯದಿಂದ ಅಂದರೆ ಜಲ, ಗಂಧ ಮುಂತಾದ ಅಷ್ಟವಿಧ ದ್ರವ್ಯಕ್ಕೆ ದ್ರವ್ಯಪೂಜೆಯೆಂದು ತಿಳಿಯಬೇಕು.

## ದ್ರವ್ಯಪೂಜೆಯ ಮೂರು ಭೇದಗಳು.

ತಿವಿಹಾ ದವ್ವೇಪೂಜಾ ಸಚಿತ್ತಾಚಿತ್ತಮಿಸ್ಸಭೇಏಣ ॥
ಪಚ್ಚಕ್ಖಜಿಣಾಈಣಂ ಸಚಿತ್ತಪೂಜಾ ಜಹಾಜೋಗ್ಗಂ ॥ ೪೪೯ ॥

ತ್ರಿವಿಧಾ ದ್ರವ್ಯಪೂಜಾ ಸಚಿತ್ತಾಚಿತ್ತಮಿಶ್ರಭೇದೇನ ॥
ಪ್ರತ್ಯಕ್ಷಜಿನಾದೀನಾಂ ಸಚಿತ್ತಪೂಜಾ ಯಥಾಯೋಗ್ಯಮ್ ॥

ಅರ್ಥಃ—ಸಚಿತ್ತ, ಅಚಿತ್ತ ಮತ್ತು ಮಿಶ್ರ ಅಂದರೆ ಸಚಿತ್ತಾಚಿತ್ತ ಈ ಭೇದದಿಂದ ದ್ರವ್ಯಪೂಜೆಯಲ್ಲಿ ಮೂರು ಬೇದಗಳು. ಇವುಗಳಲ್ಲಿ ಪ್ರತ್ಯಕ್ಷವಾದ ಜಿನೇಶನ ಯಥಾಯೋಗ್ಯವಾದ ಪೂಜೆಯು ಸಚಿತ್ತ ಪೂಜೆಯೆಂದು ತಿಳಿಯಬೇಕು.

ತೇಸಿಂ ಚ ಸರೀರಾಣಂ ದವ್ವಸುದಸ್ಸ ವಿ ಅಚಿತ್ತಪೂಜಾ ಸಾ ॥
ಜಾ ಪುಣ ದೋಣ್ಹಂ ಕೀರಇ ಣಾಯವ್ವಾ ಮಿಸ್ಸಪೂಜಾ ಸಾ ॥ ೪೫೦ ॥

ತೇಷಾಂ ಚ ಶರೀರಾಣಾಂ ದ್ರವ್ಯಶ್ರುತಸ್ಯಾಪ್ಯಚಿತ್ತಪೂಜಾ ಸಾ ॥
ಯಾ ಪುನರ್ದ್ವಯೋಃ ಕ್ರಿಯತೇ ಜ್ಞಾತವ್ಯಾ ಮಿಶ್ರಪೂಜಾ ಸಾ ॥

ಅರ್ಥ:—ತೀರ್ಥಂಕರರ ದೇಹದ ಅಥವಾ ಶಾಸ್ತ್ರದ ಪೂಜೆಯು ಅಚಿತ್ತ ಪೂಜೆಯು. ಶಾಸ್ತ್ರ ಮತ್ತು ಗುರುಗಳ ಪೂಜೆಯು ಮಿಶ್ರ (ಸಚಿತ್ತಾಚಿತ್ತ) ಪೂಜೆಯೆಂದು ತಿಳಿಯಬೇಕು.

ಅಹವಾ ಆಗಮಣೋಆಗಮಾಇಭೇಏಣ ವಹುವಿಹಂ ದವ್ವಂ ॥
ಣಾಊಣ ದವ್ವಪೂಜಾ ಕಾಯವ್ವಾ ಸುತ್ತಮಗ್ಗೇಣ ॥ ೪೫೧ ॥

ಅಥವಾಗಮನೋಆಗಮಾದಿಭೇದೇನ ಬಹುವಿಧಂ ದ್ರವ್ಯಮ್ ॥
ಜ್ಞಾತ್ವಾ ದ್ರವ್ಯಪೂಜಾ ಕರ್ತವ್ಯಾ ಶ್ರುತಮಾರ್ಗೇಣ ॥

ಅರ್ಥ:—ಅಥವಾ ಆಗಮದ್ರವ್ಯ, ನೋಆಗಮದ್ರವ್ಯ ಮುಂತಾದ ಭೇದಗಳಿಂದ ದ್ರವ್ಯವನ್ನು ತಿಳಿದು, ಶಾಸ್ತ್ರಮಾರ್ಗಕ್ಕನುಸರಿಸಿ ದ್ರವ್ಯಪೂಜೆಯನ್ನು ಮಾಡಬೇಕು.

## ಕ್ಷೇತ್ರಪೂಜೆಯು.

ಜಿಣಜಣಣಿಕ್ಖವಣಣಾಣುಪ್ಪತ್ತಿಮೋಕ್ಖಸಂಪತ್ತಿ- ॥
ಣಿಸಿಹೀಸು ಖೇತ್ತಪೂಜಾ ಪುವ್ವವಿಹಾಣೇಣ ಕಾಯವ್ವಾ ॥ ೪೫೨ ॥

ಜಿನಜನ್ಮನಿಷ್ಕ್ರಮಣಜ್ಞಾನೋತ್ಪತ್ತಿಮೋಕ್ಷಸಂಪ್ರಾಪ್ತಿ- ॥
ನಿಷದ್ಯಾಸು ಕ್ಷೇತ್ರಪೂಜಾ ಪೂರ್ವವಿಧಾನೇನ ಕರ್ತ್ತವ್ಯಾ ॥

ಅರ್ಥ:—ಜಿನೇಂದ್ರನ ಜನ್ಮಭೂಮಿ, ದೀಕ್ಷೆಯಭೂಮಿ, ಕೇವಲಜ್ಞಾನಭೂಮಿ ಮತ್ತು ಮೋಕ್ಷಭೂಮಿ ಈ ಸ್ಥಳಗಳಲ್ಲಿ ಮೊದಲು ಹೇಳಿರುವ ಜಲಾದಿ ದ್ರವ್ಯಗಳಿಂದ ಪೂಜಿಸುವದಕ್ಕೆ ಕ್ಷೇತ್ರಪೂಜೆಯೆನ್ನುತ್ತಾರೆ.

## ಕಾಲಪೂಜೆಯು.

ಗಬ್ಭಾವಯಾರಜಮ್ಮಾಹಿಸೇಯಣಿಕ್ಖವಣಣಾಣಣಿವ್ವಾಣಂ ॥
ಜಮ್ಮಿ ದಿಣೇ ಸಂಜಾದಂ ಜಿಣಣ್ಹವಣಂ ತದ್ದಿಣೇ ಕುಜ್ಜಾ ॥ ೪೫೩ ॥
ಇಖ್ಖುರಸಸಪ್ಪಿದಹಿಖೀರಗಂಧಜಲಪುಣ್ಣವಿವಿಹಕಲಸೇಹಿಂ ॥
ಣಿಸಿಜಾಗರಂ ಚ ಸಂಗೀಯಣಾಡಯಾಈಹಿ ಕಾಯವ್ವಂ ॥ ೪೫೪ ॥
ಣಂದೀಸರಠ್ಠದಿವಸೇಸು ತಹಾ ಅಣ್ಣೇಸು ಉಚಿಯಪವ್ವೇಸು ॥
ಜಂ ಕೀರಇ ಜಿಣಮಹಿಮಾ ವಿಣ್ಣೇಯಾ ಕಾಳಪೂಜಾ ಸಾ ॥ ೪೫೫ ॥

ಗರ್ಭಾವತಾರಜನ್ಮಾಭಿಷೇಕನಿಷ್ಕ್ರಮಣಜ್ಞಾನನಿರ್ವಾಣಮ್ ॥
ಯಸ್ಮಿಂದಿನೇ ಸಂಜಾತಂ ಜಿನಸ್ನಪನಂ ತದ್ದಿನೇ ಕುರ್ಯಾತ್ ॥

ಇಕ್ಷುರಸಸರ್ಪಿರ್ದಧಿಕ್ಷೀರಗಂಧಜಲಪೂರ್ಣವಿವಿಧಕಲಶೈಃ ॥
ನಿಶಿ ಜಾಗರಣಂ ಚ ಸಂಗೀತನಾಟಕಾದಿಭಿಃ ಕರ್ತವ್ಯಮ್ ॥
ನಂದೀಶ್ವರಾಷ್ಟದಿವಸೇಷು ತಥಾನೇಕೇಷೂಚಿತಪರ್ವಸು ॥
ಯತ್ಕ್ರಿಯತೇ ಜಿನಮಹಿಮಾ ವಿಜ್ಞೇಯಾ ಕಾಲಪೂಜಾ ಸಾ ॥

ಅರ್ಥ:—ತೀರ್ಥಂಕರರ ಗರ್ಭಾವತರಣ, ಜನ್ಮಾಭಿಷೇಕ, ದೀಕ್ಷೆ, ಕೇವಲ ಜ್ಞಾನ ಮತ್ತು ನಿರ್ವಾಣ ಇವೆಲ್ಲವೂ ಯಾವ ದಿವಸ ಆಗಿರುತ್ತವೆಯೋ, ಆ ದಿವಸ ಕಬ್ಬಿನಹಾಲು, ತುಪ್ಪ, ಹಾಲ್ಮೊಸರು, ನಿರ್ಮಲಜಲ ಮುಂತಾದವುಗಳಿಂದ ತುಂಬಿದ ಕಲಶಗಳಿಂದ ಭಗವಂತನಿಗೆ ಅಭಿಷೇಕ ಮಾಡಬೇಕು. ಮತ್ತು ಜಿನದೇವರ ಪವಿತ್ರ ವಾದ ಗುಣಗಳಿಂದ ಯುಕ್ತವಾದ ಸ್ತೋತ್ರಗಳನ್ನು ಸ್ತುತಿಸುವದೂ ವಾದ್ಯಗಳನ್ನು ಬಾರಿಸುವದೂ, ನಾಟಕ ( ಜಿನಾವತಾರದ ) ಮಾಡುವದೂ ನೊದಲಾದ ಕ್ರಿಯೆಗ ಳನ್ನು ಮಾಡಿ, ಆ ದಿವಸ ಜಾಗರಣ ಮಾಡಬೇಕು. ಅದರಂತೆಯೇ ಆಷಾಢ, ಕಾರ್ತಿಕ, ಫಾಲ್ಗುಣ ಈ ಮೂರು ತಿಂಗಳ ನಂದೀಶ್ವರ ಪರ್ವದ ಎಂಟು ದಿವಸ ಗಳಲ್ಲಿ ಆಯಾ ಪರ್ವಗಳ ವಿಧಿಪ್ರಕಾರ ಪೂಜೆಯನ್ನು ಮಾಡುವದಕ್ಕೆ ಕಾಲಪೂ ಜೆಯೆನ್ನುತ್ತಾರೆ.

## ಭಾವಪೂಜೆಯು.

ಕಾಊಣಾಣಂತಚಉಟ್ಠಯಾಇಗುಣಕಿತ್ತಣಂ ಸುಭತ್ತೀಏ ॥
ಜಂ ವಂದಣಂ ತಿಯಾಳಂ ಕೀರಇ ಭಾವಚ್ಚಣಂ ತಂ ಖು ॥ ೪೫೬ ॥

ಕೃತ್ವಾನಂತಚತುಷ್ಟಯಾದಿಗುಣಕೀರ್ತನಂ ಸುಭಕ್ತ್ಯಾ ॥
ಯದ್ವಂದನಂ ತ್ರಿಕಾಲಂ ಕ್ರಿಯತೇ ಭಾವಾರ್ಚನಂ ತತ್ಖಲು ॥

ಅರ್ಥ:—ಭಗವಂತನ ಅನಂತದರ್ಶನ ಮುಂತಾದ ಗುಣಗಳನ್ನು ಭಕ್ತಿ ಯಿಂದ ಸ್ತೋತ್ರಮಾಡಿ, ನಿತ್ಯದಲ್ಲಿ ಮೂರಾವರ್ತಿ ವಂದನೆ ಮಾಡುವದಕ್ಕೆ ಭಾವ ಪೂಜೆಯೆನ್ನುತ್ತಾರೆ. ( ತ್ರಿಕಾಲದಲ್ಲಿ ಸಾಮಾಯಿಕ ಪೂಜೆಯನ್ನು ಮಾಡುವದಕ್ಕೂ ಭಾವಪೂಜೆ ಅನ್ನುವರು. )

ಪಂಚಣಮೋಯಾರೇಹಿಂ ಅಹವಾ ಜಾವಂ ಕುಣಿಜ್ಜ ಸತ್ತೀಏ ॥
ಅಹವಾ ಜಿಣಿಂದಥೋತ್ತಂ ವಿಯಾಣ ಭಾವಚ್ಚಣಂ ತಂ ಪಿ ॥ ೪೫೭ ॥

ಪಂಚನಮಸ್ಕಾರೈರಥವಾ ಜಾಪ್ಯಂ ಕುರ್ಯಾಚ್ಛಕ್ತ್ಯಾ ॥
ಅಥವಾ ಜಿನೇಂದ್ರಸ್ತೋತ್ರಂ ವಿಜಾನೀಹಿ ಭಾವಾರ್ಚನಂ ತದಪಿ ॥

ಅರ್ಥ:—ಅಥವಾ ಪಂಚಪರಮೇಷ್ಠಿಗಳ ನಮಸ್ಕಾರಗಳಿಂದ ( ಪಂಚನಮ ಸ್ಕಾರ ಮಂತ್ರದಿಂದ ) ತನ್ನ ಶಕ್ತಿಯಂತೆ ಜಪ ಮಾಡಬೇಕು. ಅಥವಾ ಭಗವಂತನ ಸ್ತೋತ್ರಮಾಡಬೇಕು. ಇದಕ್ಕಾದರೂ ಭಾವಪೂಜೆ ಅನ್ನುವರು.

ಪಿಂಡತ್ಥಂ ಚ ಪಯತ್ಥಂ ರೂವತ್ಥಂ ರೂವವಜ್ಜಿಯಂ ಅಹವಾ ॥
ಜಂ ಝಾಇಜ್ಜಇ ಝಾಣಂ ಭಾವಮಹಂ ತಂ ವಿಣಿದ್ದಿಠ್ಠಂ ॥ ೪೫೮ ॥

ಪಿಂಡಸ್ಥಂ ಚ ಪದಸ್ಥಂ ರೂಪಸ್ಥ ರೂಪವರ್ಜಿತಮಥವಾ ॥
ಯದ್ಧ್ಯಾಯತಿ ಧ್ಯಾನಂ ಭಾವಮಹಂ ತಂ ವಿನಿರ್ದಿಷ್ಟಮ್ ॥

ಅರ್ಥ:—ಇಲ್ಲವೇ ಪಿಂಡಸ್ಥ, ಪದಸ್ಥ, ರೂಪಸ್ಥ ಮತ್ತು ರೂಪಾತೀತ ಈ ಧ್ಯಾನಗಳ ಧ್ಯಾನ ಮಾಡುವದಕ್ಕೆ ಭಾವಪೂಜೆಯೆಂದು ಹೇಳುವರು.

## ಪಿಂಡಸ್ಥಧ್ಯಾನವು.

ಸಿಯಕಿರಣವಿಪ್ಫುರಂತಂ ಅಠ್ಠಮಹಾಪಾಡಿಹಾರಿಪರಿಯರಿಯಂ ॥
ಝಾಇಜ್ಜಇ ಣಿಯರೂವಂ ಪಿಂಡತ್ಥಂ ಜಾಣ ತಂ ಝಾಣಂ ॥ ೪೫೯ ॥

ಸಿತಕಿರಣವಿಸ್ಫುರಂತಮಷ್ಟಮಹಾಪ್ರಾತಿಹಾರ್ಯಪರಿವೃತಮ್ ॥
ಧ್ಯಾಯತಿ ನಿಜರೂಪಂ ಪಿಂಡಸ್ಥಂ ಜಾನೀಹಿ ತದ್ಧ್ಯಾನಮ್ ॥

ಅರ್ಥ:—ಅಶೋಕವೃಕ್ಷ, ಪುಷ್ಪವೃಷ್ಟಿ ಮುಂತಾದ ಎಂಟು ಮಹಾಪ್ರತಿಹಾರ್ಯಗಳಿಂದ ಯುಕ್ತವಾದಂಥ, ಚಂದ್ರಕಿರಣದ ಹಾಗೆ ಹೊಳೆಯುವಂಥ ಕೇವಲಿ ಜಿನನ ರೂಪವನ್ನು ತನ್ನ ಭಾವನೆಯಲ್ಲಿ ಭಾವಿಸಿ, (ತನ್ನ ಪಿಂಡವು ಅದರಂತಿರುತ್ತದೆಂದು ಕಲ್ಪಿಸಿ) ಅದರ ಧ್ಯಾನ ಮಾಡುವದು ಪಿಂಡಸ್ಥಧ್ಯಾನವೆನಿಸುವದು.

ಅಹವಾ ಣಾಹಿಂ ಚ ವಿಯಪ್ಪಿಊಣ ಮೇರುಂ ಅಹೋವಿಹಾಯಮ್ಮಿ ॥
ಝಾಇಜ್ಜ ಅಹೋಲೋಯಂ ತಿರಿಯಮ್ಮಿ ತೀರಿಯಂ ವೀಯಂ ॥ ೪೬೦ ॥
ಉಡ್ಢಮ್ಮಿ ಉ ಣರಳೋಏ ಕಪ್ಪವಿಮಾಣಾಣಿ ಖಂದಪರಿಯಂತೇ ॥
ಗೇವಿಜ್ಜಾಣವಗೀವಂ ಅಣುದಿಸಂ ಹಣುಪಏಸಮ್ಮಿ ॥ ೪೬೧ ॥
ವಿಜಯಂ ಚ ವೈಜಯಂತಂ ಜಯಂತಮುವರಾಜಿಯಂ ಚ ಸವ್ವತ್ಥಂ ॥
ಝಾಇಜ್ಜ ಮುಹಪಏಸೇ ಲಲಾಟದೇಸಮ್ಮಿ ಸಿದ್ಧಸಿಳಾ ॥ ೪೬೨ ॥
ತಸ್ಸುವರಿ ಸಿದ್ಧಣಿಳಯಂ ಜಹುಸಿಹರಂ ಜಾಣ ಉತ್ತಮಂಗಮ್ಮಿ ॥
ಏವಂ ಜಾ ಣಿಯದೇಹಂ ಝಾಇಜ್ಜಇ ತಂ ಪಿ ಪಿಂಡತ್ಥಂ ॥ ೪೬೩ ॥

ಅಥವಾ ನಾಭಿಂ ಚ ವಿಕಲ್ಪ್ಯ ಮೇರುಮಧೋವಿಭಾಗೇ ॥
ಧ್ಯಾಯೇತಾಧೋಲೋಕಂ ತಿರಶ್ಚಿ ತಿರ್ಯಂಚಂ ದ್ವಿತೀಯಮ್ ॥
ಊರ್ಧ್ವಂ ತು ನರಲೋಕಾತ್ಕಲ್ಪವಿಮಾನಾನಿ ಸ್ಕಂಧಪರ್ಯಂತೇ ॥
ಗ್ರೀವಾಯಾಂ ನವಗ್ರೈವೇಯಕಮನುದಿಶಂ ಹನುಪ್ರದೇಶೇ ॥
ವಿಜಯಂ ಚ ವೈಜಯಂತಂ ಜಯಂತಮಪರಾಜಿತಂ ಚ ಸರ್ವಾರ್ಥಮ್ ॥
ಧ್ಯಾಯೇತ ಮುಖಪ್ರದೇಶೇ ಲಲಾಟದೇಶೇ ಸಿದ್ಧಶಿಲಾಮ್ ॥

ತಸ್ಯೋಪರಿ ಸಿದ್ಧನಿಲಯಂ ಜಗಚ್ಛಿಖರಂ ಜಾನೀಹ್ಯುತ್ತಮಾಂಗೇ ||
ಏವಂ ಯನ್ನಿಜದೇಹಂ ಧ್ಯಾಯತಿ ತದಪಿ ಪಿಂಡಸ್ಥಮ್ ||

ಅರ್ಥಃ—ಅಥವಾ ತನ್ನ ನಾಭಿಪ್ರದೇಶವು ಮೇರುಪರ್ವತವೆಂದೂ, ಅದರ ಕೆಳಗಿನಭಾಗವು ಪಾತಾಳಲೋಕವೆಂದೂ, ನಾಭಿಯ ಸುತ್ತಲಿನ ಪ್ರದೇಶವು ಮಧ್ಯಲೋಕವೆಂದೂ ಕಲ್ಪನೆಯನ್ನು ಮಾಡಬೇಕು. ಮಧ್ಯಲೋಕದಿಂದ ಹೆಗಲ ತನಕ ಸ್ವರ್ಗಲೋಕದ ವಿಮಾನದ ಕಲ್ಪನೆಯನ್ನು ಮಾಡಬೇಕು. ಗದ್ದದ ಪ್ರದೇಶದಲ್ಲಿ ಅನುದಿಶ ಮತ್ತು ಮುಖಪ್ರದೇಶದಲ್ಲಿ ವಿಜಯ, ವೈಜಯಂತ, ಜಯಂತ, ಅಪರಾಜಿತ ಮತ್ತು ಸರ್ವಾರ್ಥಸಿದ್ಧಿ ಈ ವಿಮಾನಗಳ ಭಾವನೆಯನ್ನು ಮಾಡಬೇಕು. ಹಣೆಯು ಸಿದ್ಧಶಿಲೆಯೆಂದೂ, ಅದರ ಮೇಲೆ ಇರುವ ಮಸ್ತಕವು ಲೋಕದ ಶಿಖರ ಇಲ್ಲವೇ ಅಗ್ರಭಾಗವೆಂದೂ ಭಾವಿಸಿ, ಸಿದ್ಧರ ಸ್ಥಳಗಳನ್ನು ಅರಿಯಬೇಕು. ಈ ಮೇರೆಗೆ ತಮ್ಮ ದೇಹದ ಆಕೃತಿಯನ್ನು ಕಲ್ಪಿಸಿಕೊಂಡು ಧ್ಯಾನ ಮಾಡುವದಾದರೂ ಪಿಂಡಸ್ಥ ಧ್ಯಾನಯೆನಿಸುತ್ತದೆ. ( ಇದರ ವಿಶೇಷ ವರ್ಣನೆಯನ್ನು ಜ್ಞಾನಾರ್ಣವ ಮುಂತಾದ ಯೋಗ್ಯವಾದ ಶಾಸ್ತ್ರಗಳಿಂದ ತಿಳುಕೊಳ್ಳಬೇಕು. )

## ಪದಸ್ಥಧ್ಯಾನವು.

ಜಂ ಝಾಏಈ ಉಚ್ಚಾರಿಊಣ ಪರಮೇಠ್ಠಿಮಂತ ಪಯಕಮಲಂ ||
ಏಯಕ್ಖರಾದಿ ವಿವಿಹಂ ಪಯತ್ಥಝಾಣಂ ಮುಣೇಯವ್ವಂ || ೪೬೪ ||

ಯದ್ಧ್ಯಾಯತೇ ಉಚ್ಚಾರ್ಯ ಪರಮೇಷ್ಠಿಮಂತ್ರಂ ಪದೇಕಮಲಂ ||
ಏಕಾಕ್ಷರಾದಿ ವಿವಿಧಂ ಪದಸ್ಥಧ್ಯಾನಂ ಜ್ಞಾತವ್ಯಮ್ ||

ಅರ್ಥ:—ಒಂದೇ ಅಕ್ಷರ ಮುಂತಾದ ಪಂಚಪರಮೇಷ್ಠಿಯ ಮಂತ್ರವನ್ನು ಉಚ್ಚರಿಸಿ, ಅವರ ಪದಕಮಲಗಳಿಗೆ ಮಾಡಲ್ಪಡುವ ಧ್ಯಾನವು ಪದಸ್ಥಧ್ಯಾನ ಅನಿಸುತ್ತದೆ. "ಣಮೋ ಅರಹಂತಾಣಂ, ಣಮೋ ಸಿದ್ಧಾಣಂ, ಣಮೋ ಆಯರಿಯಾಣಂ, ಣಮೋ ಉವಜ್ಝಾಯಾಣಂ, ಣಮೋ ಲೋಯೇ ಸವ್ವಸಾಹೂಣಂ" ಇದು ೩೫ ಅಕ್ಷರಗಳ ಮಂತ್ರವು. "ಅರಹಂತ, ಸಿದ್ಧ, ಆಯರಿಯ, ಉವಜ್ಝಾಯ, ಸಾಹೂ" ಮತ್ತು "ಅರ್ಹತ್ಸಿದ್ಧಾಚಾರ್ಯೋಪಾಧ್ಯಾಯಸರ್ವಸಾಧುಭ್ಯೋ ನಮ:" ಇವೆರಡೂ ೧೬ ಅಕ್ಷರಗಳ ಮಂತ್ರಗಳು. "ಅರಹಂತ ಸಿದ್ಧ" ಇದು ೬ ಅಕ್ಷರಗಳುಳ್ಳದ್ದು, "ಅ ಸಿ ಆ ಉ ಸಾ" ಇದು ೫ ಅಕ್ಷರಗಳುಳ್ಳದ್ದು, "ಅರಹಂತ" ಇದು ೪ ಅಕ್ಷರಗಳುಳ್ಳದ್ದು, "ಸಿದ್ಧ ಅಥವಾ ಅರ್ಹನ್" ಇದು ೨ ಅಕ್ಷರಗಳುಳ್ಳದ್ದು ಮತ್ತು "ಓಂ" ಇದು ಒಂದೇ ಅಕ್ಷರ ಮಂತ್ರವಿರುತ್ತದೆ. ಇದರ ಹೊರ್ತು ಮತ್ತೂ ಕೆಲವು ಭೇದಗಳುಂಟು. ಅವುಗಳನ್ನು ಗುರುಗಳ ಮುಖದಿಂದ ತಿಳಕೊಳ್ಳಬೇಕು.

ಸುಣ್ಣ ಅಯಾರಪುರಓ ಝಾಇಜ್ಜೋ ಉಡ್ಢರೇಹ ಬಿಂದುಜುಯಂ ||
ಪಾವಾಂಧಯಾರಮಹಣಂ ಸಮಂತಓ ಫುರಿಯಸಸಿಛೇಯಂ || ೪೬೫ ||

ಶೂನ್ಯೋಕಾರಪುರತೋ ಧ್ಯಾತವ್ಯ ಊರ್ಧ್ವರೇಫಬಿಂದುಯುತಃ ||
ಪಾಪಾಂಧಕಾರಮಥನಃ ಸಮಂತತ: ಸ್ಫುರಿತಶಶಿಸದೃಶ: ||

ಅರ್ಥ:—ಅಕಾರದ ಮುಂದೆ ಊರ್ಧ್ವರೇಪ ಮತ್ತು ಅನುಸ್ವರದಿಂದ ಯುಕ್ತವಾದ, ಪಾಪವೆಂಬ ಕತ್ತಲೆಯನ್ನು ನಾಶಮಾಡುವಂಥ ಮತ್ತು ನಾಲ್ಕು ಕಡೆಗೆ ಚಂದ್ರನಂತೆ ಹೊಳೆಯುವಂಥ ಯಾವ ಹಕಾರವೋ ( ಅರ್ಹಂ ) ಅದರ ಧ್ಯಾನ ಮಾಡಬೇಕು.

ಅಸಿಆಉಸಾಸುವಣ್ಣಾ ಝಾಯವ್ವಾಣಂತಸತ್ತಿಪಣ್ಣಾಓ ||
ಚಉಪತ್ತಕಮಲಮಜ್ಝೇ ಪಢಮಾಇಕಮೇಣ ಣಿಸಿಊಣ || ೪೬೬ ||
ತೇ ಚಿಯ ವಣ್ಣಾ ಅಟ್ಠದಳಪಂಚಕಮಳಾಣ ಮಜ್ಝದೇಸೇಸು ||
ಣಿಸಿಊಣ ಸೇಸಪರಮೇಟ್ಠಿ ಅಕ್ಖರಾ ಚಉಸು ಪತ್ತೇಸು || ೪೬೭ ||
ರಯಣತ್ತಯಪಢಮಾ ವಿ ವಣ್ಣಾ ಣಿಸಿಊಣ ಸೇಸಪತ್ತೇಸು ||
ಸಿರವಯಣಕಂಠಹಿಯಪಿ ಣಾಹಿಪಯೇಸಮ್ಮಿ ಝಾಯವ್ವಾ || ೪೬೮ ||
ಅಹವಾ ಣಿಲಾಡದೇಸೇ ಪಢಮಂ ಬಿದಿಯಂ ವಿಸುದ್ಧದೇಸಮ್ಮಿ ||
ದಾಹಿಣದಿಸಾಇ ಣಿಸಿಊಣ ಸೇಸಕಮಲಾಣಿ ಝಾಇಜ್ಜೋ ||೪೬೯||

ಅಸಿಆಉಸಾ ಸುವರ್ಣಾ ಧ್ಯಾತವ್ಯಾ ಅನಂತಶಕ್ತಿಪ್ರಾಪ್ತಾಃ ||
ಚತುಷ್ಪತ್ರಕಮಲಮಧ್ಯೇ ಪ್ರಥಮಾದಿಕ್ರಮೇಣ ನಿವೇಶ್ಯ ||
ತೇ ಚೈವ ವರ್ಣಾ ಅಷ್ಟದಲಪಂಚಕಮಲಾನಾಂ ಮಧ್ಯದೇಶೇಷು ||
ನಿವೇಶ್ಯ ಶೇಷಪರಮೇಷ್ಠ್ಯಕ್ಷರಾಶ್ಚತುರ್ಷು ಪತ್ರೇಷು ||
ರತ್ನತ್ರಯಪ್ರಥಮಾ ಯೇ ವರ್ಣಾ ನಿವೇಶ್ಯ ಶೇಷಪತ್ರೇಷು ||
ಶಿರೋವದನಕಂಠಹೃದಯೇ ನಾಭಿಪ್ರದೇಶೇ ಧ್ಯಾತವ್ಯಾಃ ||
ಅಥವಾ ಲಲಾಟದೇಶೇ ಪ್ರಥಮಂ ದ್ವಿತೀಯಂ ವಿಶುದ್ಧದೇಶೇಷು ||
ದಕ್ಷಿಣಾದಿದಿಕ್ಷು ನಿವೇಶ್ಯ ಶೇಷಕಮಲಾನಿ ಧ್ಯಾಯೇತ್ ||

ಅರ್ಥ:—ಅನಂತಶಕ್ತಿಯುಳ್ಳ ಅಸಿ ಆ ಉಸಾ ಈ ಐದು ಉತ್ತಮವಾದ ವರ್ಣಗಳನ್ನು ಕ್ರಮದಿಂದ ಚತುಷ್ಪತ್ರಕಮಲದಲ್ಲಿ ಸ್ಥಾಪನೆಯನ್ನು ಮಾಡಿ, [ ಅಂದರೆ ಮಧ್ಯಕರ್ಣಿಕೆಯಲ್ಲಿ ಅ ( ಅರಹಂತ ), ಅದರ ಹೊರಗಿನ ಪೂರ್ವದಳದಲ್ಲಿ ಸಿ ( ಸಿದ್ಧ ), ದಕ್ಷಿಣದದಳದಲ್ಲಿ ಆ ( ಆಚಾರ್ಯ ), ಪಶ್ಚಿಮದದಳದಲ್ಲಿ ಉ ( ಉಪಾಧ್ಯಾಯ ), ಉತ್ತರದಳದಲ್ಲಿ ಸಾ ( ಸಾಧು ) ಹೀಗೆ ಕ್ರಮದಿಂದ ಸ್ಥಾಪನೆಯನ್ನು ಮಾಡಿ ] ಅದರ ಧ್ಯಾನ ಮಾಡಬೇಕು. ಅಥವಾ ಅವೇ ವರ್ಣಗಳನ್ನು ಅಷ್ಟದಲಕಮಲದ ದಳದಲ್ಲಿ ( ಚತುಷ್ಪದ ಕಮಲದಂತೆ ) ಸ್ಥಾಪನೆಯನ್ನು ಮಾಡಿ, ಉಳಿದ

ನಾಲ್ಕು ದಳಗಳಲ್ಲಿ ದ ( ದರ್ಶನ ), ಜ್ಞಾ ( ಜ್ಞಾನ ), ಚಾ ( ಚಾರಿತ್ರ ), ತ ( ತಪ ) ಈ ನಾಲ್ಕು ವರ್ಣಗಳನ್ನು ಕ್ರಮದಿಂದ ಸ್ಥಾಪಿಸಿ ಮಸ್ತಕ, ಮುಖ, ಕಂಠ, ಹೃದಯ, ನಾಭಿಕಮಲ ಈ ಐದು ಸ್ಥಳಗಳಲ್ಲಿ ಐದು ಅಷ್ಟದಲ ಕಮಲದ ಧ್ಯಾನ ಮಾಡಬೇಕು. ಅಥವಾ ಮೊದಲನೆಯ ಕಮಲವನ್ನು ತನ್ನ ಹಣೆಯ ಮೇಲೆ ಸ್ಥಾಪಿಸಿ, ಉಳಿದವುಗಳನ್ನು ಕ್ರಮದಿಂದ ತಲೆಯ ಮೇಲೆ ಮತ್ತು ಅದರ ದಕ್ಷಿಣ ಕಡೆಯ ಶುದ್ಧ ಪ್ರದೇಶಗಳಲ್ಲಿ ಸ್ಥಾಪನೆಯನ್ನು ಮಾಡಿ ಅವುಗಳ ಧ್ಯಾನ ಮಾಡಬೇಕು.

ಅಟ್ಠದಳಕಮಳಮಜ್ಝೇ ಝಾಏಜ್ಜ ಹ ದುರೇಹಬಿಂದುಜುಯಂ ॥
ಸಿರಿಪಂಚಣಮೋಕಾರೇಹಿಂ ವಳಇಯಂ ಪತ್ತರೇಹಾಸು ॥ ೪೩೦ ॥
ಣಿಸಿಊಣ ಣಮೋ ಅರಹಂತಾಣಂ ಪತ್ತಾಇಮಟ್ಠವಗ್ಗೇಹಿಂ ॥
ಭಣಿಊಣ ವೇಢಿಊಣ ಯ ಮಾಯಾಬೀಏಣ ತಂ ತಿಉಣಂ ॥೪೩೧॥

ಅಷ್ಟದಲಕಮಲಮಧ್ಯೇ ಧ್ಯಾಯೇತ ಹಂ ದ್ವಿರೇಫಬಿಂದುಯುತಮ್ ॥
ಶ್ರೀಪಂಚನಮಸ್ಕಾರೈರ್ವಲಯಿತಂ ಪತ್ರರೇಖಾಸು ॥
ನಿವೇಶ್ಯ " ಣಮೋ ಅರಹಂತಾಣಂ " ಪತ್ರಾದಿಕಮಷ್ಟವರ್ಗೈಃ
ಭಣಿತ್ವಾ ವೇಷ್ಟಯಿತ್ವಾ ಚ ಶ್ರೀಬೀಜೇನ ತಂ ತ್ರಿಕೋಣಮ್ ॥

ಅರ್ಥ:—ಅಷ್ಟದಲ ಕಮಲದ ಕರ್ಣಿಕೆಯ ಮೇಲೆ ಎರಡು ರೇಫಗಳಿಂದಲೂ ಒಂದು ಶೂನ್ಯದಿಂದಲೂ ಯುಕ್ತವಾದ ಹ ( ರ್ಹಂ ) ಸ್ಥಾಪನೆಯನ್ನು ಮಾಡಿ, ಆ ಕರ್ಣಿಕೆಯ ಸುತ್ತಲಿನ ದಳದೊಳಗೆ ಒಂದು ವಲಯ ಮಾಡಿ, ಆ ವಲಯದ ಮೇಲೆ " ಓಂ ಣಮೋ ಅರಹಂತಾಣಂ " ಇತ್ಯಾದಿ ಪಂಚನಮಸ್ಕಾರ ಮಂತ್ರವನ್ನು ವಲಯಾಕಾರವಾಗಿ ಸ್ಥಾಪಿಸಬೇಕು. ಎಂಟು ದಳದ ಎಂಟು ವರ್ಗ ( ೧ ಅಆ ಇಈ ಉಊ ಋೠ ಌೡ ಏಐ ಓಔ ಅಂಅಃ, ೨ ಕಖಗಘಙ, ೩ ಚಛಜಝಞ, ೪ ಟಠಡ ಢಣ, ೫ ತಥದಧನ, ೬ ಪಫಬಭಮ, ೭ ಯರಲವ, ೮ ಶಷಸಹಳಕ್ಷ ) ಗಳನ್ನು ಸ್ಥಾಪಿಸಿ, ಆ ಕಮಲದ ಧ್ಯಾನ ಮಾಡಬೇಕು.

ಆಯಾಸಫಳಿಹಸಂಣಿಹತಣುಪ್ಪಹಾಸಳಿಳಣಿಹಿಣಿಬುಡಂತಂ ॥
ಣರಸುರತಿರೀಡಮಣಿಕಿರಣಸಮೂಹರಂಜಿಯಪಯಪಂಬುರುಹೋ ॥
ವರಅಟ್ಠಪಾಡಿಹಾರೇಹಿಂ ಪರಿಉಡೋ ಸಮವಸರಣಮಜ್ಝಗಓ ॥
ಪರಮಪ್ಪಾಣಂತಚಉಟ್ಠಯಾಣಿಓ ಪವಣಮಗ್ಗತ್ಥೋ ॥ ೪೩೩ ॥
ಏರಿಸ ಉಕಿಟ್ಠ ಯ ಪರಿವಾರವಜ್ಜಿಓ ಖೀರಜಲಸಿಮಜ್ಝೇವ ॥
ವರಖೀರವಣ್ಣಕಂದುಟ್ಠಕಣ್ಣಿಯಾಮಜ್ಝದೇಸತ್ಥೋ ॥ ೪೩೪ ॥
ಖೀರುವಹಿಸಲಿಲಧಾರಾಸಿಸೇಯಧವಲೀಕಯಂಗಸವ್ವಂಗೋ ॥
ಜಂ ಝಾಇಜ್ಜಇ ಏವಂ ರೂವತ್ಥಂ ಜಾಣ ತಂ ಝಾಣಂ ॥ ೪೩೫ ॥

ಆಕಾಶಸ್ಫಟಿಕಸನ್ನಿಭತನುಪ್ರಭಾಸಲಿಲನಿಧಿಬ್ರುಡಂತಮ್ ॥
ನರಸುರತಿರೀಟಮಣಿಕಿರಣಸಮೂಹರಂಜಿತಪದಾಂಬುರುಹಃ ॥
ವರಾಷ್ಟಪ್ರಾತಿಹಾರ್ಯೈಃ ಪರಿವೃತ: ಸಮವಸರಣಮಧ್ಯಗತಃ ॥
ಪರಮಾತ್ಮಾನಂತಚತುಷ್ಟಯಾನ್ವಿತ: ಪವನಮಾರ್ಗಸ್ಥ: ॥
ಈದೃಗುತ್ಕೃಷ್ಟಶ್ಚ ಪರಿವಾರವರ್ಜಿತಃ ಕ್ಷೀರಜಲಧಿಮಧ್ಯ ಇವ ॥
ವರಕ್ಷೀರವರ್ಣಕಂದೋತ್ಥ ಕರ್ಣಿಕಾಮಧ್ಯದೇಶಸ್ಥ: ॥
ಕ್ಷೀರೋದಧಿಸಲಿಲಧಾರಾಭಿಷೇಕಧವಲೀಕೃತಾಂಗಸರ್ವಾಂಗಃ ॥
ಯಧ್ಧ್ಯಾಯತ ಏವಂ ರೂಪಸ್ಥಂ ಜಾನೀಹಿ ತಧ್ಧ್ಯಾನಮ್ ॥

ಅರ್ಥಃ— ಆಕಾಶ ಅಥವಾ ಸ್ಫಟಿಕದ ಹಾಗೆ ಸ್ವಚ್ಛವಾದಂಥ ತನ್ನ ದೇಹ ಕಾಂತಿಯೆಂಬ ಸಮುದ್ರದಲ್ಲಿ ಮುಳಗಿದವನಾಗಿಯೂ ವಿಸಯವುಳ್ಳ ಮನುಷ್ಯ ಮತ್ತು ದೇವ ಇವರ ಕಿರೀಟದೊಳಗಿನ ರತ್ನದ ಕಿರಣಗಳಿಂದ ಪಾದಗಳು ಚಿತ್ರವಿಚಿತ್ರವಾಗಿಯೂ ಎಂಟು ಪ್ರಾತಿಹಾರ್ಯಗಳಿಂದ ಕೂಡಿದವನಾಗಿಯೂ ಸಮವಸರಣದ ಮಧ್ಯದಲ್ಲಿ ಅಂತರವುಳ್ಳವನಾಗಿಯೂ ಪುತ್ರಮಿತ್ರರಪರಿವಾರ ರಹಿತನಾಗಿಯೂ ಉತ್ಕೃಷ್ಟವಾದ ಬಿಳೀಕಮಲದ ಮೇಲೆ ವಿರಾಜಮಾನನಾದ್ದರಿಂದ ಕ್ಷೀರಸಮುದ್ರದ ಮಧ್ಯಭಾಗದಲ್ಲಿ ವಿರಾಜಮಾನಾಗಿರುವನೋ ಏನೋ, ಎಂಬುವ ಹಾಗೆ ಕಾಣಿಸುವವನಾಗಿಯೂ ಕ್ಷೀರಸಮುದ್ರದ ಶುಭ್ರವಾದ ಜಲದ ಅಭಿಷೇಕದಿಂದ ಸರ್ವಾಂಗವು ಶುಭ್ರವಾಗಿಯೂ ಅನಂತಚತುಷ್ಟಯದಿಂದ ಯುಕ್ತನಾಗಿಯೂ ಆದ ಪರಮಾತ್ಮನ ಧ್ಯಾನಮಾಡುವದು ರೂಪಸ್ಥ ಧ್ಯಾನವು.

## ರೂಪಾತೀತಧ್ಯಾನವು.

ವಣ್ಣರಸಗಂಧಫಾಸೇಹಿಂ ವಜ್ಜಿಓ ಣಾಣದಂಸಣಸರೂಓ ॥
ಝಾಇಜ್ಜಇ ಏವಂ ಜಂ ತಂ ಝಾಣಂ ರೂವರಹಿಯೇತ್ತಿ ॥ ೪೨೬ ॥
ಅಹವಾ ಆಗಮಣೋಆಗಮಾಇಭೇಏಹಿಂ ಸುತ್ತಮಗ್ಗೇಣ ॥
ಣಾಊಣ ಭಾವಪೂಜಾ ಕಾಯವ್ವಾ ದೇಸವಿರಏಹಿಂ ॥ ೪೨೭ ॥

ವರ್ಣರಸಗಂಧಸ್ಪರ್ಶೈರ್ವರ್ಜಿತೋ ಜ್ಞಾನದರ್ಶನಸ್ವರೂಪಃ ॥
ಧ್ಯಾಯತೇ ಏವಂ ಯತ್ತದ್ಧ್ಯಾನಂ ರೂಪರಹಿತಮಿತಿ ॥
ಅಥವಾ ಆಗಮನೋಆಗಮಾದಿಭೇದೈಃ ಶ್ರುತಮಾರ್ಗೇಣ ॥
ಜ್ಞಾತ್ವಾ ಭಾವಪೂಜಾ ಕರ್ತವ್ಯಾ ದೇಶವಿರತೈಃ ॥

ಅರ್ಥ:—ಐದು ವರ್ಣ, ಐದು ರಸ, ಎರಡು ಗಂಧ ಮತ್ತು ಎಂಟು ಸ್ಪರ್ಶ ಇವುಗಳಿಂದ ರಹಿತನಾಗಿಯೂ ಜ್ಞಾನ-ದರ್ಶನವೇ ಅವನ ಸ್ವರೂಪವಾಗಿಯೂ ಅಂದರೆ ರೂಪರಹಿತನಾಗಿಯೂ ಆದ ಆತ್ಮನ ಸ್ವರೂಪವನ್ನು ಬಯಸುವದಕ್ಕೆ ರೂಪಾತೀತ

ಧ್ಯಾನ ಅನ್ನುತ್ತಾರೆ. ಇಲ್ಲವೇ ಸೋಅಗಮು ಮುಂತಾದ ಭೇದಗಳಿಂದ ಅನೇಕ ಪ್ರಕಾರದ ಭಾವಪೂಜೆಯನ್ನು ಶಾಸ್ತ್ರಾಧಾರದಿಂದ ತಿಳಿದು, ದೇಶವಿರತ ಶ್ರಾವಕನು ಮಾಡಬೇಕು.

ಏಸಾ ಛವ್ವಿಹಪೂಜಾ ಣಿಚ್ಚಂ ಧಮ್ಮಾಣುರಾಯರತ್ತೇಹಿಂ ॥
ಜಹಜೋಗ್ಗಂ ಕಾಯವ್ವಾ ಸವ್ವೇಹಿಂ ದೇಸವಿರಏಹಿಂ ॥ ೪೭೮ ॥

ಏಷಾ ಷಡ್ವಿಧಾ ಪೂಜಾ ನಿತ್ಯಂ ಧರ್ಮಾನುರಾಗರಕ್ತೈಃ ॥
ಯಥಾಯೋಗ್ಯಂ ಕರ್ತವ್ಯಾ ಸರ್ವೈರ್ದೇಶವಿರತೈಃ ॥

ಅರ್ಥಃ—ಈ ಮೇರೆಗೆ ಈ ಆರು ಪ್ರಕಾರದ ಪೂಜೆಯನ್ನು ಧರ್ಮದ ಬಗ್ಗೆ ಪ್ರೀತಿಯುಳ್ಳ ದೇಶವಿರತ ಶ್ರಾವಕನು ನಿತ್ಯದಲ್ಲಿ ನಿಯಮಗಳಿಗೆ ಅನುಸರಿಸಿ ಮಾಡಬೇಕು.

## ಪೂಜೆಯ ಫಲವು.

ಏಯಾರಸಂಗಧಾರೀ ಜೀಹಸಹಸ್ಸೇಣ ಸುರವರಿಂದೋ ವಿ ॥
ಪೂಜಾಫಲಂ ಣ ಸಕ್ಕೋ ಣಿಸ್ಸೇಸಂ ವಣ್ಣಿಉಂ ಜಮ್ಹಾ ॥ ೪೭೯ ॥
ತಮ್ಹಾ ಹಂ ಣಿಯಸತ್ತೀಏ ಥೋಯವಯಣೇಣ ಕಿಂಪಿ ವೋಚ್ಛಾಮಿ ॥
ಧಮ್ಮಾಣುರಾಯರತ್ತೋ ಭವಿಯಜಣೋ ಹೋಇಜೇ ಸವ್ವೋ ॥೪೮೦॥

ಏಕಾದಶಾಂಗಧಾರೀ ಜಿಹ್ವಾಸಹಸ್ರೇಣ ಸುರೇಂದ್ರೋ ಪಿ ॥
ಪೂಜಾಫಳಂ ನ ಶಕ್ತೋ ನಿಃಶೇಷಂ ವರ್ಣಿತುಂ ಯಸ್ಮಾತ್ ॥
ತಸ್ಮಾದಹಂ ನಿಜಶಕ್ತ್ಯಾ ಸ್ತೋಕವಚನೇನ ಕಿಮಪಿ ವಕ್ಷ್ಯಾಮಿ ॥
ಧರ್ಮಾನುರಾಗರಕ್ತೋ ಭವ್ಯಜನೋ ಭವತು ಸರ್ವಃ ॥

ಅರ್ಥಃ—ಹನ್ನೊಂದು ಅಂಗ ಶಾಸ್ತ್ರವನ್ನು ಬಲ್ಲಂಥ ಮುನಿಯಾಗಲಿ, ಅಥವಾ ಸಹಸ್ರನಾಲಿಗೆಯುಳ್ಳ ದೇವೇಂದ್ರನಾಗಲಿ ಪೂಜೆಯ ಫಲವರ್ಣನೆಯನ್ನು ಮಾಡುವದಕ್ಕೆ ಅಸಮರ್ಥರಿದ್ದಾರೆ. ಆದ್ದರಿಂದ ನನ್ನ ಶಕ್ತಿಯಂತೆ ಸ್ವಲ್ಪ ಭಾಷಣದಿಂದ ಸ್ವಲ್ಪ ಹೇಳುತ್ತೇನೆ; ಅದನ್ನು ಕೇಳಿ ಭವ್ಯಜನರು ಧರ್ಮದ ಬಗ್ಗೆ ಪ್ರೀತಿಯುಳ್ಳವರಾಗಲಿ.

ಕುಂಥುಂಭರಿದಳಮೇತ್ತೇ ಜಿಣಭವಣೇ ಜೋ ಠವೇಇ ಜಿಣಪಡಿಮಂ॥
ಸರಿಸವಮೇತ್ತಂ ಪಿ ಲಹಇ ಸೋ ಣರೋ ತಿತ್ಥಯರಂ ಪುಣ್ಣಂ ॥೪೮೧॥

ಕುಂಥುಂಭರೀದಲಮಾತ್ರೇ ಜಿನಭವನೇ ಯಃ ಸ್ಥಾಪಯತಿ ಜಿನಪ್ರತಿಮಾಮ್ ॥
ಸರ್ಷಪಮಾತ್ರಮಪಿ ಲಭತೇ ಸ ನರಸ್ತೀರ್ಥಂಕರಂ ಪುಣ್ಯಮ್ ॥

ಅರ್ಥಃ—ಕೋತಂಬರಿಯ ಎಲೆಯಷ್ಟು ಜಿನಮಂದಿರವನ್ನು ಮಾಡಿ, ಅದರೊಳಗೆ ಸಾಸಿವೇ ಕಾಳಿನಷ್ಟಾದರೂ ಸಣ್ಣ ಜಿನಬಿಂಬದ ಸ್ಥಾಪನೆಯನ್ನು ಯಾವನು

ಮಾಡುವನೋ, ಅವನಿಗೆ ತೀರ್ಥಂಕರರ ಪದವು ಪ್ರಾಪ್ತವಾಗುವ ಪುಣ್ಯವು ಬಂಧಿಸುತ್ತದೆ.

ಜೇ ಪುಣ ಜಿಣಂದಭವಣಂ ಸಮುಣ್ಣಯಂ ಪರಿಹಿತೋರಣಸಮಗ್ಗಂ ॥
ಣಿವ್ವಾವಇ ತಸ್ಸ ಫಲಂ ಕೋ ಸಕ್ಕಇ ವಣ್ಣಿಉಂ ಸಯಳಂ ॥೪೮೨॥

ಯಃ ಪುನರ್ಜಿನೇಂದ್ರಭವನಂ ಸುಮುನ್ನತಂ ಪರಿಧಿತೋರಣಸಮಗ್ರಮ್ ॥
ನಿರ್ಮಾಪಯತಿ ತಸ್ಯ ಫಲಂ ಕಃ ಶಕ್ನೋತಿ ವರ್ಣಿತುಂ ಸಕಲಮ್ ॥

ಅರ್ಥ:—ಅಂದಮೇಲೆ ಗೋಪುರ ಕಮಾನಾದಿಗಳಿಂದ ಜಿನಮಂದಿರವನ್ನು ಎತ್ತರವಾಗಿ ಪೂರೈಸಿದವನಿಗೆ ಎಷ್ಟು ಪುಣ್ಯವು ಪ್ರಾಪ್ತವಾಗುತ್ತದೆಂಬದನ್ನು ಯಾರು ಹೇಳಬಲ್ಲರು?

## ಅಷ್ಟದ್ರವ್ಯಪೂಜೆಯ ಫಲವು.

ಜಳಹಾರಾಣಿಖ್ಖವಣೇಣ ಪಾವಮಳಸೋಹಣಂ ಹವ್ವೇ ॥
ಣಿಯಮೇಣ ಚಂದಣಲೇವೇಣ ಣರೋ ಜಾಯಇ ಸೋಹಗ್ಗಸಂಪಣ್ಣೋ ॥

ಜಲಧಾರಾನಿಕ್ಷೇಪಣೇನ ಪಾಪಮಲಶೋಧನಂ ಭವೇತ್ ॥
ನಿಯಮೇನ ಚಂದನಲೇಪೇನ ನರೋ ಜಾಯತೇ ಸೌಭಾಗ್ಯಸಂಪನ್ನಃ ॥

ಅರ್ಥಃ—ಜಿನೇಂದ್ರನ ಪದಕಮಲಗಳ ಮುಂದೆ ಯಾವನು ಜಲಧಾರೆಯನ್ನು ಬಿಡುವನೋ, ಅವನ ಪಾಪವು ತೊಳೆದು ಹೋಗುತ್ತದೆ. ಮತ್ತು ಉತ್ಕೃಷ್ಟವಾದ ಚಂದನದ ಗಂಧದ ಲೇಪದಿಂದ ಮನುಷ್ಯನು ಭಾಗ್ಯವಂತನಾಗುತ್ತಾನೆ.

ಜಾಯಇ ಅಖ್ಖಯಣಿಹಿರಯಣಸಾಮಿಓ ಅಖ್ಖಏಹಿ ಅಖ್ಖೋಹೋ ॥
ಅಖ್ಖೀಣಲದ್ಧಿಜುತ್ತೋ ಅಖ್ಖಯಸೋಖ್ಖಂ ಚ ಪಾವೇಈ ॥ ೪೮೪ ॥

ಜಾಯತೇ ಕ್ಷಯನಿಧಿರತ್ನಸ್ವಾಮೀ ಅಕ್ಷತೈರಕ್ಷೋಭ್ಯಃ ॥
ಅಕ್ಷೀಣಲಬ್ಧಿಯುಕ್ತೋಕ್ಷಯಸೌಖ್ಯಂ ಚ ಪ್ರಾಪ್ನೋತಿ ॥

ಅರ್ಥ:—ಅಕ್ಷತೆಯಿಂದ ಪೂಜೆಯನ್ನು ಮಾಡುವ ಮಹಾತ್ಮನು ಒಂಭತ್ತು ನಿಧಿಗಳಿಗೂ ಹದಿನಾಲ್ಕು ರತ್ನಗಳಿಗೂ ಸ್ವಾಮಿಯಾಗುತ್ತಾನೆ. ಅವನ ಆನಂದದ ವೃತ್ತಿಯು ಎಂದೂ ನಷ್ಟವಾಗುವದಿಲ್ಲ. ಅವನಿಗೆ ಅಕ್ಷೀಣ ಅಂದರೆ ಎಂದೂ ನಾಶವಾಗದ ಲಬ್ಧಿ (ಜ್ಞಾನ ದರ್ಶನ) ಪ್ರಾಪ್ತವಾಗುತ್ತದೆ. ಆದರ ಯೋಗದಿಂದ ಅವನು ಕಡೆಗೆ ನಿರ್ವಾಣಪದವನ್ನು ಪಡೆಯುತ್ತಾನೆ.

ಕುಸುಮೇಹಿಂ ಕುಸೇಸಯವಯಣತರುಣೀಜಣಣಯಣಕುಸುಮವರಮಾ-
ಲಾ-|ವಳಯೇಣಚ್ಚಿಯದೇಹೋ ಜಾಯಇ ಕುಸುಮಾಉಹೋ ಚೇವ॥೪೮೫

ಕುಸುಮೈಃ ಕುಶೇಶಯವದನತರುಣೀಜನನಯನಕುಸುಮವರಮಾಲಾ- ||
ವಲಯೇನಾರ್ಚಿತದೇಹೋ ಜಾಯತೇ ಕುಸುಮಾಯುಧಶ್ಶೈವ ||

ಅರ್ಥ:—ಪುಷ್ಪಗಳಿಂದ ಪೂಜಿಸುವ ಮನುಷ್ಯನು, ಕಮಲದಂತೆ ಮುಖವುಳ್ಳ ತರುಣ ಸ್ತ್ರೀಯರ ನೇತ್ರಗಳೆಂಬ ಪುಷ್ಪಮಾಲೆಗಳಿಂದ ಯಾವನ ದೇಹವು ಪೂಜಿಸಲ್ಪಟ್ಟಿದೆಯೋ ಅಥವಾ ತರುಣ ಸ್ತ್ರೀಯರು ಪ್ರೀತಿಯಿಂದ ನೋಡುವರೋ ಅಂಥ ಸಾಕ್ಷಾತ್ ಮದನನೋ ಏನೋ, ಅನ್ನುವ ಹಾಗೆ ಕಾಣಿಸುತ್ತಾನೆ.

ಜಾಯಇ ಣಿವಿಜ್ಜದಾಣೇಣ ಸತ್ತಿಗೋ ಕಂತಿತೇಯಸಂಪಣೋ ||
ಲಾವಣ್ಣಜಲಹಿವೇಳಾತರಂಗಸಂಪಾವಿಯಸರೀರೋ || ೪೮೬ ||

ಜಾಯತೇ ನೈವೇದ್ಯದಾನೇನ ಶಕ್ತಿಮಾನ್ ಕಾಂತಿತೇಜಃಸಂಪನ್ನಃ ||
ಲಾವಣ್ಯಜಲಧಿವೇಲಾತರಂಗಸಂಪ್ಲಾವಿತಶರೀರಃ ||

ಅರ್ಥ:- -ಪ್ರಭುವಿನ ಚರಣಕಮಲಗಳ ಮುಂದೆ ಉತ್ತಮವಾದ ನೈವೇದ್ಯವನ್ನು ಅರ್ಪಿಸುವ ಮನುಷ್ಯನು ಶಕ್ತಿವಂತನೂ ಕಾಂತಿಯುಳ್ಳವನೂ ತೇಜಸ್ವಿಯೂ ಮತ್ತು ಸೌಂದರ್ಯರೂಪೀ ಸಮುದ್ರದ ದಂಡೆಯ ಮೇಲಿನ ತೆರೆಗಳಿಂದ ತೊಯ್ಯಲ್ಪಟ್ಟವನೂ ಅರ್ಥದಲ್ಲಿ ಅತಿ ಸುಂದರನಾಗುತ್ತಾನೆ.

ದೀವೇಹಿಂ ದೀವಿಯಾಸೇಸಜೀವದವ್ವಾಇತಚ್ಚಸಬ್ಭಾವೋ ||
ಸಬ್ಭಾವಜಣಿಯಕೇವಳಪಈವತೇಏಣ ಹೋಇ ಣರೋ || ೪೮೭ ||

ದೀಪೈರ್ದೀಪಿತಾಶೇಷಜೀವದ್ರವ್ಯಾದಿತತ್ತ್ವಸದ್ಭಾವ: ||
ಸದ್ಭಾವಜನಿತಕೇವಲಪ್ರದೀಪತೇಜಸಾ ಭವತಿ ನರ: ||

ಅರ್ಥ:—ದೀಪಪೂಜೆಯ ಪುಣ್ಯದಿಂದ ಉತ್ಕೃಷ್ಟವಾದ ಭಾವನೆಯಿಂದ ಪ್ರಾಪ್ತವಾದ ಕೇವಲಜ್ಞಾನರೂಪೀ ಪ್ರದೀಪದ ಪ್ರಕಾಶದ ಯೋಗದಿಂದ ಯಾವನು ಜೀವದ್ರವ್ಯ ಮುಂತಾದ ತತ್ತ್ವಗಳ ಸ್ವರೂಪವನ್ನು ಪ್ರಕಾಶಿಸಿದ್ದಾನೋ, ಅಂಥ ಕೇವಲಜ್ಞಾನಿಯಾಗುತ್ತಾನೆ.

ಧೂವೇಣ ಸಿಸಿರಯರಧವಳಕಿತ್ತಿಧವಲಿಯಜಯತ್ತಓ ಪುರಿಸೋ ||
ಜಾಯಇ ಫಳೇಹಿ ಸಂಪತ್ತಪರಮನಿವ್ವಾಣಸೋಕ್ಖಫಳೋ || ೪೮೮ ||

ಧೂಪೇನ ಶಿಶಿರಕರಧವಲಕೀರ್ತಿಧವಲಿತಜಗತ್ತ್ರಯಃ ಪುರುಷಃ ||
ಜಾಯತೇ ಫಲೈಃ ಸಂಪ್ರಾಪ್ತಪರಮನಿರ್ವಾಣಸೌಖ್ಯಫಲ: ||

ಅರ್ಥ:—ಧೂಪಪೂಜೆಯಿಂದ ಮನುಷ್ಯನು ಚಂದ್ರಕಿರಣದಂತಿರುವ ನಿರ್ಮಲವಾದ ಕೀರ್ತಿಯಿಂದ ಮೂರೂ ಲೋಕವನ್ನು ಸ್ವಚ್ಛಮಾಡುವಂಥವನು ಅಂದರೆ ಯಾವನ ಪುಣ್ಯಕೀರ್ತಿಯು ಜಗತ್ತಿನಲ್ಲಿ ಹಬ್ಬಿರುತ್ತದೆ. ಅಂಥವನಾಗುತ್ತಾನೆ ಮತ್ತು

ಶಾಸ್ವತವಾದ ಸೌಖ್ಯವು ಫಲಗಳ ಪೂಜೆಯಿಂದ ದೊರೆಯುತ್ತದೆ. ಅಂದರೆ ಅವನು ಮುಕ್ತನಾಗುತ್ತಾನೆ.

ಘಂಟಾಹಿಂ ಘಂಟಾಸದ್ದಾಉಲೇಸು ಪಉರಚ್ಛರಾಣಮಜ್ಝಮ್ಮಿ ||
ಸಂಕೀಡಇ ಸುರಸಂಘಾಯಸೇವಿಓ ವರವಿಮಾಣೇಸು || ೪೮೯ ||

ಘಂಟಾಭಿರ್ಘಂಟಾಶಬ್ದಾಕುಲೇಷು ಪ್ರಚುರಾಪ್ಸರಸಾಂ ಮಧ್ಯೇ ||
ಸಂಕ್ರೀಡತಿ ಸುರಸಂಘಾತಸೇವಿತೋ ವರವಿಮಾನೇಷು ||

ಅರ್ಥ:—ಜಿನಮಂದಿರದಲ್ಲಿ ಗಂಟೆಯನ್ನು ಅರ್ಪಿಸುವ ಮನುಷ್ಯನು ಗಂಟೆಯನಾದದಿಂದ ವ್ಯಾಪ್ತವಾದ ವಿಮಾನದಲ್ಲಿ ದೇವತೆಗಳಿಂದ ಸೇವಿಸುವವನಾಗುತ್ತಾನೆ; ಅಂದರೆ ಇಂದ್ರನಾಗಿ ಅನೇಕ ಅಪ್ಸರ ಸ್ತ್ರೀಯರಲ್ಲಿ ಕ್ರೀಡೆಯನ್ನು ಮಾಡುತ್ತಾನೆ.

ಛತ್ತೇಹಿಂ ಏಯಛತ್ತಂ ಭುಂಜಇ ಪುಹವೀಂ ಸವತ್ತಪರಿಹೀಣೋ ||
ಚಾಮರದಾಣೇಣ ತಹಾ ವಿಜ್ಜಿಜ್ಜಇ ಚಮರಣಿವಹೇಹಿಂ || ೪೯೦ ||

ಛತ್ರೈರೇಕಛತ್ರಾಂ ಭುನಕ್ತಿ ಪೃಥ್ವೀಂ ಶತ್ರುಪರಿಹೀನಃ ||
ಚಾಮರದಾನೇನ ತಥಾ ವಿಜಯತೇ ಚಮರನಿವಹೈಃ ||

ಅರ್ಥ:—ಜಿನೇಶ್ವರನಿಗೆ ಛತ್ರವನ್ನು ಅರ್ಪಿಸುವ ಭವ್ಯನು ಎರಡನೇ ಜನ್ಮದಲ್ಲಿ ಶತ್ರುರಹಿತನಾದ ಅರಸನಾಗಿ ಎಲ್ಲ ಪೃಥ್ವಿಗೆ ಒಬ್ಬನೇ ಅಧಿಪತಿಯಾಗುತ್ತಾನೆ. ಚಾಮರದಾನದಿಂದ ಚಾಮರಗಳಿಂದ ಸೇವಿಸಲ್ಪಡುವವನಾಗುತ್ತಾನೆ; ಅಂದರೆ ರಾಜನಾಗುತ್ತಾನೆ.

ಅಹಿಸೇಯಫಳೇಣ ಣರೋ ಅಹಿಸಿಂಚಿಜ್ಜಇ ಸುದಂಸಣಸ್ಸುವರಿಂ ||
ಖೀರೋಯಜಳೇಣ ಸುರಿಂದಪ್ಪಮುಹದೇವೇಹಿಂ ಭತ್ತೀಏ || ೪೯೧ ||

ಅಭಿಷೇಕಫಲೇನ ನರೋಭಿಷಿಜ್ಯತೇ ಸುದರ್ಶನಸ್ಯೋಪರಿ ||
ಕ್ಷೀರೋದಜಲೇನ ಸುರೇಂದ್ರಪ್ರಮುಖದೇವೈರ್ಭಕ್ತ್ಯಾ ||

ಅರ್ಥ:—ಜಿನೇಂದ್ರನಿಗೆ ಅಭಿಷೇಕ ಮಾಡುವ ಮನುಷ್ಯನು ಅನ್ಯ ಜನ್ಮದಲ್ಲಿ ಸುದರ್ಶನ ಪರ್ವತದ ಮೇಲೆ ದೇವೇಂದ್ರ ಮುಂತಾದ ದೇವತೆಗಳಿಂದ ಕ್ಷೀರಸಮುದ್ರದ ಜಲದಿಂದ ಅಭಿಷೇಕ ಮಾಡಿಸಿಕೊಳ್ಳುತ್ತಾನೆ; ಅಂದರೆ ತೀರ್ಥಂಕರನಾಗುತ್ತಾನೆ.

ವಿಜಯಪಡಾಏಹಿಂ ಣರೋ ಸಂಗಾಮಮುಹೇಸು ವಿಜಇ ಉ ಹೋಇ ||
ಛಖಂಡವಿಜಯಣಾಹೋ ಣಿಪ್ಪಡಿವಕ್ಖೋ ಜಸಸ್ಸೀ ಯ || ೪೯೨ ||

ವಿಜಯಪತಾಕಾಭಿರ್ನರಃ ಸಂಗ್ರಾಮಮುಖೇಷು ವಿಜಯೀ ಚ ಭವತಿ ||
ಷಟ್ಖಂಡವಿಜಯನಾಥೋ ನಿಃಪ್ರತಿಪಕ್ಷೋ ಯಶಸ್ವೀ ಚ ||

ಅರ್ಥ:—ಶ್ರೀ ಜಿನಮಂದಿರದಲ್ಲಿ ವಿಜಯಪತಾಕೆಯ ಧ್ವಜವನ್ನು ಅರ್ಪಣ ಮಾಡುವ ಮನುಷ್ಯನು ಎರಡನೆಯ ಜನ್ಮದಲ್ಲಿ ಯುದ್ಧದಲ್ಲಿ ಜಯ ಹೊಂದುವವನಾಗುತ್ತಾನೆ. ಷಟ್‌ಖಂಡವನ್ನು ಗೆದ್ದು ಶತ್ರುರಹಿತನಾಗಿಯೂ ಕೀರ್ತಿವಂತನಾಗಿಯೂ ಆಗುತ್ತಾನೆ; ಅಂದರೆ ಚಕ್ರವರ್ತಿಯಾಗುತ್ತಾನೆ.

ಕಿಂ ಜಂಪಿಏಣ ಬಹುಣಾ ತೀಸು ವಿ ಳೋಏಸು ಕಿಂಪಿ ಜಂ ಸೋಕ್ಖಂ ॥
ಪೂಜಾಫಳೇಣ ಸವ್ವಂ ಪಾವಿಜ್ಜಇ ಣತ್ಥಿ ಸಂದೇಹೋ ॥ ೪೯೩ ॥

ಕಿಂ ಜಲ್ಪಿತೇನ ಬಹುನಾ ತ್ರಿಷ್ವಪಿ ಲೋಕೇಷು ಕಿಮಪಿ ಯತ್ಸೌಖ್ಯಮ್ ॥
ಪೂಜಾಫಲೇನ ಸರ್ವಂ ಪ್ರಾಪ್ನೋತಿ ನಾಸ್ತಿ ಸಂದೇಹಃ ॥

ಅರ್ಥಃ—ಇನ್ನು ಬಹಳ ಹೇಳುವದೇನು? ಮೂರೂಲೋಕದಲ್ಲಿರುವ ಸೌಖ್ಯವೆಲ್ಲವೂ ಶ್ರೀ ಜಿನೇಶ್ವರನ ಪೂಜೆಯ ಫಲದಿಂದ ಉಂಟಾಗುತ್ತದೆ. ಇದರಲ್ಲಿ ಏನೂ ಸಂದೇಹವಿಲ್ಲ.

ಅಣುಪಾಳಿಊಣ ಏವಂ ಸಾವಯಧಮ್ಮಂ ತಓವಸಾಣಮ್ಮಿ ॥
ಸಲ್ಲೇಹಣಂ ಚ ವಿಹಿಣಾ ಕಾಊಣ ಸಮಾಹಿಣಾ ಕಾಳಂ ॥ ೪೯೪ ॥
ಸೋಹಮ್ಮಾಇಸು ಜಾಯಇ ಕಪ್ಪವಿಮಾಣೇಸು ಅಚ್ಚುಯಂತೇಸು ॥
ಉವವಾಯಗಿಹೇ ಕೋಮಳಸುಯಂಧಸಿಳಸಂಪುಟಸ್ಸಂತೇ ॥ ೪೯೫ ॥

ಅನುಪಾಲ್ಯೈವಂ ಶ್ರಾವಕಧರ್ಮಂ ತತೋವಸಾನೇ ॥
ಸಲ್ಲೇಖನಾಂ ಚ ವಿಧಿನಾ ಕೃತ್ವಾ ಸಮಾಧಿನಾ ಕಾಲಮ್ ॥
ಸೌಧರ್ಮಾದಿಷು ಜಾಯತೇ ಕಲ್ಪವಿಮಾನೇಷ್ವಚ್ಯುತಾಂತೇಷು ॥
ಉಪಪಾದಗೃಹೇ ಕೋಮಲಸುಗಂಧಶಿಲಾಸಂಪುಟಸ್ಯಾಂತೇ ॥

ಅರ್ಥ:—ಈ ಮೇರೆಗೆ ಕ್ರಮದಿಂದ ಒಂದರಿಂದ ಹನ್ನೊಂದು ನೆಲೆಗಳ ವರೆಗೆ ಶ್ರಾವಕ ಧರ್ಮವನ್ನು ಪಾಲಿಸಿ, ಕಡೆಗೆ ವಿಧಿಪೂರ್ವಕವಾಗಿ ಸಲ್ಲೇಖನವನ್ನು ಕೈಕೊಂಡು, ಶಾಂತಚಿತ್ತದಿಂದ ದೇಹವನ್ನು ಬಿಡುವ ಶ್ರಾವಕನು ಸೌಧರ್ಮಾದಿಯಿಂದ ಅಚ್ಯುತ ಸ್ವರ್ಗದ ವರೆಗೆ ಇರುವ ಯಾವದೊಂದು ಸ್ವರ್ಗದ ವಿಮಾನದಲ್ಲಾದರೂ ಹೋಗಿ ಉಪಪಾದ ಗೃಹದಲ್ಲಿ ಕೋಮಲ ಮತ್ತು ಸುಗಂಧವಾದ ಶಿಲೆಯ ಪುಟದಲ್ಲಿ ಹುಟ್ಟುತ್ತಾನೆ.

## ಸ್ವರ್ಗಲೋಕದ ಸುಖ.

ಅಂತೋಮುಹುತ್ತಕಾಳೇಣ ತಓ ಪಜ್ಜತ್ತಿಓ ಸಮಾಣೇಇ ॥
ದಿವ್ವಾಮಲದೇಹಧರೋ ಜಾಯಇ ಣವಜುವ್ವಣೋ ಚೇವ ॥ ೪೯೬ ॥

ಅಂತರ್ಮುಹೂರ್ತಕಾಲೇನ ತತಃ ಪರ್ಯಾಪ್ತೀಃ ಸಮಾಪ್ನೋತಿ ॥
ದಿವ್ಯಾಮಲದೇಹಧರೋ ಜಾಯತೇ ನವಯೌವನಶ್ಚೈವ ॥

ಅರ್ಥ:—ಸ್ವರ್ಗದಲ್ಲಿ ಜನಿಸಿದ ಕೂಡಲೆ, ಅಂತರ್ಮುಹೂರ್ತಕಾಲದಿಂದ ಆ ದೇವನಿಗೆ ಆಹಾರ, ಶರೀರ, ಇಂದ್ರಿಯ, ಶ್ವಾಸೋಚ್ಛ್ವಾಸ, ಭಾಷೆ, ಮತ್ತು ಮನ ಈ ಆರು ಪರ್ಯಾಪ್ತಿಗಳು ಪ್ರಾಪ್ತವಾಗಿ, ಅವನು ಸುಂದರನೂ ಪವಿತ್ರದೇಹವುಳ್ಳವನೂ ಪ್ರಾಯದವನೂ ಆಗುತ್ತಾನೆ.

ಸಮಚಉರಸಂಠಾಣೋ ರಸಾಇಧಾಉಹಿಂ ವಜ್ಜಿಯಸರೀರೋ ॥
ದಿಣಯರಸಹಸ್ಸತೇಓ ಣವಕುವಳಯಸುರಹಿಣಿಸ್ಸಾಸೋ ॥ ೪೯೭ ॥

ಸಮಚತುರಸಂಸ್ಥಾನೋ ರಸಾದಿಧಾತುರ್ಭಿರ್ವರ್ಜಿತಶರೀರ: ॥
ದಿನಕರಸಹಸ್ರತೇಜಾ ನವಕುವಲಯಸುರಭಿನಿಃಶ್ವಾಸ: ॥

ಅರ್ಥ:—ಆದೇವನ ದೇಹವು ಸಮಚತುರಸಂಸ್ಥಾನ ( ಸುಂದರ, ದೃಢ ಆಕೃತಿಯು ) ವುಳ್ಳದ್ದೂ ರಸ, ರಕ್ತ, ಮಾಂಸ, ಮೇದಸ್ಸು, ಅಸ್ಥಿ, ಮಜ್ಜಾ, ಶುಕ್ರ ( ವೀರ್ಯ ) ಈ ಏಳು ಧಾತುಗಳಿಂದ ರಹಿತವಾಗಿಯೂ ಸಹಸ್ರಸೂರ್ಯರಂತೆ ತೇಜಸ್ವಿಯೂ ಆಗುತ್ತದೆ. ಮತ್ತು ಅವನ ಶ್ವಾಸೋಚ್ಛ್ವಾಸವು ಅರಳಿದ ಕಮಲದ ಸುಗಂಧದಂತೆ ಇರುತ್ತದೆ.

ಪಡಿವುಜ್ಝಿಊಣ ಸುತ್ತುಟ್ಠಿಉವ್ವ ಸಂಖಾಇಮಹುರಸದ್ದೇಹಿಂ ॥
ದಠ್ಠೂಣ ಸುರವಿಭೂಇಂ ವಂಭಿಯಹಿಯಓ ಪಲೋಏಇ ॥ ೪೯೮ ॥

ಪ್ರತಿಬುಧ್ಯ ಸುಪ್ತೋತ್ಥಿತ ಇವ ಶಂಖಾದಿಮಧುರಶಬ್ದೈಃ ॥
ದೃಷ್ಟ್ವಾ ಸುರವಿಭೂತಿಂ ವಿಸ್ಮಿತಹೃದಯಃ ಪ್ರಲೋಕತೇ ॥

ಅರ್ಥಃ—ಅಲ್ಲಿಯ ಶಂಖ ಮುಂತಾದ ಮಧುರವಾದ ಧ್ವನಿಯಿಂದ ಆ ದೇವನು ಎಚ್ಚರಾಗಿ, ಈಗ ಮಲಗಿದವನಂತೆ ಎದ್ದು ಕೂತು, ದೇವಲೋಕದ ವೈಭವನೋಡಿ ಚಕಿತನಾಗಿ, ನಾಲ್ಕೂ ದಿಕ್ಕುಗಳ ಕಡೆಗೆ ನೋಡಹತ್ತುತ್ತಾನೆ.

ಕಿಂ ಸುವಿಣದಂಸಣಮಿಣಂ ಣ ವೇತಿ ಜಾ ಚಿಠ್ಠಏ ವಿಯಪ್ಪೇಣ ॥
ಆಯಂತಿ ತಖ್ಖಣಂ ಚಿಯ ಥುಇಮುಹಲಾ ಅಯಾರರಖ್ಖಾಈ ॥೪೯೯॥

ಕಿಂ ಸ್ವಪ್ನದರ್ಶನಮಿದಂ ನ ವೆತ್ತಿ ಯಾವತ್ತಿಷ್ಠತೇ ವಿಕಲ್ಪೇನ ॥
ಆಯಾಂತಿ ತತ್ಕ್ಷಣಂ ಚೈವ ಸ್ತುತಿಮುಖರಾ ಅಗಾರರಕ್ಷಕಾದಯ: ॥

ಅರ್ಥ:—ಮತ್ತು ಇದು ನನಗೆ ಸ್ವಪ್ನವು ಬಿದ್ದಿರುತ್ತದೆಯೋ ಮತ್ತೂ ಏನಾದರೂ ಇರುತ್ತದೆಯೋ ಏನೋ? ಎಂದು ಸಂಶಯುಪಡುವಷ್ಟರಲ್ಲಿ ಆ ವಿಮಾನದ ರಕ್ಷಕರಾದ ದೇವತೆಗಳು ಆತನ ಸ್ತೋತ್ರವನ್ನು ಮಾಡುತ್ತ ಹತ್ತರ ಬರುತ್ತಾರೆ.

ಜಯಜೀವಣಂದವಡ್ಢಾಇಚಾರುಸದ್ದೇಹಿ ಸೋಯರಮ್ಮೇಹಿಂ ॥
ಅಚ್ಛರಸಯಾಉ ವಿ ತಓ ಕುಣಂತಿ ಚಾಡೂಣಿ ವಿವಿಹಾಣಿ ॥ ೫೦೦ ॥

ಜಯಜೀವನಂದವರ್ಧಸ್ವಾದಿಚಾರುಶಬ್ದೈಃ ಶ್ರೋತ್ರುರಮ್ಯೈಃ ॥
ಅಪ್ಸರಃಶತಮಪಿ ತತಃ ಕುರ್ವಂತಿ ಚಾಟೂನಿ ವಿವಿಧಾನಿ ॥

ಅರ್ಥ:—ನೀನು ವಿಜಯನಾಗು, ಜೀವಂತನಿರು, ಆನಂದಿತನಾಗು, ಭಾಗ್ಯವಂತನಾಗು ಮುಂತಾದ ಕಿವಿಗೆ ಇಂಪಾದ ಶಬ್ದಗಳಿಂದ ಅವನ ಸ್ತುತಿಯನ್ನು ಮಾಡುತ್ತಾರೆ. ಹೀಗೆ ಬಹುಪ್ರಕಾರದ ಸವಿಯಾದ ಮಾತುಗಳಿಂದ ನೂರಾರು ಅಪ್ಸರಸ್ತ್ರೀಯರಾದರೂ ಕೊಂಡಾಡುತ್ತಾರೆ.

ಏವಂ ಥುಣಿಜ್ಜಮಾಣೋ ಸಹಸಾ ಣಾಊಣ ಉವಹಿಣಾಣೇಣ ॥
ಗಂತೂಣ ಣ್ಹಾಣಗೇಹಂ ಉತ್ತಣವಾವಿಮ್ಮಿ ಣ್ಹಾಊಣ ॥ ೫೦೧ ॥
ಆರಹಣಗಿಹಮ್ಮಿ ತಓ ಸೋಲಹಸಾಹೂಸಣಂ ಚ ಗಹಿಊಣ ॥
ಪೂಜೋವಯರಣಸಹಿಓ ಗಂತೂಣ ಜಿಣಾಳಯಂ ಸಹಸಾ ॥ ೫೦೨ ॥
ವರವಜ್ಜವಿವಿಹಮಂಗಳರವೇಹಿಂ ಗಂಧಕ್ಖಯಾಇದವ್ವೇಹಿಂ ॥
ಮಹಿಊಣ ಜಿಣವರಿಂದಂ ಥುತ್ತಸಹಸ್ಸೇಹಿಂ ಥುಣಿಊಣ ॥ ೫೦೩ ॥
ಗಂತೂಣ ಸಭಾಗೇಹಂ ಅಣೇಯಸುರಸಂಕುಳಂ ಪರಮರಮ್ಮಂ ॥
ಸಿಂಹಾಸಣಸ್ಸ ಉವರಿಂ ಚಿತ್ಠಇ ದೇವೇಹಿಂ ಥುವಂತೋ ॥ ೫೦೪ ॥
ಉಸ್ಸಿಯಸಿಯಾಯವತ್ತೋ ಸಿಯಚಾಮರಧುವಮಾಣಸವ್ವಂಗೋ ॥
ಪಉರಚ್ಛರಾಹಿಂ ಕೀಡಇ ದಿವ್ವಟ್ಟಗುಣಪ್ಪಹಾವೇಣ ॥ ೫೦೫ ॥

ಏವಂ ಸ್ತೂಯಮಾನಃ ಸಹಸಾ ಜ್ಞಾತ್ವಾವಧಿಜ್ಞಾನೇನ ॥
ಗತ್ವಾ ಸ್ನಾನಗೃಹಂ ಸ್ನಾನವಾಪಿಕಾಯಾಂ ಸ್ನಾತ್ವಾ ॥
ಆಭರಣಗೃಹೇ ತತಃ ಷೋಡಶಾಭೂಷಣಂ ಚ ಗೃಹೀತ್ವಾ ॥
ಪೂಜೋಪಕರಣಸಹಿತೋ ಗತ್ವಾ ಜಿನಾಲಯಂ ಸಹಸಾ ॥
ವರವಾದ್ಯವಿವಿಧಮಂಗಲರವೈರ್ಗಂಧಾಕ್ಷತಾದಿದ್ರವ್ಯೈಃ ॥
ಮಹಯಿತ್ವಾ ಜಿನವರೇಂದ್ರಂ ಸ್ತೋತ್ರಸಹಸ್ರೈಃ ಸ್ತುತ್ವಾ ॥
ಗತ್ವಾ ಸಭಾಗೃಹಮನೇಕಸುರಸಂಕುಲಂ ಪರಮರಮ್ಯಮ್ ॥
ಸಿಂಹಾಸನಸ್ಯೋಪರಿ ತಿಷ್ಠತಿ ದೇವೈಃ ಸ್ತೂಯಮಾನಃ ॥
ಉತ್ಥಿತಸಿತಾತಪತ್ರಃ ಸಿತಚಾಮರಧೂಯಮಾನಸರ್ವಾಂಗಃ ॥
ಪ್ರಚುರಾಪ್ಸರೋಭಿಃ ಕ್ರೀಡತಿ ದಿವ್ಯಾಷ್ಟಗುಣಪ್ರಭಾವೇಣ ॥

ಅರ್ಥಃ—ಈ ಮೇರೆಗೆ ದೇವದೇವಾಂಗನೆಯರು ಅವನ ಸ್ತುತಿಯನ್ನು ಮಾಡುತ್ತಿರುವಾಗ್ಗೆ, ಅವನಿಗೆ ಒಮ್ಮಿಂದೊಮ್ಮೆ ಅವಧಿಜ್ಞಾನವು ಪ್ರಾಪ್ತವಾಗುತ್ತದೆ. ಆದರ ಯೋಗದಿಂದ ಅವನು ತನ್ನ ವೃತ್ತಿಯನ್ನು ತಿಳಿದು, ಸ್ನಾನಗೃಹದಲ್ಲಿ ಹೋಗಿ, ಅಲ್ಲಿಯ ಸ್ನಾನದ ಬಾವಿಯಲ್ಲಿ ಸ್ನಾನ ಮಾಡಿ, ಅಲಂಕಾರ ಗೃಹದಲ್ಲಿ

ಹೋಗಿ, ಹದಿನಾರು ಪ್ರಕಾರದ ಅಲಂಕಾರವನ್ನು ಧರಿಸಿಕೊಂಡು, ಪೂಜೆಯ ಸಾಹಿತ್ಯವನ್ನು ತೆಗೆದುಕೊಂಡು, ತ್ವರೆಯಿಂದ ಜಿನಾಲಯಕ್ಕೆ ಹೋಗಿ, ಉತ್ತಮವಾದ ವಾದ್ಯಗಳಿಂದಲೂ ಮಂಗಲ ಶಬ್ದಗಳಿಂದಲೂ ಗಂಧ, ಅಕ್ಷತೆ ಮುಂತಾದ ದ್ರವ್ಯಗಳಿಂದಲೂ ಅನೇಕ ಸ್ತೋತ್ರಗಳಿಂದಲೂ ಮೊದಲಾದ ಸಾಧನಗಳಿಂದ ಶ್ರೀ ಜಿನೇಶನ ಪೂಜೆಯನ್ನು ಮಾಡುತ್ತಾನೆ. ಆ ಮೇಲೆ ಅನೇಕ ದೇವತೆಗಳು ಕೂಡಿರುವ ಸುಂದರವಾದ ಸಭೆಯ ಗೃಹದಲ್ಲಿ ಹೋಗಿ, ಅನೇಕ ದೇವತೆಗಳಿಂದ ಸ್ತುತಿಸಲ್ಪಡುವ ದೇವಸಿಂಹಾಸನದ ಮೇಲೆ ಕೂಡ್ರುತ್ತಾನೆ. ಆ ಸಮಯದಲ್ಲಿ ಅವನ ಮಸ್ತಕದ ಮೇಲೆ ಬಿಳೇ ಛತ್ರವಿರುತ್ತದೆ. ಹಾಗು ಅವನ ಮೈ ಮೇಲೆ ಶುಭ್ರವಾದ ಚಾಮರಗಳು ಬೀಸಲ್ಪಡುತ್ತವೆ; ಆಗ್ಗೆ ಆ ದೇವನು ಅಲ್ಲಿಯ ಅಪ್ಸರ ಸ್ತ್ರೀಯರೊಡನೆ ಕ್ರೀಡೆಯನ್ನು ಮಾಡುತ್ತಾನೆ. ಮತ್ತು ತನ್ನ ದಿವ್ಯವಾದ ಅಣಿಮಾ ಮುಂತಾದ ಎಂಟು ಗುಣಗಳ ಪ್ರಭಾವದಿಂದ—

ದೀವೇಸು ಸಾಯರೇಸು ಯ ಸುರಸರಿತೀಏಸು ಸೇಲಸಿಹರೇಸು ॥
ಅಖಲಿಯಗಮಣಾಗಮಣೋ ದೇವುಜ್ಜಾಣಾಇಸು ರಮೇಈ ॥ ೫೦೬ ॥

ದ್ವೀಪೇಷು ಸಾಗರೇಷು ಚ ಸುರಸರಿತ್ತೀರೇಷು ಶೈಲಶಿಖರೇಷು ॥
ಅಸ್ಖಲಿತಗಮನಾಗಮನೋ ದೇವೋದ್ಯಾನಾದಿಷು ರಮತೇ ॥

ಅರ್ಥ:—ದ್ವೀಪ, ಸಮುದ್ರ, ಗಂಗೆ ಮುಂತಾದ ನದಿಯ ತೀರ, ಪರ್ವತಗಳ ಶಿಖರ, ನಂದನ ಉದ್ಯಾನ ಮುಂತಾದ ಸ್ಥಳಗಳಲ್ಲಿ ಹೋಗಲಿಕ್ಕೂ ಬರಲಿಕ್ಕೂ ಪ್ರತಿಬಂಧವಿಲ್ಲದ್ದರಿಂದ ಇಚ್ಛಾನುಸಾರ ಕ್ರೀಡೆಯನ್ನು ಮಾಡುತ್ತಾನೆ.

ಆಸಾಢಕತ್ತಿಏ ಫಗ್ಗುಣೇ ಯ ಣಂದೀಸರಠ್ಠದಿವಸೇಸು ॥
ವಿವಿಹಂ ಕರೇಇ ಕಹಿಮಂ ಣಂದೀಸರಚೇಇಯಗಿಹೇಸು ॥ ೫೦೭ ॥
ಪಂಚಸು ಮೇರುಸು ತಹಾ ವಿಮಾಣಜಿಣಚೇಇಏಸು ವಿವಿಹೇಸು ॥
ಪಂಚಸು ಕಲ್ಲಾಣೇಸು ಯ ಕರೇಇ ಪುಜ್ಜಂ ಬಹುವಿಯಪ್ಪಂ ॥ ೫೦೮ ॥
ಇಚ್ಚಾಇವಹುವಿಣೋಏಹಿಂ ತತ್ಥ ವಿ ಣೇಊಣ ಸಗಠ್ಠಿಈ ॥
ತತ್ತೋ ಉವ್ವಇ ಸವಾಣೋ ಚಕ್ಕಹರಾಇಸು ಜಾಏಇ ॥ ೫೦೯ ॥

ಆಷಾಢಕಾರ್ತಿಕೇ ಫಾಲ್ಗುನೇ ಚ ನಂದೀಶ್ವರಾಷ್ಟದಿವಸೇಷು ॥
ವಿವಿಧಂ ಕರೋತಿ ಮಹಿಮಾನಂ ನಂದೀಶ್ವರಚೈತ್ಯಗೃಹೇಷು ॥
ಪಂಚಸು ಮೇರುಷು ತಥಾ ವಿಮಾನಜಿನಚೈತ್ಯೇಷು ವಿವಿಧೇಷು ॥
ಪಂಚಸು ಕಲ್ಯಾಣೇಷು ಚ ಕರೋತಿ ಪೂಜಾಂ ಬಹುವಿಕಲ್ಪಾಮ್ ॥
ಇತ್ಯಾದಿಬಹುವಿನೋದೈಸ್ತತ್ರಾಪಿ ಜ್ಞಾತ್ವಾ ಸ್ವಸ್ಥಿತಿಮ್ ॥
ತತ ಉರ್ವೀಂ ಸಮಾಗತ್ಯ ಚಕ್ರಧರಾದಿಷು ಜಾಯತೇ ॥

ಅರ್ಥ:—ಆಷಾಢ, ಕಾರ್ತಿಕ, ಫಾಲ್ಗುಣ ಈ ಮೂರು ತಿಂಗಳ ಶುದ್ಧ ಅಷ್ಟಮಿಯಿಂದ ಹುಣ್ಣಿವೆಯು ವರೆಗೆ ನಂದೀಶ್ವರ ಪರ್ವದ ಎಂಟು ದಿವಸಗಳಲ್ಲಿ ನಂದೀಶ್ವರ ದ್ವೀಪದೊಳಗಿನ ಚೈತ್ಯಾಲಯಗಳಲ್ಲಿ ಹೋಗಿ, ಅಲ್ಲಿಯು ಅಕೃತ್ರಿಮ ಜಿನಬಿಂಬದ ಪೂಜೆಯುನ್ನು ಅನೇಕ ಪ್ರಕಾರವಾಗಿ ಮಾಡುತ್ತಾನೆ. ಇದರಂತೆಯೇ ಐದು ಮೇರುಗಳಲ್ಲಿಯು ಮತ್ತು ಎಷ್ಟೋ ವಿಮಾನಗಳಲ್ಲಿಯು ಅಕೃತ್ರಿಮ ಜಿನಬಿಂಬ ಜಿನಪಂಚಕಲ್ಯಾಣ ಮುಂತಾದ ಸ್ಥಳಗಳಲ್ಲಿ ವಿಧವಿಧದ ಪೂಜೆಯುನ್ನು ಮಾಡುತ್ತಾನೆ. ಇದೇ ಮೇರೆಗೆ ಎಷ್ಟೋ ಪುಣ್ಯಕರವಾದ ಮತ್ತು ಆನಂದಕರವಾದ, ಕ್ರಿಯೆಗಳಿಂದ ಸ್ವರ್ಗ ಲೋಕದೊಳಗಿನ ಕಾಲವನ್ನು ಕಳೆದು, ಅವಧಿಜ್ಞಾನದಿಂದ ಅಂತಕಾಲವನ್ನು ತಿಳಿದು, ಅಲ್ಲಿಂದ ಭೂಲೋಕಕ್ಕೆ ಬಂದು, ಚಕ್ರವರ್ತಿ ಮುಂತಾದ ರಾಜಕುಲದಲ್ಲಿ ಹುಟ್ಟುತ್ತಾನೆ.

ಭೋತ್ತೂಣ ಮಣುಯಸೋಖ್ಖಂಪಸ್ಸಿಯ ವೇರಗ್ಗಕಾರಣಂ ಕಿಂಚಿ ॥
ಮೋತ್ತೂಣ ರಾಯಲಚ್ಛೀ ತಣಂ ವ ಗಹಿಊಣ ಚಾರಿತ್ತಂ ॥ ೫೧೦ ॥
ಕಾಊಣ ತವಂ ಘೋರಂ ಲದ್ಧೀಓ ತಪ್ಫಳೇಣ ಲಧ್ದೂಣ ॥
ಅಠ್ಠಗುಣೀಸರಿಯಂ ತಂ ಚ ಕಿಂ ಣ ಸಿಜ್ಝಂ ತವೇಣ ಜಏ ॥ ೫೧೧ ॥

ಭುಕ್ತ್ವಾ ಮನುಜಸೌಖ್ಯಂ ದೃಷ್ಟ್ವಾ ವೈರಾಗ್ಯಕಾರಣಂ ಕಿಂಚಿತ್ ॥
ಮುಕ್ತ್ವಾ ರಾಜ್ಯಲಕ್ಷ್ಮೀಂ ತೃಣವತ್ ಗೃಹೀತ್ವಾ ಚಾರಿತ್ರಮ್ ॥
ಕೃತ್ವಾ ತಪೋ ಘೋರಂ ಋದ್ಧೀಂ ತತ್ಫಲೇನ ಲಬ್ಧ್ವಾ ॥
ಅಷ್ಟಗುಣೈಶ್ವರ್ಯಂ ತಚ್ಚ ಕಿಂ ನ ಸಿದ್ಧಂ ತಪಸಾ ಜಗತಿ ॥

ಅರ್ಥ:—ಅನಂತರ ಆ ಮಹಾತ್ಮನು ಮನುಷ್ಯಲೋಕದ ಸೌಖ್ಯವನ್ನು ಭೋಗಿಸಿ, ವೈರಾಗ್ಯದ ಸ್ವಲ್ಪ ಕಾರಣವಾದರೂ ದೃಷ್ಟಿಗೆ ಬಿದ್ದ ಕೂಡಲೆ, ರಾಜಲಕ್ಷ್ಮಿಯುನ್ನು ತೃಣಸಮಾನ ತ್ಯಾಗಮಾಡಿ, ಜಿನದೀಕ್ಷೆಯುನ್ನು ತಕ್ಕೊಂಡು, ತಪಶ್ಚರ್ಯ ಮಾಡುತ್ತಾನೆ. ಆ ತಪಶ್ಚರ್ಯದ ಫಲದಿಂದ ಅವನಿಗೆ ಋದ್ಧಿ ಪ್ರಾಪ್ತವಾಗಿ ಅಣಿಮಾ ಮುಂತಾದ ಎಂಟು ಗುಣಗಳ ಐಶ್ವರ್ಯವು ಪ್ರಾಪ್ತವಾಗುತ್ತದೆ. ತಪಶ್ಚರ್ಯದಿಂದ ಈ ಜಗತ್ತಿನಲ್ಲಿ ಯಾವದು ಸಿದ್ಧವಾಗುವದಿಲ್ಲ?

## ಏಳು ಋದ್ಧಿಗಳು.

ವುದ್ಧೀ ತವ್ವೋ ವಿ ಲದ್ಧೀ ವಿಉಕ್ಕಣಲದ್ಧೀ ತಹೇವ ಉಸಹೀಯಾ ॥
ರಸವಳಅಖ್ಖೀಣಾ ವಿ ಯ ರಿದ್ಧೀಓ ಸತ್ತ ಪಣ್ಣತ್ತಾ ॥ ೫೧೨ ॥

ಬುದ್ಧಿಸ್ತಪೋಪಿ ಋದ್ಧಿರ್ವೈಕ್ರಿಯಕರ್ಧಿಸ್ತಥೈವೌಷಧರ್ದ್ಧಿಃ ॥
ರಸಬಲಾಕ್ಷೀಣಾ ಅಪಿ ಚ ಋದ್ಧಯಃ ಸಪ್ತ ಪ್ರಜ್ಞಪ್ತಾಃ ॥

ಅರ್ಥ:—ಬುದ್ಧಿ, ತಪ, ವಿಕ್ರಿಯಾ, ಔಷಧ, ರಸ, ಬಲ ಮತ್ತು ಅಕ್ಷೀಣಮಹಾ

ನಸ ಹೀಗೆ ಏಳು ಋದ್ಧಿಗಳು. ಅವಧಿಜ್ಞಾನ ಪ್ರಾಪ್ತವಾಗುವದಕ್ಕೆ ಬುದ್ಧಿಋದ್ಧಿಯೆನ್ನು ತ್ತಾರೆ. ಸೂರ್ಯನಂತೆ ಶರೀರವು ತೇಜಸ್ವಿಯಾಗುವದಕ್ಕೆ ತಪಋದ್ಧಿಯೆನ್ನುತ್ತಾರೆ. ನಾನಾ ಪ್ರಕಾರದ ರೂಪವನ್ನು ಧಾರಣಮಾಡುವಂಥ ಸಾಮರ್ಥ್ಯಕ್ಕೆ ವಿಕ್ರಿಯಾ ಋದ್ಧಿಯೆನ್ನುತ್ತಾರೆ. ಮುನಿಗಳ ಮೈ ಮೇಲಿಂದ ಹಾಯ್ದು ಬರುವ ಗಾಳಿಯಿಂದ ಎರ ಡನೇಯವರ ರೋಗವು ನಾಶವಾಗುವದಕ್ಕೆ ಔಷಧ ಋದ್ಧಿಯೆನ್ನುತ್ತಾರೆ. ಯಾವ ದೊಂದು ನೀರಸ ಅನ್ನವನ್ನು ಮುನೀಶ್ವರನು ಸೇವಿಸಿದ ನಂತರ, ಉಳಿದ ಎಲ್ಲ ಅನ್ನವು ರಸಯುಕ್ತವಾಗುವದಕ್ಕೆ ರಸಋದ್ಧಿಯೆನ್ನುತ್ತಾರೆ. ಮನ-ವಚನ-ಕಾಯಗಳ ಬಲವು ಅಸಂಖ್ಯಾತ ದೇವತೆಗಳ ಬಲದಷ್ಟು ಆಗುವದಕ್ಕೆ ಬಲಋದ್ಧಿಯೆನ್ನುತ್ತಾರೆ. ಮುನೀ ಶ್ವರನು ಭೋಜನ ಮಾಡಿದ ಪಾತ್ರೆಯಲ್ಲಿಯ ಉಳಿದ ಅನ್ನವನ್ನು ಆ ದಿವಸ ಬಹು ಮಂದಿಗೆ ಹಾಕಿದರೂ ತೀರುವದಿಲ್ಲ, ಇದಕ್ಕೆ ಅಕ್ಷೀಣಮಹಾಸನಋದ್ಧಿಯೆನ್ನುತ್ತಾರೆ.

## ಎಂಟು ವಿಕ್ರಿಯೆಗಳು.

ಅಣಿಮಾ ಮಹಿಮಾ ಲಘಿಮಾ ಪಗಮ್ಮಿ ವಸಿತ್ತ ಕಾಮರೂವಿತ್ತಂ ॥
ಈಸತ್ತಪಾವಣಂ ತಹ ಅಠ್ಠಗುಣಾ ವಣ್ಣಿಯಾ ಸಮಯೇ ॥ ೫೧೩ ॥

ಅಣಿಮಾ ಮಹಿಮಾ ಲಘಿಮಾ ಪ್ರಾಕಾಮ್ಯಂ ವಶಿತ್ವಂ ಕಾಮರೂಪಿತ್ವಮ್ ॥
ಈಶತ್ವಪ್ರಾಪ್ಯತ್ವಂ ತಥಾಷ್ಟಗುಣಾ ವರ್ಣಿತಾ: ಸಮಯೇ ॥

ಅರ್ಥ:—ಸೂಕ್ಷ್ಮವಾಗುವದು, ದೊಡ್ಡದಾಗುವದು, ಹಗುರಾಗುವದು, ಜಡ ವಾಗುವದು, ಬೇಕಾದದ್ದನ್ನು ವಶಮಾಡಿಕೊಳ್ಳುವದು, ಇಚ್ಛಿಸಿದ ರೂಪವನ್ನು ಧರಿ ಸುವದು. ಅರಸೊತ್ತಿಗೆ ಪಡಿಯೋಣ, ಬೇಕಾದದ್ದನ್ನು ಪ್ರಾಪ್ತಮಾಡಿಕೊಳ್ಳೋಣ, ಈ ಎಂಟು ಗುಣಗಳು ಶಾಸ್ತ್ರದಲ್ಲಿ ಹೇಳಿರುತ್ತವೆ. ಈ ಗುಣಗಳು ಮುನೀಶ್ವರನಿಗೆ ವಿಕ್ರಿಯಾಋದ್ಧಿಯಿಂದ ದೊರೆಯುತ್ತವೆ.

ಏವಂ ಕಾಊಣ ತವಂ ಪಾಸುಯಠಾಣಮ್ಮಿ ತಹಯ ಗಂತೂಣ ॥
ಪಾಲಿಯಕಂ ವಂಧಿತ್ತಾ ಕಾಉಸ್ಸಗ್ಗೇಣ ವಾ ಠಿಚ್ಚಾ ॥ ೫೧೪ ॥
ಜಇ ಖಾಇಯಸದ್ದಿಠ್ಠಿ ಪುವ್ವಂ ಖವಿಯಾಉ ಸತ್ತಪಯಡೀಉ ॥
ಸುರಣಿರಯತಿರಚ್ಛಾಊ ತಮ್ಮಿ ಭವೇ ಣಿಠ್ಠಿಯಂ ಚೇವ ॥ ೫೧೫ ॥
ಅಹ ವೇದಗಸದ್ದಿಠ್ಠಿ ಪಮತ್ತಠಾಣಮ್ಮಿ ಅಪ್ಪಮತ್ತೇ ವಾ ॥
ಸರಿಊಣ ಧಮ್ಮಝಾಣಂ ಸತ್ತವಿ ಣಿಠ್ಠವಇ ಪಯಡೀಉ ॥ ೫೧೬ ॥

ಏವಂ ಕೃತ್ವಾ ತಪಃ ಪ್ರಾಸುಕಸ್ಥಾನೇ ತಥಾ ಚ ಗತ್ವಾ ॥
ಪಲ್ಯಂಕಂ ಬಧ್ವಾ ಕಾಯೋತ್ಸರ್ಗೇಣ ವಾ ಸ್ಥಿತ್ವಾ ॥
ಯದಿ ಕ್ಷಾಯಿಕಸದ್ದೃಷ್ಟಿಃ ಪೂರ್ವಂ ಕ್ಷಪಯಿತ್ವಾ ಸಪ್ತಪ್ರಕೃತೀಃ ॥
ಸುರನಾರಕತಿರ್ಯಗಾಯುಸ್ತಸ್ಮಿನ್ಭವೇ ನಿಷ್ಠಿತಂ ಚೈವ ॥

ಅಥ ವೇದಕಸದ್ದೃಷ್ಟಿ: ಪ್ರಮತ್ತಸ್ಥಾನೇಪ್ರಮತ್ತೇ ವಾ ॥
ಆಶ್ರಿತ್ಯ ಧರ್ಮಧ್ಯಾನಂ ಸಪ್ತಾಪಿ ನಿಷ್ಠಾಪಯತಿ ಪ್ರಕೃತೀಃ ॥

ಅರ್ಥ:—ಈ ಮೇರೆಗೆ ತಪಶ್ಚರ್ಯ ಮಾಡಿದನಂತರ ಆ ಮುನಿಯು ಪ್ರಾಸುಕ ಸ್ಥಳದಲ್ಲಿ ಹೋಗಿ, ಪಲ್ಯಂಕಾಸನದಿಂದ ಅಥವಾ ಕಾಯೋತ್ಸರ್ಗದಿಂದ ಇದ್ದು, ಏಳೂ ಪ್ರಕೃತಿಗಳನ್ನು ನಾಶಮಾಡಿ, ಪ್ರಥಮಕ್ಷಾಯಿಕ ಸಮ್ಯಗ್ದೃಷ್ಟಿಯಾಗಿದ್ದರೆ ದೇವ, ನಾರಕ, ತಿರ್ಯಂಚ ಈ ಮೂರು ಪ್ರಕಾರದ ಆಯುಷ್ಯವನ್ನು ನಾಶಮಾಡುತ್ತಾನೆ. ಆದರೆ ವೇದಕಸಮ್ಯಗ್ದೃಷ್ಟಿಯಾಗಿದ್ದರೆ ಪ್ರಮತ್ತ ಅಥವಾ ಅಪ್ರಮತ್ತ ಗುಣಸ್ಥಾನದಲ್ಲಿ ಧರ್ಮದ ಆಶ್ರಯ ಮಾಡಿಕೊಂಡು, ಏಳೂ ಪ್ರಕೃತಿಗಳನ್ನು ನಾಶ ಮಾಡುತ್ತಾನೆ. ಮತ್ತು,

ಕಾಊಣ ಪಮತ್ತೇಯರಪರಿಯಂ ತಸಯಾಣಿ ಖವಇ ಪಾಉಗ್ಗೋ ॥
ಹೋಊಣ ಅಪ್ಪಮತ್ತೋ ವಿಸೋಹಿ ಪಾಊರಿಊಣ ಖಣಂ ॥೫೧೭॥
ಕರಣಂ ಅಧಾಪವತ್ತಂ ಪಢಮಂ ಪಡಿವಜ್ಜಿಊಣ ಸುಕ್ಕಂ ಚ ॥
ಜಾಯಇ ಅಪುವ್ವಕರಣೋ ಕಸಾಯಖಯಣುಜ್ಜಓ ವೀರೋ ॥೫೧೮॥
ಏಕ್ಕಕ್ಕಂ ಠಿದಿಖಂಡಂ ಪಾಡಇ ಅಂತೋಮುಹುತ್ತಕಾಳೇಣ ॥
ಠಿದಿಖಂಡಪಡಣಕಾಳೇ ಅಣುಭಾಗಸಯಾಣಿ ಪಾಡೇಈ ॥ ೫೧೯ ॥
ಗಚ್ಛಇ ವಿಸುದ್ಧಮಾಣೋ ಪಡಿಸಮಯಮಣಂತಗುಣ ವಿಸೋಹೀಏ ॥
ಲದ್ಧೀಏ ಅಣಿಯಟ್ಟಿಗುಣಂ ತತ್ಥ ವಿ ಸೋಲಹ ಪಯಡೀಇ ॥ ೫೨೦ ॥

ಕೃತ್ವಾ ಪ್ರಮತ್ತೇತರಪರ್ಯಂತೇ ತ್ರಸಕಾನಿ ಕ್ಷಪಯತಿ ಪ್ರಾಯೋಗ್ಯಯಾ ॥
ಭೂತ್ವಾಪ್ರಮತ್ತೋ ವಿಶುದ್ಧಿಂ ಪ್ರಾಪ್ಯ ಕ್ಷಣಮ್ ॥
ಕರಣಮಧಃಪ್ರವೃತ್ತಂ ಪ್ರಥಮಂ ಪ್ರತಿಪದ್ಯ ಶುಕ್ಲಂ ಚ ॥
ಜಾಯತೇಪೂರ್ವಕರಣ: ಕಷಾಯಕ್ಷಪಣೋದ್ಯತೋ ವೀರಃ ॥
ಏಕೈಕಂ ಸ್ಥಿತಿಖಂಡಂ ಪಾತಯತ್ಯಂತರ್ಮುಹೂರ್ತಕಾಲೇನ ॥
ಸ್ಥಿತಿಖಂಡಪತನಕಾಲೇನುಭಾಗಶತಾನಿ ಪಾತಯತಿ ॥
ಗಚ್ಛತಿ ವಿಶುದ್ಧಮಾನಃ ಪ್ರತಿಸಮಯಮನಂತಗುಣಂ ವಿಶುಧ್ಯಾ ॥
ಲಬ್ಧ್ಯಾನಿವೃತ್ತಿಗುಣಂ ತತ್ರಾಪಿ ಷೋಡಶಪ್ರಕೃತೀಃ ॥

ಅರ್ಥ:—ಅಪ್ರಮತ್ತ ಗುಣಸ್ಥಾನಕ್ಕೇರುವ ತನಕ ಪ್ರಾಯೋಗ್ಯಲಬ್ಧಿಯ ಬಲದಿಂದ ತ್ರಸಕಾಯ ಮುಂತಾದ ಕರ್ಮಗಳನ್ನು ನಾಶಮಾಡಿ, ಅಪ್ರಮತ್ತ ಗುಣ ಸ್ಥಾನವಾಸಿಯಾಗುತ್ತಾನೆ. ಬಳಿಕ ಅತ್ಯಂತ ಶುದ್ಧತೆಗೇರಿ ಆ ಅಪ್ರಮತ್ತ ಮುನಿಯು ಒಂದು ಕ್ಷಣದೊಳಗೆ ಅಧ:ಪ್ರವೃತ್ತಿಯೆಂಬ ಹೆಸರಿನ ಮೊದಲನೇ ಕಾರಣವಾಗಿಯೂ ಶುಕ್ಲಧ್ಯಾನದ ಮೊದಲನೇ ಪ್ರಕಾರವಾಗಿಯೂ ಪ್ರಥಕ್ತ್ವವಿತರ್ಕ ವಿಚಾರವಾಗಿಯೂ ಇರುವದನ್ನು ಸ್ವೀಕರಿಸಿ, ಅಪೂರ್ವಕರಣದ ಅಧಿಕಾರಿಯಾಗಿ, ಕಷಾಯ

ವನ್ನು ನಾಶಮಾಡಲೆತ್ನಿಸಿದ ವೀರನು ಅಂತರ್ಮುಹೂರ್ತಕಾಲದಿಂದ ಕರ್ಮದ ಸ್ಥಿತಿಬಂಧದ ಒಂದೊಂದು ಖಂಡವನ್ನು ನಾಶಮಾಡುತ್ತಾನೆ. ಸ್ಥಿತಿಬಂಧದ ಖಂಡವು ಬೀಳುತ್ತಿರುವಾಗ್ಗೆ ಅನುಭಾಗಬಂಧದ ನೂರಾರು ಖಂಡಗಳು ಬೀಳುತ್ತವೆ. ಈ ಪ್ರಕಾರ ಪ್ರತಿಸಮಯದಲ್ಲಿ ಅನಂತ ಪ್ರಕಾರ ವಿಶುದ್ಧನಾಗುವ ಮುನಿಯು ವಿಶುದ್ಧಿಲಬ್ಧಿಯ ಬಲದಿಂದ ಅನಿವೃತ್ತಿಕರಣವೆಂಬ ೯ನೆಯ ಗುಣಸ್ಥಾನವನ್ನು ಪ್ರಾಪ್ತ ಮಾಡಿಕೊಳ್ಳುತ್ತಾನೆ. ಅಲ್ಲಿಯಾದರೂ ಹದಿನಾರು ಪ್ರಕೃತಿಗಳನ್ನು ನಾಶಮಾಡುತ್ತಾನೆ. ಬಳಿಕಃ—

ಅಠ್ಠಕಸಾಯೇ ಚ ತಓ ಣಪುಂಸಯಂ ತಹೇವ ಇತ್ಥೀವೇಯಂ ಚ ॥
ಛಣ್ಣೋಕಸಾಯಪುರಿಸಂ ಕಮೇಣ ಕೋಹಂ ಪಿ ಸಂಛುಹಈ ॥ ೫೨೧ ॥
ಕೋಹಂ ಮಾಣಂ ಮಾಯಾ ಏತಂಪಿ ಛುಹಇ ಳೋಹಮ್ಮಿ ॥
ವಾಯರಳೋಹಂ ಪಿ ತಓ ಕಮೇಣ ಣಿಠ್ಠವಇ ತತ್ಥೇವ ॥ ೫೨೨ ॥
ಅಣುಳೋಹಂ ವೇಯಂತೋ ಸಂಜಾಯಇ ಸುಹುಮಸಂಪರಾಯೋ ಸೋ॥
ಖವಿಊಣ ಸಹುಮಳೋಹಂ ಖೀಣಕಸಾಓ ತಓ ಹೋಈ ॥ ೫೨೩ ॥
ತಥ್ಥೇವ ಸುಕ್ಕಝಾಣಂ ವಿದಿಯಂ ಪಡಿವಜ್ಜಿಊಣ ತೋ ತೇಣ ॥
ಣಿದ್ದಾಪಯಳಾಓ ದೋ ಚರಮಸಮಯಮ್ಮಿ ಪಾಡೇಈ ॥ ೫೨೪ ॥
ಣಾಣಂತರಾಯದಸಯಂ ದಂಸಣಚತ್ತಾರಿ ಚರಮಸಮಯಮ್ಮಿ ॥
ಹಣಿಊಣ ತಖ್ಖಣೇ ಚಿಯ ಸಜೋಗಕೇವಳಜಿಣೋ ಹೋಇ ॥ ೫೨೫

ಅಷ್ಟಕಷಾಯಾಂಶ್ಚ ತತೋ ನಪುಂಸಕಂ ತಥೈವ ಸ್ತ್ರೀವೇದಂ ಚ ॥
ಷಣ್ಣೋಕಷಾಯಪುರುಷಂ ಕ್ರಮೇಣ ಕ್ರೋಧಮಪಿ ಸಂಕ್ಷಿಪತಿ ॥
ಕ್ರೋಧಂ ಮಾನಂ ಮಾಯಾಂ ಏತಾ ಅಪಿ ಕ್ಷಿಪತಿ ಲೋಭೇ ॥
ಬಾದರಲೋಭಮಪಿ ತತಃ ಕ್ರಮೇಣ ನಿಷ್ಠಾಪಯತಿ ತತ್ರೈವ ॥
ಅಣುಲೋಭಂ ವೇದಯನ್ ಸಂಜಾಯತೇ ಸೂಕ್ಷ್ಮಸಾಂಪರಾಯ: ಸಃ ॥
ಕ್ಷಪಯಿತ್ವಾ ಸೂಕ್ಷ್ಮಲೋಭಂ ಕ್ಷೀಣಕಷಾಯಸ್ತತೋ ಭವತಿ
ತತ್ರೈವ ಶುಕ್ಲಧ್ಯಾನಂ ದ್ವಿತೀಯಂ ಪ್ರತಿಪದ್ಯ ತೇನ ॥
ನಿದ್ರಾಪ್ರಚಲೇ ದ್ವೇ ಚರಮಸಮಯೇ ಪಾತಯತಿ ॥
ಜ್ಞಾನಾಂತರಾಯದಶಕಂ ದರ್ಶನಚತಸ್ರಶ್ಚರಮಸುಮಯೇ ॥
ಹತ್ವಾ ತತ್ಕ್ಷಣೇ ಚೈವ ಸಯೋಗಕೇವಲಿಜಿನೋ ಭವತಿ ॥

ಅರ್ಥಃ—ಪ್ರತ್ಯಾಖ್ಯಾನ, ಅಪ್ರತ್ಯಾಖ್ಯಾನ, ಕ್ರೋಧ, ಮಾನ, ಮಾಯಾ, ಲೋಭ ಈ ಎಂಟು ಕಷಾಯಗಳನ್ನು ನಾಶಮಾಡುತ್ತಾನೆ. ಅದರಂತೆ ಹಾಸ್ಯ, ರತಿ, ಅರತಿ, ಭಯ, ಶೋಕ, ಜುಗುಪ್ಸೆ, ಸ್ತ್ರೀವೇದ, ಪುಂವೇದ ಮತ್ತು ನಪುಂಸಕ ವೇದ ಈ ಒಂಭತ್ತು ನೋಕಷಾಯಗಳನ್ನು ನಾಶಮಾಡುತ್ತಾನೆ. ಕ್ರೋಧ, ಮಾನ,

ಮಾಯಾ, ಲೋಭ ಇವುಗಳಲ್ಲಿಯ ಬಾದರ ಲೋಭವನ್ನು ಕ್ರಮದಿಂದ ಆ ಗುಣಸ್ಥಾನದಲ್ಲಿಯೇ ಪೂರ್ಣನಾಶಮಾಡಿ, ಸೂಕ್ಷ್ಮಲೋಭವನ್ನು ಅನುಭವಿಸುವ ಸಾಧು ಸೂಕ್ಷ್ಮಸಾಂಪರಾಯವೆಂಬ ೧೦ ನೆಯ ಗುಣಸ್ಥಾನಕ್ಕೇರುತ್ತಾನೆ. ಅನಂತರ ಸೂಕ್ಷ್ಮಲೋಭವನ್ನಾದರೂ ನಾಶಮಾಡಿ, ಕ್ಷೀಣಕಷಾಯವೆಂಬ ೧೨ನೆಯ ಗುಣಸ್ಥಾನವನ್ನು ಪಡೆಯುತ್ತಾನೆ. ಆ ಸ್ಥಳದಲ್ಲಿ ೨ನೆಯ ಶುಕ್ಲಧ್ಯಾನದ ಯೋಗದಿಂದ ನಿದ್ರಾ ಮತ್ತು ಪ್ರಚಲಾ ಇವೆರಡೂ ಕರ್ಮಗಳನ್ನು ಕಡೆಯಸಮಯದಲ್ಲಿ ನಾಶಮಾಡುತ್ತಾನೆ. ಇದೇ ಪ್ರಕಾರ ಜ್ಞಾನಾವರಣಕರ್ಮದ ಐದು, ಅಂತರಾಯಕರ್ಮದ ಐದು, ಮತ್ತು ದರ್ಶನಾವರಣ ಕರ್ಮದ ನಾಲ್ಕು ಪ್ರಕೃತಿಗಳನ್ನು ೧೨ನೆಯ ಗುಣಸ್ಥಾನದ ಕಡೆಯ ಸಮಯದಲ್ಲಿ ನಾಶಮಾಡಿ, ಕೂಡಲೇ ಅವನು ಸಯೋಗಕೇವಲಿ ಜಿನನಾಗುತ್ತಾನೆ.

ತೋ ಸೋ ತಿಯಾಳಗೋಯರಅಣಂತಗುಣಪಜ್ಜಯಪಯತ್ಥಂ ॥
ಜಾಣಇ ಪಸ್ಸಇ ಜುಗವಂ ಣವಕೇವಳಳದ್ಧಿಸಂಪಣ್ಣೋ ॥ ೨೫೬ ॥

ತಸ್ಮಾತ್ತ್ರಿಕಾಲಗೋಚರಾನಂತಪರ್ಯಾಯಪದಾರ್ಥಮ್ ॥
ಜಾನಾತಿ ಪಶ್ಯತಿ ಯುಗಪನ್ನವಕೇವಲಲಬ್ಧಿಸಂಪನ್ನಃ ॥

ಅರ್ಥಃ—ಅದರಿಂದ ಒಂಭತ್ತು ಪ್ರಕಾರದ ಕೇವಲಲಬ್ಧಿಯ ಸ್ವಾಮಿಯಾದ ಜಿನೇಶ್ವರನು ಮೂರೂ ಕಾಲದೊಳಗಿನ ಅನಂತ ಪರ್ಯಾಯವುಳ್ಳ ಪದಾರ್ಥಗಳನ್ನು ಒಮ್ಮೆಲೇ ತಿಳಿಯುತ್ತಾನೆ. ಮತ್ತು ಅವುಗಳನ್ನು ನೋಡುತ್ತಾನೆ.

ದಾಣೇ ಳಾಹೇ ಭೋಏ ಪರಿಭೋಏ ವೀರಿಏ ಯ ಸಮ್ಮತ್ತೇ ॥
ಣವಕೇವಳಳದ್ಧೀಓ ದಂಸಣಣಾಣೇ ಚರಿತ್ತೇ ಯ ॥ ೫೨೭ ॥

ದಾನೇ ಲಾಭೇ ಭೋಗೇ ಪರಿಭೋಗೇ ವೀರ್ಯೇ ಚ ಸಮ್ಯಕ್ತ್ವೇ ॥
ನವಕೇವಲಲಬ್ಧಯೋ ದರ್ಶನಜ್ಞಾನಯೋಶ್ಚಾರಿತ್ರೇ ॥

ಅರ್ಥಃ—ದಾನ, ಲಾಭ, ಭೋಗ, ಉಪಭೋಗ, ವೀರ್ಯ, ಸಮ್ಯಕ್ತ್ವ, ದರ್ಶನ, ಜ್ಞಾನ, ಮತ್ತು ಚಾರಿತ್ರ ಇವು ಒಂಭತ್ತು ಲಬ್ಧಿಗಳು. ೧ ದಾನಾಂತರಾಯ ಕರ್ಮದ ನಾಶದಿಂದ ದಾನ (ಅನಂತ ಪ್ರಾಣಿಗಳ ಮೇಲೆ ಅನುಗ್ರಹ ಮಾಡುವಂಥ ಅಭಯ ದಾನ)ವೆಂಬ ಲಬ್ಧಿಯು ದೊರೆಯುತ್ತದೆ. ೨ ಲಾಭಾಂತರಾಯ ಕರ್ಮದ ಕ್ಷಯದಿಂದ ಲಾಭ (ಕೇವಲಿಯ ಶರೀರಕ್ಕೆ ಶಕ್ತಿಯನ್ನುಂಟು ಮಾಡುವ ಅತ್ಯಂತ ಶುಭವಾದ, ಸೂಕ್ಷ್ಮವಾದ ಅನಂತ ಪುದ್ಗಲಗಳು ಪ್ರತಿಸಮಯದಲ್ಲಿ ಸಂಬಂಧವಾಗುವದಕ್ಕೆ ಲಾಭ)ವೆಂಬ ಲಬ್ಧಿಯು ದೊರೆಯುತ್ತದೆ. ೩ ಭೋಗಾಂತರಾಯ ಕರ್ಮದ ನಾಶದಿಂದ ಭೋಗ (ಪುಷ್ಪವೃಷ್ಟಿ, ಗಂಧೋಧಕವೃಷ್ಟಿ ಮುಂತಾದವುಗಳು) ವೆಂಬ ಲಬ್ಧಿಯು ದೊರೆಯುತ್ತದೆ. ೪ ಉಪಭೋಗಾಂತರಾಯ

ಕರ್ಮದ ನಾಶದಿಂದ ಉಪಭೋಗ ( ಸಿಂಹಾಸನ, ಛತ್ರ, ಚಾಮರ ಇತ್ಯಾದಿ ) ವೆಂಬ ಲಬ್ಧಿಯು ಪ್ರಾಪ್ತವಾಗುತ್ತದೆ. ೫ ವೀರ್ಯಾಂತರಾಯ ಕರ್ಮದ ನಾಶ ದಿಂದ ವೀರ್ಯ ( ತಿಳಿಯುವ ಮತ್ತು ನೋಡುವ ಶಕ್ತಿ ) ವೆಂಬ ಲಬ್ಧಿಯು ಪ್ರಾಪ್ತವಾಗುತ್ತದೆ. ೬ ಸಪ್ತಪ್ರಕೃತಿಯ ನಾಶದಿಂದ ಸಮ್ಯಕ್ತ್ವಲಬ್ಧಿಯು ದೊರೆ ಯುತ್ತದೆ. ೭ ಇಪ್ಪತ್ತೈದು ಕಷಾಯುಗಳ ನಾಶದಿಂದ ಚಾರಿತ್ರಲಬ್ಧಿಯು ದೊರೆ ಯುತ್ತದೆ. ೮ ಕೇವಲದರ್ಶನಾವರಣ ಕರ್ಮದ ನಾಶದಿಂದ ದರ್ಶನಲಬ್ಧಿಯು ಆಗುತ್ತದೆ. ೯ ಕೇವಲಜ್ಞಾನಾವರಣ ಕರ್ಮದ ನಾಶದಿಂದ ಜ್ಞಾನಲಬ್ಧಿಯು ಪ್ರಾಪ್ತವಾಗುತ್ತದೆ. ಈ ಗುಣಗಳು ಕೇವಲೀ ಜಿನಪತಿಗೆ ೧೩ನೆಯ ಗುಣಸ್ಥಾನದಲ್ಲಿ ಪ್ರಾಪ್ತವಾಗುತ್ತವೆ.

ಉಕ್ಕಸ್ಸಂ ಚ ಜಹಣ್ಣಂ ಪಜ್ಜಾಯಂ ವಿಹರಿಊಣ ಸಿಜ್ಝೇಈ ॥
ಸೋ ಅಕ್ಕಿಯಸಮುಗ್ಘಾಓ ಜಸ್ಸಾಉಸಮಾಣಿ ಕಮ್ಮಾಣಿ ॥ ೫೨೮ ॥
ಜಸ್ಸ ಣ ಹು ಆಉಸರಿಸಾಣಿ ಣಾಮಗೋಯಾಣಿ ವೇಯಣೀಯಂ ಚ ॥
ಸೋ ಕುಣದಿ ಸಮುಗ್ಘಾಯಂ ಣಿಯಮೇಣ ಜಿಣೋ ಣ ಸಂದಹೋ ॥೫೨೯

ಉತ್ಕೃಷ್ಟಂ ಚ ಜಘನ್ಯಂ ಪರ್ಯಾಯಂ ವಿಹೃತ್ಯ ಸಿದ್ಧ್ಯತಿ ॥
ಸೋಕೃತಸಮುದ್ಘಾತೋ ಯಸ್ಯಾಯು:ಸಮಾನಿ ಕರ್ಮಾಣಿ ॥
ಯಸ್ಯ ನ ಖಲ್ವಾಯುಃಸದೃಶಾನಿ ನಾಮಗೋತ್ರಾಣಿ ವೇದನೀಯಂ ಚ ॥
ಸ ಕರೋತಿ ಸಮುದ್ಘಾತಂ ನಿಯಮೇನ ಜಿನೋ ನ ಸಂದೇಹ: ॥

ಅರ್ಥಃ—ಯಾವನ ಆಯುಃಕರ್ಮದಷ್ಟು ಉಳಿದ ಕರ್ಮಗಳ ಸ್ಥಿತಿ ಇರುತ್ತ ದೆಯೋ, ಆ ಕೇವಲೀ ಜಿನಪತಿಯು ಸಮುದ್ಘಾತದ ಹೊರ್ತು ಉತ್ಕೃಷ್ಟ, ಜಘನ್ಯ ಪರ್ಯಾಯಗಳನ್ನು ಪೂರ್ಣಮಾಡಿ ಸಿದ್ಧನಾಗುತ್ತಾನೆ. ಮತ್ತು ಯಾವನ ಆಯು: ಕರ್ಮದಷ್ಟು ನಾಮ, ಗೋತ್ರ ಮತ್ತು ವೇದನೀಯಕರ್ಮದ ಸ್ಥಿತಿಯು ಇರುವದಿ ಲ್ಲವೋ ಅಂದರೆ ಹೆಚ್ಚಿರುತ್ತದೆಯೋ ಆ ಜಿನಕೇವಲಿಯು ನಿಯಮದಿಂದ ಸಮುದ್ಘಾತ ಮಾಡುತ್ತಾನೆ. ಇದರಲ್ಲಿ ಸಂದೇಹವಿಲ್ಲ.

ಛಮ್ಮಾಸಾಉಗಸೇಸೇ ಉಪ್ಪಣ್ಣಂ ಜಸ್ಸ ಕೇವಳಂ ಣಾಣಂ ॥
ಸೋ ಕುಣಇ ಸಮುಗ್ಘಾಯಂ ಇದರೋ ಪುಣ ಹೋಇ ವಾ ಭಣಿಜೋ ॥

ಷಣ್ಮಾಸಾಯು:ಶೇಷೇ ಉತ್ಪನ್ನಂ ಯಸ್ಯ ಕೇವಲಂ ಜ್ಞಾನಮ್ ॥
ಸ ಕರೋತಿ ಸಮುದ್ಘಾತಮಿತರಾ: ಪುನರ್ಭವತಿ ವಾ ಭಣಿತಃ ॥

ಅರ್ಥ:—ಆರು ತಿಂಗಳು ಆಯುಷ್ಯವು ಉಳಿದ ಸಮಯಕ್ಕೆ ಯಾವನಿಗೆ ಕೇವಲ ಜ್ಞಾನವುಂಟಾಗುತ್ತದೆಯೋ, ಆ ಕೇವಲಿಯು ಸಮುದ್ಘಾತ ಮಾಡುತ್ತಾನೆ. ಆರು ತಿಂಗಳುಗಳಿಂತ ಹೆಚ್ಚು ಆಯುಷ್ಯವು ಉಳಿದಂಥ ಕೇವಲಿಯು ಸಮುದ್ಘಾತ ಮಾಡುತ್ತಾನೆ ಅಥವಾ ಮಾಡುವದಿಲ್ಲ ಎಂಬ ನಿಯಮವಿಲ್ಲ.

ಅಂತೋಮುಹುತ್ತಸೇಸಾಉಗಮ್ಮಿ ದಂಡಂ ಕವಾಡಪಯರಂ ಚ ॥
ಜಯಪೂರಣಮಥ ಕವಾಡ ದಂಡಂ ಣಿಯತಣುಪಮಾಣಂ ಚ ॥೫೩೧॥

ಅಂತರ್ಮುಹೂರ್ತಶೇಷಾಯುಷಿ ದಂಡಂ ಕಪಾಟಪ್ರತರಂ ಚ ॥
ಜಗತ್ಪೂರಣಮಥ ಕಪಾಟಂ ದಂಡಂ ನಿಜತನುಪ್ರಮಾಣಂ ಚ ॥

ಅರ್ಥ:—ಯಾವಾಗ್ಗೆ ಆಯು:ಕರ್ಮ ಅಂತರ್ಮುಹೂರ್ತ ಮಾತ್ರ ಉಳಿದಿರುತ್ತದೆಯೋ, ಮತ್ತು ಗೋತ್ರ ಹಾಗು ನಾಮಕರ್ಮದ ಸ್ಥಿತಿಯು ಹೆಚ್ಚು ಇರುತ್ತದೆಯೋ, ಆಗ್ಗೆ ಅವುಗಳ ಸ್ಥಿತಿಯನ್ನು ಆಯು:ಕರ್ಮಕ್ಕೆ ಸರಿಹೋಲಿಸುವಬಗ್ಗೆ ಸಮುದ್ಘಾತ ಮಾಡುವ ಕೇವಲಿಯು ತನ್ನ ಆತ್ಮಪ್ರದೇಶವನ್ನು ೧೪ ರಜ್ಜು ಎತ್ತರವಾಗಿ ದಂಡಾಕಾರದಂತೆ ಮಾಡುತ್ತಾನೆ. ಎರಡನೇ ಸಮಯದಲ್ಲಿ ಕಪಾಟದ ಆಕೃತಿಯಂತೆ ಮಾಡುತ್ತಾನೆ. ೩ ನೇ ಸಮಯದಲ್ಲಿ ಪ್ರತರಾಕಾರ (ಸರಿಯಾದ ಉದ್ದಗಲತೆ) ಮಾಡುತ್ತಾನೆ. ೪ ನೇ ಸಮಯದಲ್ಲಿ ಲೋಕಪೂರಣ (ಸಮಸ್ತ ಲೋಕಾಕಾಶಾಯದಲ್ಲಿ ತುಂಬುವಂತೆ) ಮಾಡುತ್ತಾನೆ. ೫ ನೇದರಲ್ಲಿ ಪುನ: ಪ್ರತರಾಕಾರ ಮಾಡುತ್ತಾನೆ. ೬ ನೇದರಲ್ಲಿ ಕಪಾಟಾಕಾರ ಮಾಡುತ್ತಾನೆ. ೭ ನೇ ಕಾಲದಲ್ಲಿ ದಂಡಾಕಾರನಾಗುತ್ತಾನೆ. ಕಡೆಗೆ ೮ ನೇದರಲ್ಲಿ ತನ್ನ ದೇಹದಲ್ಲಿ ಪ್ರವೇಶಮಾಡುತ್ತಾನೆ.

ಏವಂ ಪಏಸಪಸರಣಸಂವರಣಂ ಕುಣಇ ಅಠ್ಠಸಮಯೇಹಿಂ ॥
ಹೋಹಿಂತಿ ಜೋಯಜರಮೋ ಅಘಾಇಕಮ್ಮಾಣಿ ಸರಿಮಾಣಿ ॥ ೫೩೨ ॥

ಏವಂ ಪ್ರದೇಶಪ್ರಸರಣಸಂವರಣಂ ಕರೋತ್ಯಷ್ಟಸಮಯೈ: ॥
ಭವಂತಿ ಯೋಗಚರಮೇ ಅಘಾತಿಕರ್ಮಾಣಿ ಸಮಾನಾನಿ ॥

ಅರ್ಥ:—ಈ ಪ್ರಕಾರ ಆ ಸಮುದ್ಘಾತ ಮಾಡುವ ಕೇವಲಿಯು ಎಂಟೂ ಕಾಲದಲ್ಲಿ ಆತ್ಮದ ಪ್ರದೇಶವನ್ನು ವಿಸ್ತಾರವಾಗಲಿ, ಸಂಕೋಚವಾಗಲಿ ಮಾಡಿ ೧೩ ನೆಯ ಗುಣಸ್ಥಾನದ ಕಡೆಯಲ್ಲಿ ಉಳಿದ ಮೂರು ಅಘಾತಿಕರ್ಮದ ಸ್ಥಿತಿಯನ್ನು ಸರಿಯಾಗಿ ಮಾಡುತ್ತಾನೆ.

ವಾಯರಮಣವಚಜೋಗೇ ರುಂಭಇ ತೋ ಥೂಳಕಾಯಜೋಗೇಣ ॥
ಸುಹುಮೇಣ ತಂ ಪಿ ರುಂಭಇ ತೋ ಸುಹುಮೇ ಮಣವಯಣಜೋಗೇ ಯ ॥
ತಾ ಸುಹುಮಕಾಯಜೋಗೇ ವೇಯಂತೋ ಝಾಯಏ ತಇಯ ಸುಕ್ಕಂ ॥
ರುಂಭಿತ್ತಾ ತಂ ಪಿ ಪುಣೋ ಅಜೋಗಕೇವಳಿಜಿಣೋ ಹೋಇ ॥ ೫೩೪ ॥

ಬಾದರಮನೋವಚನಯೋಗೌ ರುಂಧಯತಿ ತತ: ಸ್ಥೂಲಕಾಯಯೋಗೇನ ॥
ಸೂಕ್ಷ್ಮೇಣ ತಮಪಿ ರುಂಧಯತಿ ಸೂಕ್ಷ್ಮೌ ಮನೋವಚನಯೋಗೌ ಚ ॥
ತದಾ ಸೂಕ್ಷ್ಮಕಾಯಯೋಗಂ ವೇದಯನ್ ಧ್ಯಾಯತಿ ತೃತೀಯಂ ಶುಕ್ಲಮ್ ॥
ರುಂಧಯಿತ್ವಾ ತಮಪಿ ಪುನರಯೋಗಕೇವಲಿಜಿನೋ ಭವತಿ ॥

ಅರ್ಥ:—ಅನಂತರ ಸ್ಥೂಲಕಾಯದ ಯೋಗದಿಂದ ಸ್ಥೂಲಮನೋಯೋಗ ಮತ್ತು ಸ್ಥೂಲವಚನಯೋಗ ಇವುಗಳ ನಿರೋಧ ಮಾಡುತ್ತಾನೆ. ಸೂಕ್ಷ್ಮಕಾಯದ ಯೋಗದಿಂದ ಸ್ಥೂಲಕಾಯಯೋಗ ಮತ್ತು ಸೂಕ್ಷ್ಮಮನೋವಚನಯೋಗಗಳ ನಿರೋಧ ಮಾಡುತ್ತಾನೆ. ಆಗ್ಗೆ ಸೂಕ್ಷ್ಮಕಾಯಯೋಗವನ್ನು ಅನುಭವಿಸುವ ಆ ಕೇವಲಿಯು ೩ನೇ ಶುಕ್ಲಧ್ಯಾನ ಮಾಡಿ, ಅದರ ಯೋಗದಿಂದ ಸೂಕ್ಷ್ಮಕಾಯ ಯೋಗದ ನಿರೋಧ ಮಾಡಿ, ಅಯೋಗಕೇವಲಿ ಅಂದರೆ ೧೪ ನೆಯ ಗುಣಸ್ಥಾನದ ಅಧಿಕಾರಿಯಾಗುತ್ತಾನೆ.

ವಾವತ್ತರಿಪಯಡೀಓ ಚಉತ್ಥಸುಕ್ಕೇಣ ತತ್ಥ ಘಾಏಇ ॥
ದುಚರಮಸಮಯಮ್ಮಿ ತಓ ತೇರಸ ಚರಮಮ್ಮಿ ಣಿಟ್ಠವಇ ॥ ೫೩೫ ॥
ತೋತಮ್ಮಿ ಚೇವ ಸಮಯೇ ಲೋಯಗ್ಗೇ ಉಡ್ಢಗಮಣಸಬ್ಭಾಓ ॥
ಸಂಚಿಟ್ಠಇ ಅಸರೀರೋ ಪವರಟ್ಠಗುಣಮಓ ಣಿಚ್ಚಂ ॥ ೫೩೬ ॥

ದ್ವಾಸಪ್ತತಿಪ್ರಕೃತೀಶ್ಚತುರ್ಥಶುಕ್ಲೇನ ತತ್ರ ಘಾತಯತಿ ॥
ದ್ವಿತೀಯಸಮಯೇ ತತಸ್ತ್ರಯೋದಶ ಚರಮೇ ಕ್ಷಪಯತಿ ॥
ತಸ್ಮಿನ್ನೇವ ಸಮಯೇ ಲೋಕಾಗ್ರೇ ಊರ್ಧ್ವಗಮನಸ್ವಭಾವಾತ್ ॥
ಸಂತಿಷ್ಠತೇಶರೀರಃ ಪ್ರವರಾಷ್ಟಗುಣಮಯೋ ನಿತ್ಯಮ್ ॥

ಅರ್ಥ:—ಆ ೧೪ ನೇ ಗುಣಸ್ಥಾನದಲ್ಲಿ ಮೊದಲನೇಸಾರೆ ೪ ನೇ ಶುಕ್ಲ ಧ್ಯಾನದ ಯೋಗದಿಂದ ೭೨ ಪ್ರಕೃತಿಗಳನ್ನು ನಾಶಮಾಡುತ್ತಾನೆ. ಎರಡನೇ ಸಮಯ ದಲ್ಲಿ ಉಳಿದ ೧೩ ಪ್ರಕೃತಿಗಳನ್ನು ನಾಶಮಾಡುತ್ತಾನೆ. ಕೂಡಲೆ ತನ್ನ ಊರ್ಧ್ವಗಮ ನದ ಸ್ವಭಾವದಿಂದ ಲೋಕಾಗ್ರದಲ್ಲಿ ದೇಹರಹಿತನಾಗಿ ಉತ್ಕೃಷ್ಟವಾದ ಎಂಟು ಗುಣಗಳಿಂದ ಯುಕ್ತನಾಗಿ ಶಾಸ್ವತವಾಸಮಾಡುತ್ತಾನೆ.

ಸಮ್ಮತ್ತಣಾಣದಂಸಣವೀರಿಯಸುಹಮಂ ತಹೇವ ಅವಗಹಣಂ ॥
ಅಗುರುಲಹುಮವ್ವಾಬಾಹಂ ಸಿದ್ಧಾಣಂ ವಣ್ಣಿಯಾ ಗುಣಟ್ಠೇದೇ ॥ ೫೩೭

ಸಮ್ಯಕ್ತ್ವಜ್ಞಾನದರ್ಶನವೀರ್ಯಸೂಕ್ಷ್ಮತ್ವಂ ತಥೈವಾವಗಹನಮ್ ॥
ಅಗುರುಲಘುತ್ವಮವ್ಯಾಬಾಧತ್ವಂ ಸಿದ್ಧಾನಾಂ ವರ್ಣಿತಾ ಗುಣಾ ಅಷ್ಟೈತೇ ॥

ಅರ್ಥ:—೧ ಸಮ್ಯಕ್ತ್ವ, ೨ ಜ್ಞಾನ, ೩ ದರ್ಶನ, ೪ ವೀರ್ಯ, ೫ ಸೂಕ್ಷ್ಮತ್ವ, ೬ ಅವಗಹನ, ೭ ಅಗುರುಲಘುತ್ವ, ೮ ಅವ್ಯಾಬಾಧತ್ವ ಹೀಗೆ ಸಿದ್ಧರ ಎಂಟು ಗುಣ ಗಳು ವರ್ಣಿಸಲ್ಪಟ್ಟಿವೆ.

ಮೋಹಕ್ಖಯೇಣ ಸಮ್ಮಂ ಕೇವಳಣಾಣಂ ಹಣೇಇ ಅಣ್ಣಾಣಂ ॥
ಕೇವಳದಂಸಣ ದಂಸಣ ಅಣಂತವೀರಿಯಂ ಚಾಂತರಾಯೇಣ ॥ ೫೩೮ ॥

ಸುಹುಮಂ ಚ ಣಾಮುಕಮ್ಮಂ ಆಊಹಣಾಣೇಣ ಹವಇ ಅವಗಹಣಂ ॥
ಗೋಯಂ ಚ ಅಗುರುಳಹುಯಂ ಅವ್ವಾಬಾಹಂ ಚ ವೇಯಣೀಯಂ ಚ ॥

ಮೋಹಕ್ಷಯೇಣ ಸಮ್ಯಕ್ತ್ವಂ ಕೇವಲಜ್ಞಾನಂ ಹಂತ್ಯಜ್ಞಾನವ್ ॥
ಕೇವಲದರ್ಶನಂ ದರ್ಶನವುನಂತವೀರ್ಯಂ ಚಾಂತರಾಯೇಣ ॥
ಸೂಕ್ಷ್ಮಂ ಚ ನಾಮುಕರ್ಮ ಆಯುಹನನೇನ ಭವತ್ಯವಗಹನಂ ॥
ಗೋತ್ರಂ ಚಾಗುರುಲಘುತ್ವಮವ್ಯಾಬಾಧತ್ವಂ ಚ ವೇದನೀಯಂ ಚ ॥

ಅರ್ಥ:—ಮೋಹನೀಯಕರ್ಮದ ನಾಶದಿಂದ ಸಮ್ಯಕ್ತ್ವವೆಂಬ ಮೊದಲನೆಯ ಗುಣವು ಪ್ರಾಪ್ತವಾಗುತ್ತದೆ. ಜ್ಞಾನಾವರಣೀಯಕರ್ಮದ ನಾಶದಿಂದ ಜ್ಞಾನವೆಂಬ ೨ನೇ ಗುಣವು ಪ್ರಾಪ್ತವಾಗುತ್ತದೆ. ದರ್ಶನಾವರಣೀಯ ಕರ್ಮದ ನಾಶದಿಂದ ದರ್ಶನವೆಂಬ ಗುಣವು ಉಂಟಾಗುತ್ತದೆ. ಅಂತರಾಯಕರ್ಮದ ನಾಶದಿಂದ ಅನಂತ ವೀರ್ಯವೆಂಬ ಗುಣವು ಪ್ರಕಟವಾಗುತ್ತದೆ. ನಾಮುಕರ್ಮದ ನಾಶದಿಂದ ಸೂಕ್ಷ್ಮತ್ವ ಗುಣವು ಪ್ರಕಟವಾಗುತ್ತದೆ. ಆಯು:ಕರ್ಮದ ನಾಶದಿಂದ ಅವಗಹನ ಗುಣವು ಪ್ರಕಟವಾಗುತ್ತದೆ. ಗೋತ್ರಕರ್ಮದ ನಾಶದಿಂದ ಅಗುರುಲಘುತ್ವವೆಂಬ ೭ ನೇ ಗುಣವು ಪ್ರಾಪ್ತವಾಗುತ್ತದೆ. ವೇದನೀಯಕರ್ಮದ ನಾಶದಿಂದ ಅವ್ಯಾಬಾಧತ್ವವೆಂಬ ೮ನೇ ಗುಣವು ಪ್ರಾಪ್ತವಾಗುತ್ತದೆ. ಈ ಪ್ರಕಾರ ಎಂಟು ಕರ್ಮಗಳ ನಾಶದಿಂದ ಆತ್ಮದ ಎಂಟು ಗುಣಗಳು ಪ್ರಕಟವಾಗುತ್ತವೆ. ನಿಶ್ಚಯನಯದಿಂದ ಸಿದ್ಧಾತ್ಮನ ಗುಣಗಳು ಅನಂತ ಇರುತ್ತವೆ.

## ಸಿದ್ಧರ ಸುಖವು.

ಜಂ ಕಿಂ ಪಿ ಸೋಖ್ಖಸಾರಂ ತಿಸ್ಸು ವಿ ಲೋಯೇಸು ಮಣುಯದೇವಾಣಂ ॥
ತಮಣಂತಗುಣಂ ಪ ಣ ಏಯಸಮಯಸಿದ್ಧಾಣುಭೂಯಸೋಖ್ಖಸಮಂ ॥

ಯತ್ಕಿಮಪಿ ಸೌಖ್ಯಸಾರಂ ತ್ರಿಷ್ವಪಿ ಲೋಕೇಷು ಮನುಜದೇವಾನಾಂ ॥
ತದನಂತಗುಣಮಪಿ ನೈಕಸಮಯಸಿದ್ಧಾನುಭೂತಸೌಖ್ಯಸಮಮ್ ॥

ಅರ್ಥ:— ಮೂರೂ ಲೋಕದಲ್ಲಿ ದೇವ ಮತ್ತು ಮನುಷ್ಯರಿಗೆ ಇರುವ ಉತ್ತಮವಾದ ಸೌಖ್ಯದ ಅನಂತಮಡಿ ಸುಖವಾದರೂ ಒಂದು ಸಮಯದಲ್ಲಿ ಅನುಭವಿಸಿದ ಸಿದ್ಧನ ಸುಖಕ್ಕೆ ಸರಿಯಾಗುವದಿಲ್ಲ.

## ಶ್ರಾವಕಾಚಾರವನ್ನಾಚರಿಸುವ ಫಲವು.

ಸಿಜ್ಝಇ ತಇಯಮ್ಮಿ ಭವೇ ಪಂಚಮಏ ಕೋ ವಿ ಸತ್ತಮಟ್ಠಮಏ ॥
ಭುಂಜಿವಿ ಸುರಮಣುಯಸುಹಂ ಪಾವೇಇ ಕಮೇಣ ಸಿದ್ಧಪಯಂ ॥೫೪೧॥

ಸಿಧ್ಯತಿ ತೃತೀಯಭವೇ ಪಂಚಮಕೇ ಕೋಪಿ ಸಪ್ತಮಾಷ್ಟಮಕೇ ॥
ಭುಂಕ್ತ್ವಾ ಸುರಮನುಜಸುಖಂ ಪ್ರಾಪ್ನೋತಿ ಕ್ರಮೇಣ ಸಿದ್ಧಪದವ್ ॥

ಅರ್ಥಃ—ಶ್ರಾವಕಾಚಾರವನ್ನು ಉತ್ತಮ ರೀತಿಯಿಂದ ಪಾಲಿಸುವ ಗೃಹಸ್ಥನು ಮೂರನೇ ಜನ್ಮದಲ್ಲಿ ಮುಕ್ತನಾಗುತ್ತಾನೆ. ಯಾರು ೫ನೇ ಜನ್ಮದಲ್ಲಿ ಯಾರು ೭ನೇ ಅಥವಾ ೮ನೇ ಜನ್ಮಗಳಲ್ಲಿ ಕ್ರಮದಿಂದ ದೇವಲೋಕದ ಮತ್ತು ಮನುಷ್ಯ ಲೋಕದ ಸುಖವನ್ನು ಭೋಗಿಸಿ ಮುಕ್ತರಾಗುತ್ತಾರೆ.

## ಗುರುಪರಂಪರೆಯ ವಿಮರ್ಶೆ.

ಆಸೀ ಸಸಮಯಪರಸಮಯವಿದೂ ಸಿರಿಕುಂದಕುಂದಸಂತಾಣೇ ॥
ಭವ್ವಯಣಕುಮುಯವಣಸಿಸಿರಯರೋ ಸಿರಿಣಂದಿ ಣಾಮೇಣ ॥ ೫೪ ॥

ಆಸೀತ್ಸ್ವಸಮಯಪರಸಮಯವೇತ್ತಾ ಶ್ರೀಕುಂದಕುಂದಸಂತಾನೇ ॥
ಭವ್ಯಜನಕುಮುದವನಶಿಶಿರಕರಃ ಶ್ರೀನಂದೀ ನಾಮ್ನಾ ॥

ಅರ್ಥ:—ಶ್ರೀಕುಂದಕುಂದಮುನಿಯ ವಂಶದಲ್ಲಿ ಸ್ವಮತವನ್ನೂ ಪರಮತ ವನ್ನೂ ತಿಳಿಯುವಂಥ, ಮತ್ತು ಭವ್ಯಜನವೆಂಬ ಕಮಲವನವನ್ನು ಪ್ರಫುಲ್ಲಿತ ಮಾಡು ವಂಥ ಚಂದ್ರನೋಪಾದಿ ಶ್ರೀನಂದಿಯೆಂಬ ಪ್ರಸಿದ್ಧನಾದ ಯತಿ ಇದ್ದನು.

## ಸ್ರಗ್ಧರಾ.

ಕಿತ್ತೀ ಜಸ್ಸೇಂದುಸುಬ್ಭಾ ಸಯಳಭುವಣಮಜ್ಝೇ ಜಹೇತ್ಥಂ ಭಮಿತ್ತಾ ॥
ಣಿಚ್ಚಂ ಸಾ ಸಜ್ಜಣಾಣಂ ಹಿಯಯವಯಣಸೋಏ ಣಿವಾಸಂ ಕರೇಇ
ಜೋ ಸಿದ್ಧಂತಂಬುರಾಸಿಂ ಸುಣಯತರಣಮಾಸೇಜ್ಜ ಲೀಲಾವತಿಣ್ಣೋ ॥
ವಣ್ಣೇಉಂ ಕೋ ಸಮತ್ಥೋ ಸಯಳಗುಣಗಣಂ ಸೇವಿಯಂತೋ ವಿ ಳೋಏ

ಕೀರ್ತಿರ್ಯಸ್ಯೇಂದುಶುಭ್ರಾ ಸಕಲಭುವನಮಧ್ಯೇ ಯಥೇಷ್ಟಂ ಭ್ರಮಿತ್ವಾ ॥
ನಿತ್ಯಂ ಸಾ ಸಜ್ಜನಾನಾಂ ಹೃದಯವಚನಶ್ರೋತ್ರೇ ನಿವಾಸಂ ಕರೋತಿ ॥
ಯಃ ಸಿದ್ಧಾಂತಾಂಬುರಾಶಿಂ ಸುನಯತರಣಮಾಸಾದ್ಯ ಲೀಲಾವತೀರ್ಣಃ ॥
ವರ್ಣಿತುಂ ಕ: ಸಮರ್ಥಃ ಸಕಲಗುಣಗಣಂ ಸೇವಯನ್ನಪಿ ಲೋಕೇ ॥

ಅರ್ಥ:—ಚಂದ್ರನಂತಿರುವ ನಿರ್ಮಲವಾದ ಯಾವನ ಕೀರ್ತಿಯು ಎಲ್ಲ ಜಗ ತ್ತಿನಲ್ಲಿ ಯಥೇಚ್ಛವಾಗಿ ತಿರುಗಿ, ಸಜ್ಜನರ ಹೃದಯದಲ್ಲಿಯೂ ವಚನದಲ್ಲಿಯೂ ಕರ್ಣರಂಧ್ರದಲ್ಲಿಯೂ ಯಾವಾಗಲೂ ವಾಸಮಾಡುತ್ತದೆಯೋ, ಮತ್ತು ಯಾವನು ಉತ್ತಮವಾದ ನಯರೂಪಿಯೆಂಬ ಹಡಗದಲ್ಲಿ ಕೂತುಕೊಂಡು ಸಿದ್ಧಾಂತವೆಂಬ ಸಮುದ್ರದೊಳಗಿಂದ ಸಹಜವಾಗಿ ಪಾರಾಗಿರುವನೋ, ಅಂಥ ಶ್ರೀನಂದೀ ಮುನಿಯ ವರ್ಣನೆ ಮಾಡಲಿಕ್ಕೆ ಸಕಲಗುಣಗಳಿಂದ ಯುಕ್ತನಾಗಲಿಕ್ಕೆ ಯಾವನು ಶಕ್ತನಾ ದಾನು? ಯಾವನೂ ಆಗಲಿಕ್ಕಿಲ್ಲ.

## ಶಾರ್ದೂಲ ವಿಕ್ರೀಡಿತ.

ಸಿಸ್ಸೋ ತಸ್ಸ ಜಿಣಿಂದಸಾಸಣರಓ ಸಿದ್ಧಾಂತಪಾರಂಗಓ ॥
ಖಂತೀಮದ್ದವಲಾಹವಾಇದಸಹಾಧಮ್ಮಮ್ಮಿ ಣಿಚ್ಚೋಜ್ಜಓ
ಪುಣ್ಣೇಂದುಜ್ಜಲಕಿತ್ತಿಪೂರಿಯಜಓ ಚಾರಿತ್ತಲಚ್ಛೀಹರೋ ॥
ಸಂಜಾಓ ಣಯಣಂದಿಣಾಮ ಮುಣಿಣೋ ಭವ್ವಾಸಯಾಣಂದಓ ॥ ೫೪೪ ॥

ಶಿಷ್ಯಸ್ತಸ್ಯ ಜಿನೇಂದ್ರಶಾಸನರತಃ ಸಿದ್ಧಾಂತಪಾರಂಗತಃ ॥
ಕ್ಷಾಂತಿಮಾರ್ದವಲಾಘವಾದಿದಶಧಾಧರ್ಮೇ ನಿತ್ಯೋದ್ಯತಃ ॥
ಪೂರ್ಣೇಂದೂಜ್ವಲಕೀರ್ತಿಪೂರಿತಜಗಚ್ಚಾರಿತ್ರಲಕ್ಷ್ಮೀಧರಃ ॥
ಸಂಜಾತೋ ನಯನಂದಿನಾಮಮುನಿಪೋ ಭವ್ಯಾಶಯಾನಂದದಃ ॥

ಅರ್ಥ:—ಶ್ರೀನಂದಿಮುನಿಯ ಶಿಷ್ಯನೂ ಜಿನಶಾಸನದಲ್ಲಿ ರತನೂ, ಸಿದ್ಧಾಂತ ಶಾಸ್ತ್ರವನ್ನು ತಿಳಿದವನೂ, ದಶವಿಧ ಧರ್ಮವನ್ನು ಪಾಲಿಸುವವನೂ, ಹುಣ್ಣಿಮೆಯ ಚಂದ್ರನಂತೆ ನಿರ್ಮಲವಾದ ತನ್ನ ಕೀರ್ತಿಯನ್ನು ಜಗತ್ತಿನಲ್ಲಿ ಪಸರಿಸಿದವನೂ, ಚಾರಿತ್ರನೆಂಬ ಲಕ್ಷ್ಮಿಯನ್ನು ಧಾರಣಮಾಡಿದವನೂ, ಭವ್ಯ ಜನರ ಚಿತ್ತಕ್ಕೆ ಆನಂದವನ್ನು ಕೊಡುವವನೂ ಆದ ನಯನಂದಿ ಎಂಬವನಿದ್ದನು.

## ಗಾಥಾ.

ಸಿಸ್ಸೋ ತಸ್ಸ ಜಿಣಾಗಮಜಲಣಿಹಿವೇಲಾತರಂಗಧುಯಮಾಣೋ ॥
ಸಂಜಾಓ ಸಯಲಜಏವಿಖ್ಖಾಓ ಣೇಮಿಚಂದುತ್ತಿ ॥ ೫೪೫ ॥
ತಸ್ಸ ಪಸಾಏಣ ಮಏ ಆಯರಿಯಪರಂಪರಾಗಯಂ ಏಯಂ ॥
ವಚ್ಛಲ್ಲಾಯರರಇಯಂ ಭವಿಯಾಣಮುವಾಸಯಜ್ಝಯಣಂ ॥ ೫೪೬ ॥

ಶಿಷ್ಯಸ್ತಸ್ಯ ಜಿನಾಗಮಜಲನಿಧಿವೇಲಾತರಂಗಧೂಯಮಾನಃ ॥
ಸಂಜಾತಃ ಸಕಲಜಗದ್ವಿಖ್ಯಾತೋ ನೇಮಿಚಂದ್ರ ಇತಿ ॥
ತಸ್ಯ ಪ್ರಸಾದೇನ ಮಯಾ ಆಚಾರ್ಯಪರಂಪರಾಗತಮೇತತ್ ॥
ವಾತ್ಸಲ್ಯಾದರರಚಿತಂ ಭವ್ಯಾನಾಮುಪಾಸಕಾಧ್ಯಯನಮ್ ॥

ಅರ್ಥ—ಆ ನಯನಂದಿಗೆ ಜಿನಾಗಮವೆಂಬ ಸಮುದ್ರದ ತೆರೆಗಳಿಂದ ಸ್ವಚ್ಛವಾದಂಥವನೂ ಸರ್ವಜಗತ್ತಿನಲ್ಲಿ ಪ್ರಸಿದ್ಧನಾದವನೂ ಆದ ಶ್ರೀನೇಮಿಚಂದ್ರನೆಂಬ ಶಿಷ್ಯನಿದ್ದನು. ಅವನಪ್ರಸಾದದಿಂದ ಈ ಆಚಾರ್ಯಪರಂಪರೆಯಿಂದ ನಡೆದು ಬಂದ ಉಪಾಸಕಾಧ್ಯಯನ ಶಾಸ್ತ್ರವನ್ನು ನಾನು ಪ್ರೇಮದಿಂದಲೂ ಆದರದಿಂದಲೂ ಭವ್ಯಜನರಿಗೋಸ್ಕರ ರಚಿಸಿದ್ದೇನೆ.

ಜಂ ಕಿಂ ಪಿ ಏತ್ಥ ಭಣಿಯಂ ಅಯಾಣಮಾಣೇಣ ಪವಯಣವಿರುದ್ಧಂ ॥
ಖಮಿಊಣ ಪವಯಣಾಣೂ ಸೋಹಿತ್ತಾ ತಂ ಪಯಾಸಂತು ॥ ೫೪೭ ॥

ಯತ್ಕಿಮಪ್ಯತ್ರ ಭಣಿತಮಜ್ಞಾಯಮಾನೇನ ಪ್ರವಚನವಿರುದ್ಧಮ್ ॥
ಕ್ಷಮಯಿತ್ವಾ ಪ್ರವಚನಜ್ಞಾನಿನಃ ಶೋಧಯಿತ್ವಾ ತತ್ಪ್ರಕಾಶಯಂತು ॥

ಅರ್ಥ:--ಈ ಗ್ರಂಥದಲ್ಲಿ ನನ್ನ ಅಜ್ಞಾನದಿಂದ ನಾನು ಆಗಮವಿರುದ್ಧವಾಗಿ ಏನಾದರೂ ಹೇಳಿದ್ದರೆ, ಅದರಗೋಸ್ಕರ ಜಿನಾಗಮವನ್ನು ತಿಳಿದಂಥವರು ಕ್ಷಮೆ ಮಾಡಲಿ, ಅದನ್ನು ಶುದ್ಧಮಾಡಿ, ಪ್ರಕಾಶಪಡಿಸಲಿ.

* ಛಕ್ಕಸಯಾ ಪಣ್ಣಾಸುತ್ತರಾಣಿ ಏಯಸ್ಸ ಗಂಥಪರಿಮಾಣಂ ॥
ವಸುಣಂದಿಣಾ ಣಿಬದ್ಧಂ ವಿರಿಯತ್ಥವ್ವಂ ವಿಯಟ್ಟೇಹಿಂ ॥ ೫೪೮ ॥

ಷಟ್‌ಶತಾನಿ ಪಂಚಾಶದುತ್ತರಾಣ್ಯೇತಸ್ಯ ಗ್ರಂಥಪರಿಮಾಣಮ್ ॥
ವಸುನಂದಿನಾ ನಿಬದ್ಧಂ ವಿಸ್ತರಿತವ್ಯಂ ವಿದ್ವದ್ಭಿಃ ॥

ಅರ್ಥ:--ಆರುನೂರಾ ಐವತ್ತು ಶ್ಲೋಕಗಳ (೩೨ ಅಕ್ಷರಗಳ ಶ್ಲೋಕ) ಈ ಉಪಾಸಕಾಧ್ಯಯನವೆಂಬ ಗ್ರಂಥವನ್ನು ವಸುನಂದಿ ಆಚಾರ್ಯನು ರಚಿಸಿದ್ದಾನೆ. ಇದನ್ನು ವಿದ್ವಾಂಸರು ಪ್ರಸಿದ್ಧಮಾಡಲಿ.

( ಭದ್ರಂ ಭೂಯಾದ್ವಾಚಕಾನಾಮ್ )

---

* ಈ ಶ್ಲೋಕದ ಮೇಲಿಂದ ಕಂಡುಬರುವದೇನಂದರೆ, ಈ ಗ್ರಂಥದಲ್ಲಿ (೬೫೦) ಶ್ಲೋಕುಗಳು ಇರಬೇಕು. ಆದರೆ ಇದರಲ್ಲಿ (೫೪೮) ಶ್ಲೋಕುಗಳೇ ಮಾತ್ರ ಉಂಟು. ಅಂದ ಮೇಲೆ ಇದರಲ್ಲಿ ಇನ್ನೂ (೧೦೨) ಶ್ಲೋಕುಗಳು ಇರಬೇಕಾಗಿದೆ. ಈ ಶ್ಲೋಕುಗಳು ಯಾರಿಗಾದರೂ ದೊರಕಿದಲ್ಲಿ ನಮ್ಮ ಕಡೆಗೆ ಕಳುಹಿಸಿ ಕೊಟ್ಟರೆ ಅವುಗಳನ್ನು ನಾವು ಅತ್ಯಾದರದಿಂದ ಮುದ್ರಿಸಿ ಪ್ರಕಾಶಪಡಿಸುತ್ತೇವೆ. ೩೨ ಅಕ್ಷರಗಳಿಗೆ ಒಂದು ಶ್ಲೋಕವೆಂತ ತಿಳಿದರೆ ೬೫೦ ಶ್ಲೋಕಗಳು ಆಗಬಹುದು.

ಪ್ರಕಾಶಕ.



